" Literature is one of the arts which recreates the consciousness and the conscience of a period. It tells what has happened to man, what could happen, what man has imagined might happen to him. It presents the environments, the patterns of destiny, the joys and sorrows, the tribulations, the dreams, the fantasies, the aspirations, the cruelties, the shames, the hopes of men and women. Life is full of mysteries, and one of the major mysteries of life is man himself. "

"JAMES T. FARRELL" in "MY DAYS OF ANGER"

# ದೀಪಾರಾಧನೆ

(ಕಾದಂಬರಿ)

Mr. K. Srinivas Rao.
Sundar Cafe Boarding House.

ಅ. ನ. ಕೃ




ಅಶೋಕ ಸಾಹಿತ್ಯ
ಬೆಂಗಳೂರು–2

# ಮುನ್ನುಡಿ

ಹದಿನೈದು ವರ್ಷಗಳ ಹಿಂದೆ ನಾನು ಆರಂಭಿಸಿದ 'ಸಾಹಿತ್ಯರತ್ನ' ಕಾದಂಬರಿಮಾಲೆ, ಈಗ 'ದೀಪಾರಾಧನೆ'ಯೊಂದಿಗೆ ಮುಗಿದಿದೆ. ಈ ಒಂದೂವರೆ ದಶಕಗಳು ನಮ್ಮ ನಾಡಿನ ಇತಿಹಾಸದ ದೃಷ್ಟಿಯಿಂದ ಮಹತ್ವವಾದುದೆಂದು ನಾವು ಪರಿಗಣಿಸಬೇಕು. ೧೯೪೨ರ ಮಹಾಕ್ರಾಂತಿ ಅದೇ ಮುಗಿದಿದ್ದರೂ ಅದರ ಪ್ರಭಾವ ಇನ್ನೂ ಪ್ರಜ್ವಲಿಸುತ್ತಿತ್ತು. ಐದುವರ್ಷಗಳ ತರುವಾಯ ನಮ್ಮ ಕನಸು ನನಸಾಯಿತು. ಸ್ವಾತಂತ್ರ್ಯ ನಮಗೆ ನೂತನ ರಾಜಕೀಯದೃಷ್ಟಿಯನ್ನು ಕಲ್ಪಿಸಿದುದಲ್ಲದೆ ನಮ್ಮ ಸಾಂಸ್ಕೃತಿಕ ಜೀವನವನ್ನೇ ಪುನರ್ವಿಮರ್ಶೆಗೊಳಗಾಗಿಸಿತು.

ಕನ್ನಡನಾಡಿನಲ್ಲಿ ಸ್ವಾತಂತ್ರ್ಯಕಹಳೆಯನ್ನು ಮೊಟ್ಟಮೊದಲಿಗೆ ಊದಿದವನು ಸರ್ವಜ್ಞ. ಅವನ ತರುವಾಯ ೧೮೨೪ರಲ್ಲಿ ಕಿತ್ತೂರುರಾಣಿ ಚೆನ್ನಮ್ಮ ಏಕೈಕವೀರಳಾಗಿ ನಡೆಸಿದ ಸ್ವಾತಂತ್ರ್ಯಸಂಗ್ರಾಮ ಸ್ವರ್ಣಾಕ್ಷರಗಳಲ್ಲಿ ಉಲ್ಲಿಖಿತವಾಗಲು ಅರ್ಹವಾಗಿದೆ. ಚೆನ್ನಮ್ಮರಾಣಿಯ ಪ್ರೋಜ್ವಲಪ್ರಯತ್ನ ಸಮಕಾಲೀನ ಸಾಹಿತ್ಯದ ಮೇಲೆ ವಿಶೇಷ ಪ್ರಭಾವಬೀರಿದುದಲ್ಲದೆ ವೀರರಸಪ್ರಧಾನವಾದ ಜನಪದಸಾಹಿತ್ಯರಚನೆಗೆ ಇಂಬುಗೊಟ್ಟಿತು. ಈ ಪರಂಪರೆಯನ್ನು ೧೯೧೫ರಲ್ಲಿ ಶಾಂತಕವಿಗಳು (ಬಾಳಾಚಾರ್ಯ ಸಕ್ಕರಿ) ಮುಂದುವರಿಸಿದರು. ಶಾಂತಕವಿಗಳ ಮೇಲ್ಪಂಕ್ತಿಯನ್ನು ಮುದವೀಡು ಕೃಷ್ಣರಾಯರು ಅನುಸರಿಸಿದರೂ ಹೆಚ್ಚಿನ ಕವಿಗಳು ರಾಷ್ಟ್ರೀಯ ಸಾಹಿತ್ಯದ ಬಗ್ಗೆ ವಿಮುಖರಾಗಿದ್ದುದು ದುರ್ದೈವ. ಗಾಂಧೀಯುಗ ಆರಂಭವಾಗಿ ಸ್ವಾತಂತ್ರಸಿದ್ಧಿಸುವವರೆಗೆ (೧೯೨೧-೧೯೪೭) ಕನ್ನಡದಲ್ಲಿ ಪ್ರಭಾವಶಾಲಿಯಾದ ರಾಷ್ಟ್ರೀಯಸಾಹಿತ್ಯ ಬೆಳೆಯಲಿಲ್ಲ. ಈ ಬಗ್ಗೆ ಸೋದರ ಪ್ರಾಂತ್ಯಗಳು ಹೆಚ್ಚಿನ ಕೃಷಿಮಾಡಿರುವುದು ಗಮನಾರ್ಹವಾಗಿದೆ.

ಕನ್ನಡದಲ್ಲಿ ರಾಷ್ಟ್ರೀಯ ಸಾಹಿತ್ಯ ಬೆಳೆಯಲಿಲ್ಲವೆಂಬ ಕಾರಣದಿಂದ, ರಾಷ್ಟ್ರೀಯತೆಯೂ ಬೆಳೆಯಲಿಲ್ಲ ಎಂದು ತರ್ಕಿಸುವುದು ಸತ್ಯಕ್ಕೆ ದೂರವಾದ ಮಾತಾಗುತ್ತದೆ. ಸ್ವಾತಂತ್ರ್ಯಸಂಗ್ರಾಮದ ಪ್ರತಿಯೊಂದು ಅವತರಣಿಕೆ

ಯಲ್ಲಿಯೂ ಕನ್ನಡನಾಡು ಪ್ರಧಾನಪಾತ್ರವಹಿಸಿ ಸಾಮ್ರಾಜ್ಯಶಾಹಿಯ ವಿರುದ್ಧ ವೀರನಿಷ್ಠೆಯಿಂದ ಹೋರಾಡಿದೆ. ಉತ್ತರ ಕರ್ನಾಟಕದಲ್ಲಿ ಕಡಪಾ ರಾಘವೇಂದ್ರರಾಯರು, ಮಂಗಳೂರು ಕರ್ನಾಟಕದಲ್ಲಿ ಕಾರ್ನಾಡು ಸದಾಶಿವರಾಯರು, ಮೈಸೂರಿನಲ್ಲಿ ತಾತಯ್ಯನವರು (ಎಂ. ವೆಂಕಟಕೃಷ್ಣಯ್ಯ) ಮತ್ತು ಜಸ್ಟಿಸ್ ಎಸ್. ಎಸ್. ಸೆಟ್ಲೂರ್ ಅವರು ರಾಷ್ಟ್ರೀಯ ಭಾವನೆಯ ವಿಕಾಸಕ್ಕೆ ಎಸಗಿರುವ ಸೇವೆ ಚಿರಸ್ಮರಣೀಯವಾಗಿದೆ.

ಸ್ವಾತಂತ್ರ್ಯಕಲ್ಪನೆ ಪರೋಕ್ಷವಾಗಿ ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಮೂಡಿತು. ಕೀರ್ತಿಶೇಷ ಮುಮ್ಮಡಿ ಕೃಷ್ಣರಾಜವೊಡೆಯರವರು ಮತ್ತು ಕೀರ್ತಿಶೇಷ ಚಾಮರಾಜವೊಡೆಯರವರ ಪ್ರಯತ್ನದಿಂದ ಸಂಸ್ಕೃತದ ಅಸ್ತಿಭಾರದ ಮೇಲೆ ಕಟ್ಟಲ್ಪಟ್ಟ ಕನ್ನಡಸಾಹಿತ್ಯಸೌಧವೊಂದು ನಿರ್ಮಿತವಾಯಿತು. ನಂಜನಗೂಡು ಸುಬ್ಬಾಶಾಸ್ತ್ರಿಗಳು, ಗರಣಿ ಕೃಷ್ಣಾಚಾರ್ಯರು, ಬಸಪ್ಪಶಾಸ್ತ್ರಿಗಳು, ಅಯ್ಯಾಶಾಸ್ತ್ರಿಗಳು, ಕರಿಬಸವಶಾಸ್ತ್ರಿಗಳು ಸಂಸ್ಕೃತ ಕಾವ್ಯ, ನಾಟಕಗಳನ್ನು ಕನ್ನಡಿಸಿದರು. ಸಂಸ್ಕೃತದ ಜಾಡುಹಿಡಿಯದೆ ಸ್ವತಂತ್ರವಾಗಿ ಕನ್ನಡಸಾಹಿತ್ಯ ಬೆಳೆಯಬಹುದೆಂಬುದನ್ನು ಎಂ. ಎಸ್. ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಾರಾಯ' ಕಾದಂಬರಿಯಲ್ಲಿ ಸಿದ್ಧಮಾಡಿಕೊಟ್ಟರು. ಇಂಗ್ಲಿಷ್ ಸಾಹಿತ್ಯದ ಪ್ರಭಾವಕ್ಕೆ ಒಳಗಾದರೂ ಕನ್ನಡ ತನ್ನ ಜಾಯಮಾನ, ನುಡಿಕಟ್ಟು, ಪಡಿನುಡಿಗಳನ್ನು ಅನುಸರಿಸಿ ಸ್ವತಂತ್ರವಾಗಿ ಬಾಳಬಹುದೆಂಬುದನ್ನು ಬಿ. ಎಂ. ಶ್ರೀಕಂಠಯ್ಯನವರೂ, ಟಿ. ಪಿ. ಕೈಲಾಸಂ ಅವರೂ ತೋರಿಸಿಕೊಟ್ಟರು. ಎಂ. ಎಸ್. ಪುಟ್ಟಣ್ಣನವರು ಆರಂಭಿಸಿದ ಕನ್ನಡಸಾಹಿತ್ಯ ಪರಂಪರೆಯನ್ನು ಬೆಳಸಿ ನಾನಾ ಪ್ರಕಾರಗಳಲ್ಲಿ ದುಡಿದು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ, ಎ. ಆರ್. ಕೃಷ್ಣಶಾಸ್ತ್ರಿಗಳೂ ಭೂಮಿಯನ್ನು ಹಸನುಮಾಡಿದರು.

೧೯೧೫ ರಿಂದ ೧೯೪೫ರವರೆಗೆ ಕನ್ನಡಸಾಹಿತ್ಯ ಬಹುಮುಖವಾಗಿ ಬೆಳೆದರೂ ಅದು 'ಅಭಿಜಾತ ಸಾಹಿತ್ಯ'ವಾಗಿಯೇ ಉಳಿದುಕೊಂಡಿತು. ಕನ್ನಡ ಸಾಹಿತ್ಯ ಕೇವಲ ವಿದ್ಯಾವಂತರ, ಪಟ್ಟಣಿಗರ ಸಾಹಿತ್ಯವಾಗಿಯೇ ಬೆಳೆಯಿತು. ೧೯೪೫ರಲ್ಲಿ ಆರಂಭವಾದ **'ಪ್ರಗತಿಶೀಲ ಸಾಹಿತ್ಯ ಚಳುವಳಿ'** ಕನ್ನಡ ಸಾಹಿತ್ಯಕ್ಕೆ ಸಾರ್ವಜನಿಕಮುಖವೊಂದನ್ನು ಕಲ್ಪಿಸಿದುದಲ್ಲದೆ, ಸಾಮಾನ್ಯ

ಜನರಲ್ಲಿ ಓದುವ ಅಭಿರುಚಿಯನ್ನೂ ಹುಟ್ಟಿಸಿತು. ಹತ್ತು ವರ್ಷಗಳ ತರುವಾಯ ೧೯೫೩ರಲ್ಲಿ—'ವಾಹಿನಿ ಪ್ರಕಾಶನ'ದವರು ಸುಲಭಬೆಲೆಯ ಕೈ ಹೊತ್ತಿಗೆ ಆರಂಭಿಸಿದಮೇಲೆ ಸಾಹಿತ್ಯ ಸಾರ್ವಜನಿಕ ಜೀವನದ ಒಂದು ಅವಶ್ಯಾಂಗವಾಗಿ ಮಾರ್ಪಟ್ಟಿತು. ಒಂದು ಸಾವಿರ ಪ್ರತಿಗಳ ಕಾಲಮುಗಿದು, ಎಂಟು ಹತ್ತು ಸಾವಿರ ಪ್ರತಿಗಳ ಕಾಲ ಆರಂಭವಾಯಿತು; ಕನ್ನಡ ಗ್ರಂಥಗಳನ್ನು ಓದುವವರ ಸಂಖ್ಯೆ ಹತ್ತು ಸಾವಿರದಿಂದ ಒಂದು ಲಕ್ಷದವರೆಗೇರಿತು.

ಕನ್ನಡಸಾಹಿತ್ಯಲೋಕದಲ್ಲಿ ಈ ಮಹಾಕ್ರಾಂತಿಯನ್ನೆಸಗಿದ ಕೀರ್ತಿ ಸಂಪೂರ್ಣವಾಗಿ ಕಾದಂಬರಿಗೆ ಸೇರಬೇಕು. ಕಾದಂಬರಿ ಬರೆಯುವವರು ಓದುವವರ ಸಂಖ್ಯೆ ಅಪರಿಮಿತವಾಗಿ ಬೆಳೆಯಿತು.

೧೯೧೫ರಿಂದಾದ ಕನ್ನಡಸಾಹಿತ್ಯ ವಿಕಾಸವನ್ನು ನಾನು 'ಸಾಹಿತ್ಯರತ್ನ' (೧೯೪೩)–'**ಗಾಜಿನ ಮನೆ**'(೧೯೫೩–೫೫)—'**ಕನ್ನಡಮ್ಮನ ಗುಡಿಯಲ್ಲಿ**' (೧೯೫೫)—'**ದೀಪಾರಾಧನೆ**' (೧೯೫೫) — ಈ ನಾಲ್ಕು ಕಾದಂಬರಿಗಳಲ್ಲಿ ಕೂಲಂಕಷವಾಗಿ ವಿವೇಚಿಸಿದ್ದೇನೆ. ಈ ಅವಧಿಯಲ್ಲಿ ಕನ್ನಡ ನಾಡು, ಸಾಹಿತ್ಯ, ಪತ್ರಿಕೋದ್ಯಮದ ಮೇಲೆ ಬಂದೆರಗಿದ ಭಾವಪ್ರಭಾವಗಳನ್ನೂ ಚರ್ಚಿಸಿದ್ದೇನೆ. ೧೯೪೭ರ ತರುವಾಯ ಬೆಳೆದ ಕನ್ನಡ ಸಾಹಿತ್ಯದಲ್ಲಿ ಮೂಡಿದ ಎರಡು ಲಕ್ಷಣಗಳನ್ನೂ ನಾವು ಗಮನಿಸಬೇಕು.

೧) ನಾಡನಾಯಕರು ನಮ್ಮ ಸ್ವಾತಂತ್ರ್ಯವನ್ನು ರೂಢಿಸುತ್ತಿದ್ದ ಬಗೆಗೆ ಹುಟ್ಟಿದ ತಾತ್ಸಾರ. ಸ್ವಾತಂತ್ರ್ಯದೊರೆತು ಭಾರತಕ್ಕೆ ಅನ್ಯಾಯವಾಯಿತು—ಭಾರತೀಯರು ಮತ್ತಷ್ಟು ಬವಣೆಗೊಳಗಾಗುವಂತಾಯಿತು ಎಂಬ ಅಭಿಪ್ರಾಯ.

೨) ರಾಷ್ಟ್ರೀಯತೆ ನಿರರ್ಥಕ–ಕಮ್ಯುನಿಸ್ಟ್ ರಷ್ಯಾದ ಮೇಲ್ಪಂಕ್ತಿಯನ್ನನುಸರಿಸಿ ಭಾರತ ರಷ್ಯಾಮಾದರಿಯ 'ಸರ್ವಸಮಾನತೆ' (?) ಯನ್ನು ಸಾಧಿಸಬೇಕೆಂಬ ಭಾವನೆ. ರಷ್ಯಾದ ಕಮ್ಯುನಿಸಮ್ಮನ್ನು ಭಾರತಕ್ಕೆ ಆಮದು ಮಾಡಬೇಕೆನ್ನುವವರ ತಂಡ ಹುಟ್ಟಿಕೊಂಡಂತೆ ಅಮೇರಿಕಾದ ಡಾಲರಿಸಮ್ಮನ್ನು ಆಮದು ಮಾಡಬೇಕೆನ್ನುವವರ ತಂಡವೂ ಹುಟ್ಟಿಕೊಂಡಿತು. ಈ ಉಭಯ ಪಕ್ಷಗಳನ್ನು ಸಮರ್ಥಿಸುವುದಕ್ಕೆ ಕೆಲವು ಕನ್ನಡ ಪತ್ರಿಕೆಗಳು ಕಂಕಣ ತೊಟ್ಟವು.

ಈ ಎರಡು ವಾದಗಳು, ಅವುಗಳ ಅನುಸರಣೆ ಭಾರತಸ್ವಾತಂತ್ರ್ಯಕ್ಕೇ ಕಂಟಕಪ್ರಾಯವಾಗುತ್ತವೆಂಬುದು ನನ್ನ ಅಭಿಮತ. ಭಾರತವನ್ನು—ಭಾರತೀಯರನ್ನು ರಷ್ಯದವರಾಗಲಿ ಅಮೆರಿಕಾದವರಾಗಲಿ ಉದ್ಧರಿಸಲು ಶಕ್ಯವಿಲ್ಲ. ಭಾರತದಲ್ಲಿಯೇ ಹುಟ್ಟಿ ಬೆಳೆಯದಿರುವ ಸಾಮಾಜಿಕ, ರಾಜಕೀಯ, ಸಾಹಿತ್ಯಿಕ ವಿಚಾರಗಳ ಅಂಧಾನುಕರಣೆಯಿಂದ ನಾವು ಮತ್ತೆ ಪರದಾಸ್ಯದಲ್ಲಿ ಬೀಳುತ್ತೇವೆ—ಎಂಬ ತತ್ತ್ವವನ್ನು ನನ್ನ ನಾಲ್ಕು ಕಾದಂಬರಿಗಳಲ್ಲಿಯೂ ಪ್ರತಿಪಾದಿಸಲು ಪ್ರಯತ್ನಿಸಿದ್ದೇನೆ.

'ದೀಪಾರಾಧನೆ'ಯನ್ನು ನಾನು ಬೇಗ ಬರೆದು ಮುಗಿಸಲು ಕಾರಣರಾದವರು ಅಶೋಕಸಾಹಿತ್ಯಮಾಲೆಯ ಒಡೆಯರಾದ ಶ್ರೀ ಜಿ. ವಿ. ವೆಂಕಣ್ಣನವರು. ನನ್ನ ಸಾಹಿತ್ಯಸೇವೆಗೆ ಹಲವು ಬಗೆಯಲ್ಲಿ ನೆರವಾಗಿ, ಅದರ ಪ್ರಗತಿಯ ಬಗ್ಗೆ ನಿರಂತರಾಸಕ್ತಿ ವಹಿಸಿರುವ ಶ್ರೀ ಜಿ. ವಿ. ವೆಂಕಣ್ಣನವರಿಗೂ, ಸ್ಟ್ಯಾಂಡರ್ಡ್ ಬುಕ್ ಡಿಪೋ ಮಾಲೀಕರಾದ ಶ್ರೀ ಎಚ್. ಕಮಲಾನಾಥ್ ಅವರಿಗೂ, ಮುದ್ರಣದ ಅಚ್ಚುಕಟ್ಟಿನ ಬಗ್ಗೆ ವಿಶೇಷ ಶ್ರಮವಹಿಸಿರುವ ಚೇತನಾ ಪ್ರಿಂಟರ್ಸ್ ಒಡೆಯರಾದ ಶ್ರೀ ಎಚ್. ಎಸ್. ಸುಬ್ಬರಾಯರಿಗೂ ಹೃತ್ಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇನೆ.

ಬೆಂಗಳೂರು—೪
೨೧—೭—೧೯೫೫

ಅ. ನ. ಕೃ




# ದೀಪಾರಾಧನೆ

## ೧

ಮೂರ್ತಿಯನ್ನು ಕಾಣಲು ಬಂದ ಸುತರಾಮಯ್ಯನನ್ನು ಸ್ವಾಗತಿಸಿ ಲಲಿತ

"ಸ್ವಲ್ಪ ಕುಳಿತುಕೊಳ್ಳಿ—ಇನ್ನೇನು ಅವರು ಏಳುವ ಹೊತ್ತು" ಎಂದಳು.

"ಇನ್ನೂ ಮಲಗಿರುವರೇ ?"

"ನಿಮಗೆ ಅರ್ಜೆಂಟ್ ಕೆಲಸವಿರುವುದಾದರೆ ಈಗಲೇ ಎಬ್ಬಿಸುತ್ತೇನೆ."

"ಬೇಡಿ—ಏಳಲಿ"

ಎಂದು ಸುತರಾಮಯ್ಯ ವೆರಾಂಡದಲ್ಲಿ ಕುಳಿತು ಅಂದಿನ 'ಯುಗವಾಣಿ' ಯನ್ನೋದಲಾರಂಭಿಸಿದ.

ಸುತರಾಮಯ್ಯನ ಹೆಸರು ವಿಚಿತ್ರವಾಗಿದ್ದಂತೆ ಐತಿಹ್ಯಪೂರ್ಣವಾಗಿಯೂ ಇತ್ತು. ಅವನ ಪೂರ್ತಿ ಹೆಸರೂ ಸುಂಕೇನಹಳ್ಳಿ ತಮ್ಮಯ್ಯನವರ ಮಗ ರಾಮಯ್ಯ. ಪ್ರಥಮಾಕ್ಷರಗಳ ಸಂಯೋಗದಿಂದ ಅವನ ಹೆಸರು ಸುತರಾಮಯ್ಯ ಆಗಿದ್ದುದಲ್ಲದೆ ಅವನು ತನ್ನ ಲೇಖನಗಳಲ್ಲಿ 'ಸುತರಾಂ' ಶಬ್ದವನ್ನು ವಿಶೇಷವಾಗಿ ಬಳಸುತ್ತಿದ್ದುದೂ ಕಾರಣವಾಗಿತ್ತು. ಸುತರಾಮನ ಆಪ್ತಮಿತ್ರ ತಿಮ್ಮಣ್ಣ ಇದನ್ನು ಪತ್ತೆ ಹಚ್ಚಿ ಅವನಿಗೆ 'ಸುತರಾಮಯ್ಯ' ಎಂದು ನಾಮಕರಣಮಾಡಿದ್ದ.

ಮೂರ್ತಿ ಹಾಸಿಗೆಬಿಟ್ಟು ಏಳುವ ಲಕ್ಷಣವೇ ಕಾಣದಿರಲು, ಲಲಿತ ಒಂದು ಕಪ್ ಬಿಸಿ ಕಾಫಿ ಹಿಡಿದು ಅವನ ಹಾಸಿಗೆಯ ಬಳಿಗೆ ಬಂದು

"ಏಳಿ ದೊರೆ—ಬೆಳಗಾಯಿತು" ಎಂದಳು.

ಮೂರ್ತಿ ಮೈಕೈ ಮುರಿಯುತ್ತಾ

"ಬೆಳಗಾಯಿತೇ ?" ಎಂದ.

"ಕಣ್ಣು ಬಿಟ್ಟು ನೋಡಿ."

"ಏಕೆ ಬೆಳಗಾಯಿತು ?"

"ನಿಮಗೇನು ಅರೆನಿದ್ದೆಯೋ ಅರೆಮರುಳೋ ?"

"ಕಾಫಿಯಾಯಿತೇ ?"

"ಇಗೋ—ವೆಯಿಟ್ರೆಸ್ (Waitress) ಕಾಫಿ ಹಿಡಿದು ನಿಂತಿದ್ದಾಳೆ

"ಹಾಗೇ ಬಾಯಿಗೆ ಬಸಿದುಬಿಡು."

"ಏಳ್ರೀ ಸಾಕು"

ಎಂದು ಲಲಿತ ಬಲವಾಗಿ ಅಲುಗಾಡಿಸಿ, ಅವನ ರಗ್ ಎಳೆದು ಎ
ಸಿದಳು. ಮೂರ್ತಿ ಎದ್ದು ಆಕಳಿಸುತ್ತಲೇ ಕಾಫಿ ಕುಡಿದು

"ನೀನು ಮುಂದಿನ ಜನ್ಮದಲ್ಲಿ ಖಂಡಿತವಾಗಿ ತಗಣೆಯಾಗಿ ಹುಟ್ಟುತ್ತಿ
ಲಲಿತ. ಇಂಥ ನಿದ್ರೆ ಕೆಡಿಸುವವರನ್ನು ದೇವರು ಖಂಡಿತವಾಗಿ ಶಿಕ್ಷಿಸುತ್ತಾನೆ

"ಮುಂದಿನ ಜನ್ಮದ ಮಾತು ಹಾಗಿರಲಿ—ನಿಮಗೆ ಈ ಜನ್ಮದಲ್ಲಿಯೆ
ಈಗಲೇ ಶಿಕ್ಷೆ ಕಾದಿದೆ—ಏಳಿ."

"ಯಾರು ಬಂದಿದ್ದಾರೆ ?"

"ನಿಮ್ಮ ಪಟ್ಟ ಶಿಷ್ಯ—ಸುತರಾಮಯ್ಯ."

ಮೂರ್ತಿ ಜಗ್ಗನೆದ್ದು ಮುಖ ತೊಳೆದುಕೊಂಡು ವೆರಾಂಡಹಲ್ಲಿ ಕುಳಿತ
ಸುತರಾಮಯ್ಯನನ್ನು ಒಳಕ್ಕೆ ಕರೆದು ತನ್ನ ವ್ಯಾಸಂಗಕೋಣೆಯಲ್ಲಿ ಕುಳಿ
ಸಿಗರೇಟ್ ಹಚ್ಚಿದ. ಮೂರ್ತಿ ಕೆಳಗಿಟ್ಟ ಸಿಗರೇಟ್ ಪೆಟ್ಟಿಗೆಯಿಂ
ಸುತರಾಮಯ್ಯನೂ ಸಿಗರೇಟ್ ಎಳೆದುಕೊಂಡು ಹಚ್ಚಿದ.

"ನೀವು ಬಂದು ಬಹಳ ಹೊತ್ತಾಯಿತೇ ಸುತರಾಮಯ್ಯನವರೇ ?"

"ಇಲ್ಲ—ಅರ್ಧಗಂಟೆಯಾಗಿರಬಹುದು."

"ರಾತ್ರಿ ಮಲಗುವುದಕ್ಕೆ ತಡವಾಯಿತು."

"ಬರೆಯುತ್ತಿದ್ದಿರಾ ಸರ್."

"ಹೂ."

"ಕಾದಂಬರಿಯೇ ?"

"ಹೌದು."

"ಯಾವದು ?"

**"ತಾಯಿದೇವಿ"**

"ಬಹಳ ಜನ ಈ ಕಾದಂಬರಿಯ ಹಾದಿ ನೋಡುತ್ತಿದ್ದಾರೆ ಸರ್. ಇದು ನಿಮ್ಮ ಮ್ಯಾಗ್ನಮ್ ಓಪಸ್ (Magnum opus — ಮಹಾಕೃತಿ) ಆಗಬೇಕು."

"ಬರೆಯುವ ಕೆಲಸ ನಮ್ಮದು—ನನ್ನ ಕೃತಿ ಮ್ಯಾಗ್ನಮ್ ಓಪಸ್ ಆಗುತ್ತದೆಯೋ ಪಾಟ್ ಬಾಯಿಲರ್ (Pot Boiler—ಹೊಟ್ಟೆಪಾಡಿಗಾಗಿ ರಚಿತವಾಗುವ ಕೃತಿ) ಆಗುತ್ತದೆಯೋ ಹೇಗೆ ಹೇಳಲಿ."

"ಹುನಗುಂದ ಈಗಲೇ ಕತ್ತಿ ಮಸೆಯುತ್ತಿರಬಹುದು."

"........................"

ಲಲಿತಮ್ಮ ಇಬ್ಬರಿಗೂ ಕಾಫಿ ತಂದುಕೊಟ್ಟಳು. ಮೂರ್ತಿ ಕಾಫಿ ಬಟ್ಟಲಿನ ಕಡೆ ಕೈತೋರಿಸಿ

"ಕಾಫಿ ತೆಗೆದುಕೊಳ್ಳಿ" ಎಂದ.

ಸುತರಾಮಯ್ಯ ಕಾಫಿ ಕುಡಿದು ಮುಗಿಸಿ

"ಹುನಗುಂದನ ವಿಷಯ ಕೇಳಿದಿರಾ ಸರ್."

"ಆತ ಮುಂಬಯಿಗೆ ಹೋದ ಎಂದು ಕೇಳಿದ್ದೆ."

"ಮುಂಬಯಿಗೆ ಹೋದದ್ದೂ ಆಯಿತು-ಬಂದದ್ದೂ ಆಯಿತು.—ಈಗ ಹುಬ್ಬಳ್ಳಿಯ ಪಾರ್ಟಿ ಆಫೀಸಿನಲ್ಲಿದ್ದಾನೆ."

"ಅವನ ಜತೆ ಹೋದ ಜಾನಕಿಯ ಗತಿಯೇನಾಯಿತು ಸುತರಾಮಯ್ಯ?"

"ಅವಳ ಗಂಡ ದೊರೆಸ್ವಾಮಿ ದೊಡ್ಡ ಮನಸ್ಸುಮಾಡಿ ಹಿಂದಕ್ಕೆ ಕರೆದುಕೊಂಡನಂತೆ!"

"ಇದನ್ನು ಕೇಳಿ ನನಗೆ ಸಂತೋಷವಾಗಿದೆ. ದೊರೆಸ್ವಾಮಿ ದೊಡ್ಡ ಜೀವವಿರಬೇಕು."

"ದೊರೆಸ್ವಾಮಿ ನಡತೆ ನೀವು ಮೆಚ್ಚಿಕೊಳ್ಳುತ್ತೀರಾ ಸರ್."

"ಏಕೆ ಮೆಚ್ಚಬಾರದು ?"

"ದಾರಿಬಿಟ್ಟು ಹೋದ ಹೆಣ್ಣನ್ನು ಮತ್ತೆ ಮನೆ ಸೇರಿಸುವುದೇ ?"

"ಒಮ್ಮೆ ಕಾಲುಜಾರಿ ಕೊಳಚೆಯಲ್ಲಿ ಬಿದ್ದ ಹೆಣ್ಣನ್ನು ಕೊಳಚೆಯಲ್ಲಿಯೇ ಹಾಕಿ ತುಳಿಯಬೇಕೆನ್ನುವಿರಾ ? ಪ್ರಮಾದವಶದಿಂದ ಆದ ತಪ್ಪಿಗೆ ಆ ಹೆಣ್ಣು ಜೀವಾವಧಿ ನರಕ ಅನುಭವಿಸಬೇಕೇ ?"

"ಇದೆಲ್ಲಾ ಕಾಮ್ರೇಡ್ ಗಣೇಶರ ಸಂಧಾನದ ಫಲವಂತೆ !"

"ಯಾವದು ? ಜಾನಕಿ ಹುನಗುಂದನ ಜತೆ ಹೋದುದೇ ?"

"ಅಲ್ಲ ಸರ್—ಆಕೆ ಪುನಃ ಗಂಡನನ್ನು ಕೂಡಿದುದು."

"ಗಣೇಶ್ ಒಳ್ಳೆಯ ಕೆಲಸ ಮಾಡಿದರು."

"ಅವರಿಗೇಕೆ ಸರ್—ಈ ಪಂಚಾಯಿತಿ."

"ಪಾರ್ಟಿಯ ಒಬ್ಬ ಕಾಮ್ರೇಡ್ ತಪ್ಪುಹಾದಿ ತುಳಿಯುತ್ತಿದ್ದರೆ ಅವನನ್ನು ತಿದ್ದಬೇಕಾದುದು ಗಣೇಶರಂಥ ಹಿರಿಯ ನಾಯಕರ ಕರ್ತವ್ಯವಲ್ಲವೇ ?"

ಸುತರಾಮಯ್ಯ ಇನ್ನೊಂದು ಸಿಗರೇಟ್ ಎಳೆದುಕೊಂಡು ಹಚ್ಚಿ

"ನನ್ನದು ಸ್ವಲ್ಪ ಕೆಲಸವಿತ್ತು—ಬಂದೆ."

"ಹೇಳಿ."

"ನಾನೊಂದು ಕಾದಂಬರಿ ಬರೆದಿದ್ದೇನೆ. '**ಬಯಲ-ಬಾಳು.**' ನಮ್ಮೂರಿನ ಕಡೆ ಲಂಬಾಣಿಗರ ತಂಡ ಬಹಳ. ಅವರ ಜೀವನ, ಸಂಸ್ಕೃತಿಯನ್ನೇ ಚಿತ್ರಿಸಿದ್ದೇನೆ. ಈಗ ಜಾಯ್ಸ್, ಡಾಸ್ ಪ್ಯಾಸೋಸ್, ಹೆಮಿಂಗ್ವೇ (Joyce, Dos Passos, Hemingway) ಉಪಯೋಗಿಸುವ ಆಧುನಿಕ ತಂತ್ರವನ್ನೇ ಉಪಯೋಗಿಸಿದ್ದೇನೆ. ಈ ಕಾದಂಬರಿ ಕನ್ನಡ ಕಾದಂಬರಿ ಪ್ರಪಂಚಕ್ಕೆ ಹೊಸಮಾರ್ಗ ನಿರ್ದೇಶಿಸುವುದೆಂದು ನಾನು ನಂಬಿದ್ದೇನೆ.—ನೀವು ನನ್ನ ಕಾದಂಬರಿಯನ್ನು ಓದಿನೋಡಬೇಕು ಸರ್."

ಎಂದು ಮೂರ್ತಿಯ ಕೈಗೆ ಒಂದು ಹಸ್ತಪ್ರತಿಯನ್ನಿತ್ತ.

ಮೂರ್ತಿ ಹಾಳೆ ತಿರುವಿಹಾಕಿ

"ಬಹಳ ಸಂತೋಷ. ಹೊಸ ಮಾರ್ಗಗಳ ಆವಿಷ್ಕಾರವಾಗದಿದ್ದರೆ ನಮ್ಮ ಸಾಹಿತ್ಯ ಬೆಳೆಯುವುದಿಲ್ಲ." ಎಂದ.

"ಕಾದಂಬರಿಯ ಹಸ್ತಪ್ರತಿ ಓದಿದ ನಾಗಪ್ಪ ನನ್ನನ್ನು 'ಕನ್ನಡದ ಜೋಲಾ' ಎಂದು ಕರೆದ ಸರ್."

ಮೂರ್ತಿ ನಸುನಕ್ಕು

"ನೀವು 'ಕನ್ನಡದ ಜೋಲಾ' ಆಗುವದರ ಬದಲು 'ಕನ್ನಡದ ರಾಮಯ್ಯ' ಆಗಬೇಕೆಂದು ನನ್ನ ಆಸೆ. ಹೊರಗಿನವರ ಹೆಸರು ಉಪಯೋಗಿಸಿಕೊಂಡೇಕೆ ನಾವು ಕೀರ್ತಿ ಬೆಳಸಿಕೊಳ್ಳಬೇಕು."

"ಹಸ್ತಪ್ರತಿ ಓದಿನೋಡಿ, ಬಂದು ಮುನ್ನುಡಿ ಬರೆದುಕೊಡಬೇಕು."

"ಹಸ್ತಪ್ರತಿ ಓದಿನೋಡುತ್ತೇನೆ—ಮುನ್ನುಡಿ ಬರೆಯುವ ವಿಷಯ ಮುಂದೆ ಯೋಚನೆ ಮಾಡೋಣ."

"ಪ್ರಕಟನೆಗೂ ನೀವೇ ಸಹಾಯ ಮಾಡಬೇಕು ಸರ್."

"ಪ್ರಯತ್ನಿಸುತ್ತೇನೆ."

"ನೀವು ಕೈತುಂಬ ಹಣಕೊಡಿಸಿದರೆ ನಾನು ಬೆಂಗಳೂರಿನಲ್ಲಿ ಸಂಸಾರ ಹೂಡಬೇಕೆಂದಿದ್ದೇನೆ."

"ನಿಮಗೆ ಮದುವೆಯಾಗಿದೆಯೇ ?"

"ಮೂರು ವರ್ಷದ ಹಿಂದೆಯೇ ನನ್ನ ತಲೆಗೊಂದು ಹಳ್ಳಿಹುಡುಗಿ ಕಟ್ಟಿಬಿಟ್ಟರು ಸರ್."

"ಸದ್ಗೃಹಿಣಿಯಾಗಿರುವುದಕ್ಕೆ ಹಳ್ಳಿಯ ಹುಡುಗಿಯಾದರೇನು, ಡಿಳ್ಳಿಯ ಹುಡುಗಿಯಾದರೇನು ?"

"ಅದೊಂದು ಶುದ್ಧ ಗುಗ್ಗು ಸರ್. ಸಾಹಿತಿಯ ಹೆಂಡತಿಯಾಗುವ ಯೋಗ್ಯತೆ ಅದಕ್ಕೆ ಸ್ವಲ್ಪವೂ ಇಲ್ಲ."

"ಸಾಹಿತಿಗಳ ಹೆಂಡತಿಯರನ್ನು ಸೃಷ್ಟಿಮಾಡಲು ಬ್ರಹ್ಮ ಬೇರೆ ಎರಕ ಮಿಾಸಲಾಗಿಟ್ಟಿರುವನೇ ಸುತರಾಮಯ್ಯ ?"

"ಹಾಗಲ್ಲ ಸರ್. ನನ್ನನ್ನು ಹೇಗೆ ಗೌರವಿಸಬೇಕು, ಹೇಗೆ ಆದರಿಸಬೇಕೆಂಬುದೇ ಅವಳಿಗೆ ಗೊತ್ತಿಲ್ಲ. ಜತೆಯಲ್ಲಿ ಅವಳನ್ನು ಸಿನೀಮಾಕ್ಕೆ ಪಾರ್ಕಿಗೆ ಕರೆದುಕೊಂಡು ಹೋಗಬೇಕೆಂದಾಸೆ. ಅವಳು ಎಲ್ಲದಕ್ಕೂ ನಕಾರ ಸೂಚಿಸುತ್ತಾಳೆ."

"ಪಟ್ಟಣದ ಜೀವನಕ್ಕೆ ಹೊಂದಿಕೊಳ್ಳುವುದು ಅವರಿಗೆ ಪ್ರಯಾಸವಾಗಿ ಕಂಡಿರಬಹುದು. ನೀವು ತಿದ್ದಿಕೊಂಡು ಸರಿಹೋಗಿಸಿಕೊಳ್ಳಬೇಕಪ್ಪಾ. ಎಳೆಯ ಮನಸ್ಸನ್ನು ಬೇಕಾದಂತೆ ರೂಪಿಸಿಕೊಳ್ಳುವುದು ನಿಮ್ಮ ಕೈಯ್ಯಲ್ಲಿದೆ."

"ನೀವು ಧೈರ್ಯ ಕೊಟ್ಟರೇ ನಾನಿಲ್ಲಿ ಮನೆಮಾಡುವುದು."

"ಹಸ್ತಪ್ರತಿ ಓದದೆ ನಾನು ಏನೂ ಹೇಳಲು ಸಾಧ್ಯವಿಲ್ಲ—ನಾಲ್ಕು ದಿನ ನನಗೆ ಕಾಲಾವಕಾಶ ಕೊಡಿ."

"ಹಾಗೇ ಆಗಲಿ ಸರ್. ನನ್ನ ಕೆಲಸ ಆದಷ್ಟು ಬೇಗ ಮಾಡಿಕೊಡಿ."

"ಸ್ವತಂತ್ರ ಸಂಸಾರ ಹೂಡಲಿರುವ ನೀವು ಸಾಹಿತ್ಯದ ಮೇಲೇ ಅವಲಂಬಿಸಬೇಕೆಂದಿರುವಿರಾ ?"

"ಅದೇ ನನ್ನ ಉದ್ದೇಶ."

"ಈ ಒಡಕು ದೋಣಿ ನಂಬಿ ಹೊಳೆಗಿಳಿಯುವುದು ತುಂಬ ಅಪಾಯಕರ. ನಿಮ್ಮ ತಂದೆಯವರಿಂದ ಸಹಾಯ ಸಿಕ್ಕಬಹುದೇ ?"

"ನನ್ನ ತಂದೆ ನಗದಿ ಗುಮಾಸ್ತರಾಗಿ ರಿಟೈರಾಗಿದ್ದಾರೆ ಸರ್. ನನ್ನ ತಾಯಿ ತೀರಿಕೊಂಡ ಮೇಲೆ ಆವರು ಎರಡನೆಯ ಲಗ್ನಮಾಡಿಕೊಂಡರು. ಈ ಹೆಂಡತಿಗೆ ಆರುಮಕ್ಕಳು—ನಾವು ಮೂವ್ವರು. ಅವರಿಂದ ಯಾವ ಸಹಾಯವನ್ನೂ ನಾನು ನಿರೀಕ್ಷಿಸಲು ಸಾಧ್ಯವಿಲ್ಲ."

"ಈಗ ನಿಮ್ಮ ಹೆಂಡತಿ ಎಲ್ಲಿದ್ದಾರೆ ?"

"ತೌರುಮನೆಯಲ್ಲಿದ್ದಾಳೆ."

"ಅವರ ತೌರುಮನೆಯವರು ಅನುಕೂಲಸ್ಥರೇ ?"

"ನಮಗಿಂತ ಅವರು ಬಡವರು."

"ಬೆಂಗಳೂರಿನಂಥ ಪಟ್ಟಣದಲ್ಲಿ ಸಂಸಾರಮಾಡುವುದು ಸುಲಭವಲ್ಲ ಸುತರಾಮಯ್ಯ. ಇಲ್ಲಿಗೆ ಬಂದು ಇಲ್ಲದ ಕಷ್ಟಕ್ಕೆ ನೀವು ಸಿಕ್ಕಿಹಾಕಿಕೊಳ್ಳಬಾರದೆಂದು ಮುನ್ನೆಚ್ಚರಿಕೆ ಕೊಡುತ್ತಿದ್ದೇನೆ. ಯಾವದಾದರೂ ಪತ್ರಿಕೆಯ ಕಛೇರಿಯಲ್ಲಿ ಕೆಲಸ ದೊರಕಿಸಿಕೊಳ್ಳಿ—ಸಾಹಿತ್ಯ ಗೌಣವಾಗಿರಲಿ. ತಿಂಗಳು ತಿಂಗಳಿನ ಮನೆಯ ಖರ್ಚಿಗೆ ಸರಿಯಾದ ವ್ಯವಸ್ಥೆಮಾಡಿಕೊಳ್ಳುವುದು ನಿಮ್ಮ ಮೊದಲನೆಯ ಕರ್ತವ್ಯ."

"ಹಾಗೇ ಆಗಲಿ ಸರ್–ಪ್ರಯತ್ನಿಸುತ್ತೇನೆ. ನಾನು ಪುನಃ ಯಾವಾಗ ಬರಲಿ ?"

"ನಾಲ್ಕುದಿನಸ ಬಿಟ್ಟು ಬನ್ನಿ."

ಮೇಲಕ್ಕಿದ್ದ ಸುತರಾಮಯ್ಯ ಮೂರ್ತಿಯ ಕಪಾಟಿನಲ್ಲಿದ್ದ ಪುಸ್ತಕಗಳನ್ನು ಕಂಡು ಆರು ಪುಸ್ತಕ ಆಯ್ದುಕೊಂಡು

"ಇವುಗಳನ್ನು ಓದಿಕೊಡುತ್ತೇನೆ ಸರ್" ಎಂದ.

"ತೆಗೆದುಕೊಂಡು ಹೋಗಿ. ದಯೆಯಿಟ್ಟು ಕಳೆಯಬೇಡಿ. ಪುಸ್ತಕಗಳು ನನ್ನವಲ್ಲ."

"ಓದಿ ತಂದುಕೊಡುತ್ತೇನೆ ಸರ್."

"ಹಾಗೇ ಮಾಡಿ"

ಎಂದು ಮೂರ್ತಿ ಸುತರಾಮಯ್ಯನನ್ನು ಬೀಳ್ಕೊಟ್ಟು ಅವನ ಹಸ್ತಪ್ರತಿಯನ್ನು ಓದುತ್ತ ಕುಳಿತ.

ಸದ್ದಿಲ್ಲದೆ ಒಳಕ್ಕೆ ಬಂದ ಲಲಿತಮ್ಮ ಮೂರ್ತಿಯನ್ನು ನೋಡಿ

"ಚೆನ್ನಾಯಿತು !" ಎಂದಳು.

ಹಸ್ತಪ್ರತಿಯ ಪಠನದಲ್ಲಿ ತಲ್ಲೀನನಾಗಿದ್ದ ಮೂರ್ತಿ ಅವಳನ್ನು ಗಮನಿಸಲಿಲ್ಲ.

"ನಿಮಗೇನು ಮಾಡುವುದಕ್ಕೆ ಕೆಲಸವಿಲ್ಲವೋ ?"

"ಏಕೆ ಲಲಿತಾ ?"

"'ತಾಯಿದೇವಿ' ಕೈಬಿಟ್ಟು 'ಬಯಲಬಾಳು' ಬೆನ್ನುಹತ್ತಿದಿರಾ ?—ನಿಮ್ಮದೇ ಹೊರೆ ಹೊರೆ ಕೆಲಸವಿರುವಾಗ ಈ ಕರ್ಮ ಏಕೆ ಗಂಟುಹಾಕಿಕೊಂಡಿರಿ ?"

"ಸಾಹಿತಿಯಾದುದರಿಂದ."

"ಎಲ್ಲ ಸಾಹಿತಿಗಳೂ ನಿಮ್ಮಂತೆಯೇ ಈರೀತಿ ಕಂಡಕಂಡವರಿಗೆ ವ್ಯಸವೆಸುತ್ತಾರೆಯೇ ?"

"ಅವರ ದಾರಿ ಅವರದು—ನನ್ನ ದಾರಿ ನನ್ನದು. ಅವರಂತೆ ನಾನೇಕೆ ಆಗಬೇಕು."

"ಇದೆಲ್ಲಾ ನೀರಿನಲ್ಲಿ ಮಾಡಿದ ಹೋಮ ದೊರೆ."

"ಏಕೆ ಲಲಿತಾ ?"

"ನೀವು ಏಳುವುದು ತಡವಾದುದಕ್ಕೇ ಈ ಸುತರಾಮಯ್ಯ ಜಬರಿಸಿದ. ಇವರೆಲ್ಲಾ ಮಾಡಿದ ಉಪಕಾರ ಸ್ಮರಿಸಿಕೊಳ್ಳುತ್ತಾರೆಂದು ಬಗೆದಿರುವಿರಾ ?"

"ನಾನು ಪ್ರತ್ಯುಪಕಾರ ನಿರೀಕ್ಷಿಸುವುದಿಲ್ಲ."

"ಕೃತಜ್ಞತೆಯನ್ನರಿಯದ ಪ್ರಾಣಿಗೆ ಉಪಕಾರಮಾಡುವುದೂ ಒಂದು ಪಾಪ."

"ಸುತರಾಮಯ್ಯ ಕೃತಘ್ನನೆಂಬುದು ಅನುಭವಕ್ಕೆ ಬಂದಿಲ್ಲವಲ್ಲ !"

"ನಿಮುಗಿನ್ನೂ ಎಷ್ಟು ಅನುಭವ ಬೇಕು."

"ಮಾನವ್ಯದಲ್ಲಿ ನಂಬಿಕೆ ಕಳೆದುಕೊಳ್ಳಲೀ ಲಲಿತಾ."

"ನಿಜ–ನೀವು ಮಾನವದ್ವೇಷಿ (Cynic) ಗಳಾಗುವುದರಿಂದ ರಾಷ್ಟ್ರಕ್ಕೆ, ನಾಡಿನ ಸಾಹಿತ್ಯಕ್ಕೆ ತುಂಬ ಘಾತವಾಗುತ್ತದೆ. ಆದರೆ ಇಡಿಯ ಸಾಹಿತ್ಯ ಲೋಕ ನಿಮ್ಮನ್ನು ಮಾನವದ್ವೇಷಿಗಳನ್ನಾಗಿ ಮಾಡಲು ಸಂಚುಮಾಡಿದೆಯಲ್ಲ !"

"ನೋಡೋಣ–ಈ ಹೋರಾಟದಲ್ಲಿ ಯಾರು ಗೆದಿಯುವರೋ ?"

"ನನ್ನ ದೊರೆಯೇ ಗೆಲ್ಲಬೇಕು—ಗೆಲ್ಲುವುದು"

ಎಂದು ಲಲಿತಮ್ಮ ಪೂರ್ಣನಂಬಿಕೆಯಿಂದ ನುಡಿದಳು.

# ೨

ಕರ್ನಾಟಕ ಕಮ್ಯುನಿಸ್ಟ್ ಪಾರ್ಟಿಯ ಮೀಟಿಂಗ್ ಹುಬ್ಬಳ್ಳಿಯ ದಾಜೀಬಾನ ಪೇಟೆಯಲ್ಲಿದ್ದ ಪಾರ್ಟಿ ಆಫೀಸಿನಲ್ಲಿ ರಾತ್ರಿ ಹತ್ತು ಗಂಟೆಗೆ ಸೇರಿತು. ಪಾರ್ಟಿಯ ಜನರಲ್ ಸೆಕ್ರೆಟರಿ ನರಸಿಂಹ ಕಾಮತ್ ಅಧ್ಯಕ್ಷತೆ ವಹಿಸಿದ್ದರು.

ಕಾಮತ್ತರು ಕರ್ನಾಟಕ ಕಮ್ಯುನಿಸ್ಟ್ ಪಾರ್ಟಿಯ ಕಾರ್ಯದರ್ಶಿಗಳಾಗಿದ್ದುದಲ್ಲದೆ ಕೇಂದ್ರಸಮಿತಿಯ ಸದಸ್ಯರೂ ಆಗಿದ್ದರು. ಕರ್ನಾಟಕದ ಸ್ಟಾಲಿನ್ ಎಂದು ಪ್ರಸಿದ್ಧರಾಗಿದ್ದ ಅವರನ್ನು ಕಂಡರೆ ಪಾರ್ಟಿ ಸದಸ್ಯರು ಗಡಗಡನೆ ನಡುಗುತ್ತಿದ್ದರು.

ಕರ್ನಾಟಕದಲ್ಲಿ ಪಾರ್ಟಿ ಕೆಲಸ ವಿಸ್ತರಿಸುವ ಮಾರ್ಗ ಕಂಡು ಹಿಡಿಯಲುವುದಕ್ಕೂ, ಹುನಗುಂದ ಈಶ್ವರರಾಯನ ಮೇಲಿನ ಆಪಾದನೆಗಳನ್ನು ವಿಮರ್ಶೆಮಾಡುವುದಕ್ಕೂ ಸಭೆ ಸೇರಿತ್ತು.

ಬಹಳ ಮಾತುಗಾರರಲ್ಲದ ಕಾಮತರು ಪ್ರಾಸ್ತಾವಿಕ ಭಾಷಣಮಾಡುತ್ತಾ "ಗಾಂಧಿಜಿಯವರ ಪ್ರಭಾವದಿಂದ ನಾಮಾವಶೇಷವಾಗಿದ್ದ ನಮ್ಮ ಪಾರ್ಟಿ ೧೯೪೨ರಲ್ಲಿ ಪುನರ್ಜನ್ಮ ಪಡೆಯಿತು. ಕೇರಳ, ಆಂಧ್ರ, ತೆಲಂಗಾಣಗಳ ವೀರರು ಪಾರ್ಟಿಯ ಅಸ್ತಿತ್ವಕ್ಕೆ ಬಲವಾದ ಬುನಾದಿ ಹಾಕಿದರು. ಈ ಪ್ರಾಂತ್ಯಗಳಲ್ಲಿ ಪಾರ್ಟಿ ಬೆಳದಂತೆ ಕರ್ನಾಟಕದಲ್ಲಿ ಬೆಳೆಯಲಿಲ್ಲ. ಇದಕ್ಕೆ ನಮ್ಮಲ್ಲಿರುವ ಅಶಿಸ್ತೆ ಮೂಲಕಾರಣ. ಕೆಲವು ಸದಸ್ಯರ ವೈಯಕ್ತಿಕ ನಡತೆಯಿಂದಲೂ ಪಾರ್ಟಿಗೆ ಕೆಟ್ಟ ಹೆಸರು ಬಂದಿದೆ. ನಮ್ಮ ಒಳಛಿದ್ರಗಳನ್ನು ಸರಿಪಡಿಸಿಕೊಂಡು ನಾವು ದಕ್ಷತೆಯಿಂದ ಕೆಲಸಮಾಡಿ ಶ್ರಮಜೀವಿಗಳ ರಾಜ್ಯ ಬೇಗ ಸ್ಥಾಪನೆಯಾಗುವುದಕ್ಕೆ ದುಡಿಯಬೇಕು. ನಿಮ್ಮ ಅಭಿಪ್ರಾಯ,

ಮುಂದಿನ ಕರ್ತವ್ಯದ ಬಗ್ಗೆ ನೀವು ಮಾಡಿರುವ ಯೋಜನೆಗಳನ್ನು ತಿಳಿಸ ಬೇಕು." ಎಂದರು.

ಕಾಮ್ರೇಡ್ ಕಲಘಟಗಿ ಎದ್ದು ನಿಂತುಕೊಂಡು

"ಕಾಮ್ರೇಡ್ ಗಣೇಶರಿಂದ ಪಾರ್ಟಿಗಾಗುತ್ತಿರುವ ಅನ್ಯಾಯವನ್ನು ಮೊದಲು ವಿಚಾರಿಸಬೇಕು ಕಾಮ್ರೇಡ್ ಸೆಕ್ರೆಟರಿ."

"ನನ್ನ ನಡವಳಿಕೆ ಯಾವದೂ ಪಾರ್ಟಿ ತತ್ತ್ವಕ್ಕೆ ವಿರೋಧವಾಗಿಲ್ಲ ವೆಂದು ರುಜುವಾತು ಮಾಡಲು ನಾನು ಸಿದ್ಧನಾಗಿದ್ದೇನೆ."

ಎಂದು ಕಾಮ್ರೇಡ್ ಗಣೇಶರು ಹೇಳಿದರು.

"ಸದ್ಯ ನಾವು ಕಾಮ್ರೇಡ್ ಗಣೇಶರ ವಿಚಾರ ಚರ್ಚಿಸುವುದು ಅಗತ್ಯವಿಲ್ಲ. ಅವರ ಬಗ್ಗೆ ತನಿಖೆ ನಡೆಸಲು ಮುಂಬಯಿಯಿಂದ ಪಿ. ಬಿ. (Polit bureau) ಸದಸ್ಯರು ಬರುತ್ತಾರೆ. ಅವರ ಮುಂದೆ ನಿಮ್ಮ ಸಾಕ್ಷ್ಯಗಳನ್ನೊದಗಿಸಬಹುದು- ಈಗ ನಾವು ವಿಚಾರಮಾಡಬೇಕಾದುದು ಕಾಮ್ರೇಡ್ ಹುನಗುಂದರ ವಿಷಯ."

"ಕಾಮ್ರೇಡ್ ಹುನಗುಂದರು ಪಾರ್ಟಿಗೆ ಮಾಡಿರುವ ಮಹೋನ್ನತ ಸೇವೆ ಪ್ರಶಂಸನೀಯವಾಗಿದೆ. ಪ್ರಗತಿಶೀಲ ಸಾಹಿತಿಗಳ ವಿರೋಧ ಹೋರಾಡಲು ಅವರು ಪುರೋಗಾಮಿ ಸಾಹಿತಿಗಳ ತಂಡ ಕಟ್ಟಿರುವುದಲ್ಲದೆ, ಬೆಂಗಳೂರಿನ ಪ್ರಮುಖ ಪತ್ರಿಕೆಗಳನ್ನು ಕಮ್ಯುನಿಸ್ಟ ಪಕ್ಷದ ಕಡೆ ಒಲಿಸಿಕೊಂಡಿದ್ದಾರೆ. ಯುಗವಾಣಿ–ಕಾಲದೂತ–ಜನಸಂದೇಶ ಮೊದಲಾದ ಪತ್ರಿಕೆಗಳು ಪಾರ್ಟಿಯ ಬಗ್ಗೆ ವಿಶ್ವಾಸ ತಾಳಿರುವುದಕ್ಕೆ ಹುನಗುಂದರ ಪ್ರಯತ್ನವೇ ಕಾರಣವೆಂದು ನಿಸ್ಸಂದೇಹವಾಗಿ ಹೇಳಬಹುದು, ಕನ್ನಡ ಮಯಾಕೊವಸ್ಕಿಗಳಾಗಿರುವ ಕಾಮ್ರೇಡ್ ಹುನಗುಂದರ ಸೇವೆಯನ್ನು ಪ್ರಶಂಸಿಸುವ ನಿರ್ಣಯ ಈ ಸಭೆಯಲ್ಲಿ ಆಗಬೇಕೆಂದು ನಾನು ಸೂಚಿಸುತ್ತೇನೆ."

ಎಂದು ಕಾಮ್ರೇಡ್ ಸುಬ್ಬಣ್ಣ ಹೇಳಿದ.

ಸುಬ್ಬಣ್ಣನ ವಾದ ಕೇಳಿ ಕೆರಳಿದ ಕಾಮ್ರೇಡ್ ಕೇಶವ

"ಕಾಮ್ರೇಡ್ ಹುನಗುಂದರನ್ನು ಯಾರೂ ಇಮುವರೆಗೆ ಮಾಯಾಕೋವಸ್ಕಿ ಎಂದು ಕರೆದಿಲ್ಲ. ಸ್ವಪ್ರಶಂಸನಾಪ್ರಿಯರಾದ ಹುನಗುಂದರು 'ಕಾಲದೂತ' ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖನಗಳಲ್ಲಿ ತಮ್ಮನ್ನು ತಾವೇ ಮಾಯಾಕೋವಸ್ಕಿ ಎಂದು ಕರೆದುಕೊಂಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಅವರಿಂದ ಯಾವ

ಸೇವೆಯೂ ಆಗಿಲ್ಲ. ಕಮ್ಯುನಿಸ್ಟ್ ತತ್ತ್ವದ ಬಗ್ಗೆ ಸಹಾನುಭೂತಿ ಇಟ್ಟು ಕೊಂಡಿದ್ದ ಮೂರ್ತಿ, ಸುದರ್ಶನ, ಗುಂಡಣ್ಣ ಮೊದಲಾದ ಶ್ರೇಷ್ಠ ಸಾಹಿತಿಗಳ ಮೇಲೆ ಅಪಪ್ರಚಾರಮಾಡಿ ಅವರನ್ನು ಪಾರ್ಟಿಯ ಬದ್ಧದ್ವೇಷಿಗಳನ್ನಾಗಿ ಮಾಡಿದ್ದಾರೆ. ಕರ್ನಾಟಕದಲ್ಲಿ ನಮ್ಮ ಪಾರ್ಟಿ ತಲೆಯೆತ್ತದಿರಲು ಹುನ ಗುಂದರ ಆತ್ಮಪ್ರಶಂಸೆ, ಪರನಿಂದೆಗಳೇ ಮೂಲಕಾರಣವೆಂದು ನನ್ನ ಸ್ಪಷ್ಟ ಅಭಿಪ್ರಾಯ. ಇವರಿಗೆ ಪಾರ್ಟಿಯಲ್ಲಿ ಯಾವ ಜವಾಬ್ದಾರಿ ಸ್ಥಾನವನ್ನೂ ಕೊಡಕೂಡದು. ಪಯೋನಿರ್ ಮಿಲ್ಸಿನ ಕೂಲಿಗಾರ ಸಂಘದ ಜೀವನಾಡಿ ಯಾಗಿದ್ದ ದೊರೆಸ್ವಾಮಿಗೆ ಇವರು ಮಾಡಿದ ಅನ್ಯಾಯದಿಂದ ಕಮ್ಯುನಿಸ್ಟರೆಲ್ಲಾ ತಲೆತಗ್ಗಿಸುವಂತಾಗಿದೆ."

"ವ್ಯಕ್ತಿನಿಂದೆಗೆ ಅವಕಾಶಕೊಡಕೂಡದು ಕಾಮ್ರೇಡ್ ಸೆಕ್ರೆಟರಿ. ಹುನಗುಂದರ ವ್ಯಕ್ತಿಶೀಲಕ್ಕೂ ಪಾರ್ಟಿ ಕೆಲಸಕ್ಕೂ ಯಾವ ಸಂಬಂಧವೂ ಇಲ್ಲ"

ಎಂದು ಕಾಮ್ರೇಡ್ ಕಲಘಟಗಿ ಕ್ರಿಯಾಲೋಪದ ಪ್ರಶ್ನೆಯನ್ನೆತ್ತಿದ.

"ಕಾಮ್ರೇಡ್ ಹುನಗುಂದರನ್ನು ಕ್ಷಮಿಸಿದರೆ ಕಮ್ಯುನಿಸ್ಟರಿಗೆ ನೀತಿಯಿಲ್ಲ, ನಡತೆಯಿಲ್ಲ ಎಂದು ಜನ ಆಡಿಕೊಳ್ಳುವುದಕ್ಕೆ ಸಮರ್ಥನೆ ಒದಗಿಸಿದಂತಾ ಗುತ್ತದೆ. ಮಹಾಚುನಾವಣೆ ಸಮೀಪದಲ್ಲಿದೆ ಎಂಬುದನ್ನು ನಾವು ಮರೆಯ ಬಾರದು. ನಾವು ಜನಗಳ ಮುಂದೆ ಹೋಗಿ ನಿಲ್ಲಬೇಕು—ಅವರ ಸಂಶಯ ಗಳನ್ನು ನಿವಾರಿಸಬೇಕು. ಕಾಮ್ರೇಡ್ ಹುನಗುಂದರ ನಡತೆಯ ಬಗ್ಗೆ ಪ್ರಶ್ನಿಸುವ ಮತದಾರರಿಗೆ ನಾವೇನು ಹೇಳುವುದು?"

ಎಂದು ಕಾಮ್ರೇಡ್ ಕೇಶವ ಉದ್ವಿಗ್ನನಾಗಿ ನುಡಿದ.

"ಈ ವಿಷಯ ಸಾಕಷ್ಟು ಚರ್ಚೆಯಾಗಿದೆಯೆಂದು ಕಾಣುತ್ತದೆ. ಕಾಮ್ರೇಡ್ ಸೆಕ್ರೆಟರಿಗಳು ತಮ್ಮ ಅಭಿಪ್ರಾಯ ವ್ಯಕ್ತಮಾಡಿ ಚರ್ಚೆ ಮುಗಿಸ ಬಹುದು."

ಎಂದು ಕಾಮ್ರೇಡ್ ವೀರೇಶ ಪಾಟೀಲ ಸೂಚಿಸಿದ.

ಕಾಮ್ರೇಡ್ ಕಾಮತರು ಎದ್ದು ನಿಂತು

"ನಮ್ಮ ಪಾರ್ಟಿ ಇನ್ನೂ ಬೆಳೆಯುತ್ತಿರುವ ಪಾರ್ಟಿ. ನಾವು ಬುಜ್ವಾ ಗಳು, ಬಂಡವಾಳಗಾರರು, ಪ್ರತಿಗಾಮಿಗಳು, ಬುದ್ಧಿಜೀವಿಗಳ ಜತೆಯಲ್ಲಿ ಹೋರಾಡಬೇಕಾಗಿರುವುದಲ್ಲದೆ ಬಲಿಷ್ಠರಾದ ಕಾಂಗ್ರೆಸ್ಸಿನವರ ಜತೆ ಹೋರಾಡ

ಬೇಕಾಗಿದೆ. ನಮ್ಮ ಪ್ರತಿಯೊಂದು ಲೋಪದೋಷವನ್ನೂ ಕಾಂಗ್ರೆಸ್ಸಿನವರು ಚೆನ್ನಾಗಿ ಉಪಯೋಗಿಸಿಕೊಂಡು, ನಮಗೆ ಅಪಖ್ಯಾತಿ ತರಲು ಪ್ರಯತ್ನಿಸುತ್ತಿದ್ದಾರೆ. ಸೆಂಟ್ರಲ್ ಕಮಿಟಿಯ ಕೆಲವು ತಪ್ಪುಗಳಿಂದ ಪಾರ್ಟಿಯ ಭದ್ರತೆಗೆ ಬಲವಾದ ಧಕ್ಕೆ ತಗುಲಿದೆ. ಈ ಸಂದರ್ಭದಲ್ಲಿ ನಾವು ಐಕ್ಯಮತ್ಯದಿಂದಿದ್ದು ಪಾರ್ಟಿಯ ಕೆಲಸವನ್ನು ತ್ರಿಕರಣಪೂರ್ವಕವಾಗಿ ಮಾಡದಿದ್ದಲ್ಲಿ ಕರ್ನಾಟಕದಲ್ಲಿ ಕಮ್ಯೂನಿಸಂ ನಾಮಾವಶೇಷವಾಗುತ್ತದೆ.

ಕಾಮ್ರೇಡ್ ಹುನಗುಂದರ ದಕ್ಷತೆ, ಕರ್ತವ್ಯಶ್ರದ್ಧೆ, ನಿಷ್ಕಾಮಸೇವೆಗಳ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ದೊರೆಸ್ವಾಮಿ ಪ್ರಕರಣದಲ್ಲಿ ಅವರ ಹೆಸರು ಸ್ವಲ್ಪ ಕೆಟ್ಟಿದೆ. ಈ ವಿಷಯ ನಾನು ಕೂಲಂಕಷವಾಗಿ ವಿಚಾರಮಾಡಿದ್ದೇನೆ. ದೊರೆಸ್ವಾಮಿಗೆ ಎಲ್ಲರೀತಿಯಲ್ಲಿಯೂ ಹುನಗುಂದರು ಸಹಾಯಮಾಡಲು ಪ್ರಯತ್ನಿಸಿದರೇ ವಿನಾ ಅವನ ಸಂಸಾರ ಮುರಿಯಲು ಯತ್ನಿಸಲಿಲ್ಲ. ಹುನಗುಂದರು ನಿರಪರಾಧಿಗಳೆಂದು ನನ್ನ ಮನಸ್ಸಿಗೆ ಖಚಿತವಾಗಿ ಗೊತ್ತಾಗಿದೆ. ಅವರು ಸದ್ಯಕ್ಕೆ ಇಲ್ಲೇ ಇದ್ದು ಉತ್ತರ ಕನ್ನಡಜಿಲ್ಲೆಯಲ್ಲಿ ಪಾರ್ಟಿ ಪ್ರಚಾರ ಮಾಡಿ ಮಳೆಗಾಲ ಕಳೆದ ಮೇಲೆ 'ಕಾರವಾರದ ಕರನಿರಾಕರಣೆ' ಕಾರ್ಯದ ವ್ಯವಸ್ಥೆ ಕೈಗೊಳ್ಳಬೇಕೆಂದು ನಾನು ಸೂಚಿಸುತ್ತೇನೆ—ಇಂದಿಗೆ ಈ ಸಭೆ ಮುಕ್ತಾಯಗೊಳಿಸೋಣ. ನಾಳೆ ರಾತ್ರಿ ಹತ್ತುಗಂಟೆಗೆ ಪುನಃ ಸೇರಿ ಉಳಿದ ವಿಷಯಗಳನ್ನು ಚರ್ಚಿಸೋಣ"

ಎಂದು ಅಪ್ಪಣೆಕೊಡಿಸಿದರು.

ಕಾಮ್ರೇಡುಗಳು ಒಬ್ಬರಿಗೊಬ್ಬರು 'ಲಾಲ್‌ಸಲಾಮು' ಹಾಕಿ ಚದುರಿದರು. ಎಲ್ಲರೂ ಹೋಗುವುದನ್ನೇ ಕಾಯುತ್ತಿದ್ದ ಕಾಮ್ರೇಡ್ ಗಣೇಶ ಕಾಮತರನ್ನು ಒಂದು ಪಕ್ಕಕ್ಕೆ ಕರೆದು

"ನೀವು ಪಾರ್ಟಿಗೆ ಬಹಳ ಅನ್ಯಾಯಮಾಡುತ್ತಿರುವಿರಿ ಕಾಮ್ರೇಡ್" ಎಂದರು.

"ನಾನು ಅನ್ಯಾಯ ಮಾಡುತ್ತಿರುವನೇ ?!"

"ಹೌದು–ಹುನಗುಂದರ ಮಹಾಪರಾಧವನ್ನು ತಿಪ್ಪೆ ಸಾರಿಸಿದ್ದು ನ್ಯಾಯವಲ್ಲ. ದೊರೆಸ್ವಾಮಿ ಹೆಂಡತಿ ಜಾನಕಿಯನ್ನು ಹುನಗುಂದರು ಹಾರಿಸಿಕೊಂಡು ಮುಂಬಯಿಗೆ ಹೋದುದು ಜಗಜ್ಜಾಹೀರಾಗಿದೆ. ದೊರೆಸ್ವಾಮಿ ಆತ್ಮಹತ್ಯ

ಮಾಡಿಕೊಳ್ಳುವುದರಲ್ಲಿದ್ದ. ಹುನಗುಂದರು ಜಾನಕಿಯನ್ನು ಸ್ವಸುಖಕ್ಕೆ ಬಳಸಿಕೊಂಡು ಅವಳ ಕೈಬಿಟ್ಟರು. ಮುಂಬಯಿಯಲ್ಲಿ ದಿಕ್ಕಿಲ್ಲದೆ ತೊಳಲುತ್ತಿದ್ದ ಜಾನಕಿಯನ್ನು ನಾನು ಕರೆತಂದು, ದೊರೆಸ್ವಾಮಿ ಜತೆಗೂಡಿಸಿದುದು ನಿಮಗೆ ಗೊತ್ತಿರಬಹುದು. ಇಂಥ ಪಂಚರಂಗಿಯನ್ನು ನೀವು ದಕ್ಷ, ಶ್ರದ್ಧಾವಂತ, ನಿಷ್ಕಾಮಿ ಎಂದು ಪ್ರಶಂಸಿಸಿದ್ದು ಹಾಸ್ಯಾಸ್ಪದವಾಗಿತ್ತು. ಪಾರ್ಟಿ ಪ್ರಪಾತಕ್ಕಿಳಿಯಲು ಇದೇ ಕಾರಣವಾಗುತ್ತದೆ."

"ಕಾಮ್ರೇಡ್—ಪಾರ್ಟಿಯ ಬಗ್ಗೆ ಮಾತನಾಡಲು ನಿಮಗೆ ಯಾವ ಅಧಿಕಾರವೂ ಇಲ್ಲ. ಪಿ. ಬಿ. ಪ್ರತಿನಿಧಿಗಳ ನಿರ್ಣಯ ಬರುವವರೆಗೆ ನಿಮ್ಮನ್ನು ಪಾರ್ಟಿ ಸದಸ್ಯರೆಂದೇ ನಾವು ಪರಿಗಣಿಸುವುದಿಲ್ಲ."

"ಹೇಗೆ ಪರಿಗಣಿಸುತ್ತೀರಿ. ನಿಮಗೆ ಬೇಕಾಗಿರುವುದು ಪಾರ್ಟಿಯ ಹಿತವಲ್ಲ—ಸ್ವಪ್ರಾಥಿಮೆ—ಸ್ವಾರ್ಥಸಾಧನೆ. ನನ್ನನ್ನು ಪಾರ್ಟಿಯಿಂದ ಹೊರಗೆ ಹಾಕಲು ನೀವು ಮಸಲತ್ತು ಮಾಡುತ್ತಿರುವಿರಿ. ಪಾರ್ಟಿ ಬಿಟ್ಟು ಹೋದರೂ ನಿಮ್ಮ ರಾಕ್ಷಸವರ್ತನೆಯ ವಿರುದ್ಧ ನಾನು ಹೋರಾಟ ನಿಲ್ಲಿಸುವುದಿಲ್ಲ ಕಾಮ್ರೇಡ್—ಈ ಮಾತನ್ನು ಚೆನ್ನಾಗಿ ನೆನಪಿನಲ್ಲಿಡಿ"

ಎಂದು ಹೇಳಿದವರೇ ಅಲ್ಲಿ ನಿಲ್ಲದೆ ಹೊರಟುಹೋದರು.

ಗಣೇಶ ಹೋಗುವುದಕ್ಕೇ ಕಾಯುತ್ತಿದ್ದ ಹುನಗುಂದ ಮೆಲ್ಲನೆ ಬಂದು ಕಾಮತರ ಬಳಿ ಕುಳಿತು

"ತುಂಬ ಥ್ಯಾಂಕ್ಸ್ ಕಾಮತ್, ದೊಡ್ಡ ಕುತ್ತಿನಿಂದ ನನ್ನನ್ನು ಪಾರು ಮಾಡಿದೆಯಪ್ಪಾ" ಎಂದ.

"ನಿನ್ನ ಪಕ್ಷ ಕಟ್ಟಿದುದಕ್ಕೆ ನಾನು ಗಣೇಶನ ವಿರೋಧ ಬೆಳಸಿಕೊಳ್ಳಬೇಕಾಯಿತು."

"ಪಾರ್ಟಿಯಿಂದ ಅವನನ್ನು ಹೊರಗೆ ಹಾಕಿದರಾಯಿತು."

"ಅದು ಅಷ್ಟು ಸುಲಭದ ಮಾತಲ್ಲ ಹುನಗುಂದ. ಪಿ. ಬಿ ಯಲ್ಲಿ ಅವನ ಅಭಿಮಾನಿಗಳು ಬಹಳ ಜನರಿದ್ದಾರೆ. ಕರ್ನಾಟಕದ ಪಾರ್ಟಿಕಟ್ಟಿ ಬೆಳಸಿದವನೇ ಗಣೇಶ ಎಂಬ ವಿಷಯವೂ ಪಿ. ಬಿ. ಸದಸ್ಯರಿಗೆ ಗೊತ್ತಿದೆ."

"ಗೊತ್ತಿದ್ದರೇನಂತೆ? ಭಾರತದ ಕಮ್ಯುನಿಸ್ಟ್‌ಪಾರ್ಟಿಯನ್ನು ಕಟ್ಟಿ ಬೆಳಸಿದ ಪಿ. ಸಿ. ಜೋಷಿಯ ಶ್ರಾದ್ಧ ಅವರು ಮಾಡಲಿಲ್ಲವೇ ?"

"ನಿನ್ನ ಉಳಿಸಿಕೊಳ್ಳುವುದಕ್ಕೆ ನಾನೆಷ್ಟು ಕಷ್ಟಪಡಬೇಕಾಗಿದೆ ನೋಡು."

"ಪ್ರತಿಫಲಾಕಾಂಕ್ಷೆಯಿಲ್ಲದೆ ನೀನು ನನಗೆ ಸಹಾಯಮಾಡುತ್ತಿರುವೆಯಾ"

"ಏನು ನೀನು ನನಗೆ ಪ್ರತಿಫಲ ಕೊಟ್ಟಿರುವುದು ?"

"ಕೊಟ್ಟಿಲ್ಲ—ಕೊಡುತ್ತೇನೆ"

"ಯಾವಾಗ ?"

"ಬಹು ಶೀಘ್ರವಾಗಿ "

"ಹಕ್ಕಿಯ ಪರಿಚಯವನ್ನಾದರೂ ಮಾಡಿಕೊಡಯ್ಯಾ "

"ಸ್ವಲ್ಪ ತಡೀ—ನೀನೆಂದರೆ ಕ್ರೆಮ್ಲಿನ್‌ನಲ್ಲಿರುವ ಸ್ಟಾಲಿನ್ ಎಂಬ ಭಾವನೆ ಅವಳ ಮನಸ್ಸಿನಲ್ಲಿ ಹುಟ್ಟಿಸಿದ್ದೇನೆ. ನಿನ್ನ ದರ್ಶನವಾಗುವ ದಿನವೇ ಸುದಿನ ಎಂದವಳು ದೃಢವಾಗಿ ನಂಬಿದ್ದಾಳೆ "

"ಶಾಂತಿ ಸಮಿತಿಯ (Peace Committee) ವಿಷಯ ಏನು ಮಾಡಿದೆ ?"

"ಶಾಂತಿ ಸಮಿತಿ ವ್ಯವಸ್ಥೆಮಾಡಿದ್ದೇನೆ ಅದಕ್ಕೆ ಮಿಸಸ್. ಹರಿಣಿ ಮಂಗಸೂಳಿಯವರೇ ಅಧ್ಯಕ್ಷರು. ನಾಡಿದ್ದು ಆರಂಭೋತ್ಸವ-ನೀನೇ ಉತ್ಸವದ ಉದ್ಘಾಟಕ. ಸಭೆ ಸಂಜೆ ಆರುಗಂಟೆಗೆ-ಮಲ್ಲಿಕಾರ್ಜುನ ಥಿಯೇಟರಿನಲ್ಲಿ—ಹುಬ್ಬಳ್ಳಿಯ ಕಾರ್ಮಿಕರು ನಿನ್ನನ್ನೂ ಮಿಸಸ್. ಹರಿಣಿಯನ್ನೂ ಮೆರವಣಿಗೆ ಕರೆದುಕೊಂಡು ಹೋಗುತ್ತಾರೆ. ಸಮಾರಂಭ ಮುಗಿದ ಮೇಲೆ ಅಧ್ಯಕ್ಷರ ಮನೆಯಲ್ಲಿ ನಿನಗೂ ನನಗೂ ಔತಣ."

"ತರುವಾಯ............"

"ನಿನಗೆ ಅಧ್ಯಕ್ಷರ ಮನೆಯಲ್ಲಿ ಬಿಡಾರ—ನನಗೆ ಪಾರ್ಟಿ ಆಫೀಸ್ ಬೆಂಚಿನ ಮೇಲೆ, ತಿಗಣೆಗಳ ಸಂಗದಲ್ಲಿ ಬಿಡಾರ."

"ಆಕೆಯ ಗಂಡ ?"

"ಊರಿನಲ್ಲಿಲ್ಲ—ಮುಂಬಯಿಗೆ ಹೋಗಿದ್ದಾರೆ "

"ನಮ್ಮ ಪಾರ್ಟಿಗೆ ನೀನೊಂದು ರತ್ನ ಹುನಗುಂದ-ನಿನ್ನ ದೈತ್ಯವಕ್ಷತೆಯನ್ನು ಯಾರೂ ಮೀರಿಸಲಾರರು"

ಎಂದು ಕಾಮ್ರೇಡ್ ಕಾಮತರು ತಮ್ಮ ಸಾಥಿಯನ್ನು ಮೆಚ್ಚಿಕೊಂಡರು.

೩

ಒಂದು ದಿನ ಬೆಳಿಗ್ಗೆ ಎದ್ದ ಮೂರ್ತಿ ಬರವಣಿಗೆಗೆ ಪೂರ್ವಸಿದ್ಧತೆಮಾಡಿಕೊಳ್ಳುತ್ತಾ ಸಿಗರೇಟ್ ಸುಡುತ್ತ ಕುಳಿತಿದ್ದ. ಮೂರು ಕಪ್ ಕಾಫಿ ಸೇವಿಸಿಯಾಗಿತ್ತು. ನಾಲ್ಕನೆಯ ಕಪ್ ಲಲಿತಮ್ಮ ತರುವ ವೇಳೆಗೆ ಸರಿಯಾಗಿ ಬಂದ ಗುಂಡಣ್ಣ

"ಒಳ್ಳೆಯ ಹೊತ್ತಿಗೆ ಬಂದಂತಾಯಿತು" ಎಂದ.

"ಬೀಗನಾಗಿಬಿಟ್ಟೆಯಲ್ಲಾ ಗುಂಡಾ—ನಿನ್ನ ದರ್ಶನ ಸಿಕ್ಕುವುದೇ ಅಪರೂಪವಾಯಿತು."

"ಮೇಲಿಂದ ಮೇಲೆ ಬಂದು ನಿನ್ನ ಸಾಹಿತ್ಯಸೃಷ್ಟಿಗೇಕೆ ಅಡಚಣೆಮಾಡಬೇಕಪ್ಪಾ."

"ನೀವು ಬಂದರೆ ಅಡಚಣೆಯಾಗುವುದಿಲ್ಲ ಗುಂಡಣ್ಣನವರೇ"

ಎಂದು ಹೇಳಿದ ಲಲಿತಮ್ಮ ಎರಡು ಕಪ್ ಕಾಫಿ ತಂದಿಟ್ಟಳು.

"'ತಾಯಿದೇವಿ' ಎಷ್ಟು ಮುಂದುವರಿದಿದೆ ?"

"ಪರೋಪಕಾರ ಮಾಡುವುದರಲ್ಲಿ ನಿಮ್ಮ ಸ್ನೇಹಿತರು 'ತಾಯಿದೇವಿ'ಯನ್ನು ಮೂಲೆಗೊತ್ತರಿಸಿದ್ದಾರೆ ಗುಂಡಣ್ಣನವರೇ. ಈ ನಾಲ್ಕುದಿನಗಳಿಂದ ಸುತರಾಮಯ್ಯನ 'ಬಯಲ ಬಾಳು' ತಿದ್ದುವುದರಲ್ಲಿ ಆಸಕ್ತರಾಗಿದ್ದರು. ಆ ಪುಣ್ಯಾತ್ಮ ಅಲ್ಟಿಮೇಟಮ್ (Ultimatum) ಕೊಟ್ಟು ಹೋಗಿದ್ದಾನೆ—ನಿಮ್ಮ ಸ್ನೇಹಿತರಿಗೆ ಸ್ವಲ್ಪ ಬುದ್ಧಿ ಹೇಳಬಾರದೇ ?"

"ಈ ಮೂರ್ತಿಯದು ಬಲು ಮೊಂಡು ಸ್ವಭಾವ ಲಲಿತಮ್ಮ—ನಾನು ಹೇಳಿದ ಬುದ್ಧಿ ಇವನ ಮನಸ್ಸಿಗಂಟುವುದೇ ಇಲ್ಲ. ಇವನ ವಿಷಯದಲ್ಲಿ 'ಮಿತ್ರಸಮ್ಮಿತಿ'ಗಿಂತಲೂ 'ಕಾಂತಾಸಮ್ಮಿತಿ'ಯೇ ಲೇಸು."

2

"ಸುತರಾಮಯ್ಯನ ಹಸ್ತಪ್ರತಿ ನೋಡಿಕೊಡಲು ನಾನು ಒಪ್ಪಿಕೊಂಡದ್ದಕ್ಕೆ ಲಲಿತ ಕೋಪಮಾಡಿಕೊಂಡಿದ್ದಾಳೆ."

"ನೀವೇ ಹೇಳಿ ಗುಂಡಣ್ಣ—ಕೈಯಲ್ಲಿರುವ ಕೆಲಸಬಿಟ್ಟು ಅವರಿವರ ಹಾಳೂಮೂಳೂ ತಿದ್ದುವುದಕ್ಕೆ ಕೂಡುತ್ತಾರಲ್ಲಾ—ಇದು ಯಾವ ನ್ಯಾಯ ?"

"ಸುತರಾಮಯ್ಯನಲ್ಲಿ ಪ್ರತಿಭೆಯಿದೆ ಗುಂಡ. ಅವನ ಶೈಲಿ ತೇಜಸ್ವಿಯಾಗಿದೆ. ಹೊಸ ಲೇಖಕರು ಮಾಡುವ ತಪ್ಪುಗಳನ್ನು ಅವನೂ ಮಾಡಿದ್ದಾನಾದರೂ ಅವನ ಉತ್ತಮ ಲೇಖಕನಾಗುವ ಲಕ್ಷಣಗಳಿಂದ ಕೂಡಿದ್ದಾನೆ. ಇಂಥವರಿಗೆ ಸಹಾಯಮಾಡುವುದು ನಮ್ಮ ಕರ್ತವ್ಯವಲ್ಲವೇ ?"

"ನೀನು ಮಾಡುವ ಸೇವೆ, ಉಪಕಾರ ಯಾರಾದರೂ ಸ್ಮರಿಸಿಕೊಳ್ಳುತ್ತಾರೆಯೇ ?—ದೋಣಿ ದಾಟಿದಮೇಲೆ ಅಂಬಿಗನಿಗೆ ಮಿಂಡ."

"ಕೃತಜ್ಞತೆ ತೋರಿಸಬೇಕಾದುದು ಅವರ ಧರ್ಮ; ಅದನ್ನು ನಿರೀಕ್ಷಿಸದಿರುವುದು ನಮ್ಮ ಧರ್ಮ."

"ಒಬ್ಬ ವ್ಯಕ್ತಿ ಕೃತಘ್ನನೆಂದು ತಿಳಿದೂ ಅವನಿಗೆ ಸಹಾಯಮಾಡುವುದೇ ?"

"ನಾನು ಬರವಣಿಗೆ ಆರಂಭಿಸಿದಾಗ ಯಾರಿಂದಲೂ ಸಹಾಯ ದೊರೆಯಲಿಲ್ಲ. ನಿನ್ನ ತೀರ್ಥರೂಪರವರು ಪ್ರಾಚೀನಕಾವ್ಯಗಳನ್ನು ಓದಿಸಿ ನನ್ನ ಭವಿಷ್ಯತ್ತಿಗೆ ಅಗತ್ಯವಾದ ಅಸ್ತಿಭಾರಹಾಕಿಕೊಟ್ಟರು. ಪ್ರಾಚೀನ ಕವಿಗಳ ಜಾಡುಹಿಡಿದು ನಾನು ಚಂಪೂ, ಷಟ್ಪದಿ, ಸಾಂಗತ್ಯ ರಚಿಸಲು ಅವಶ್ಯಕವಾದ ಸಾಮರ್ಥ್ಯ ನನಗೊದಗಿದರೂ ಅದು ಹೆಚ್ಚು ಪ್ರಯೋಜನಕ್ಕೆ ಬರಲಿಲ್ಲ. ಇದು ಗದ್ಯಯುಗ. ಸಾಹಿತ್ಯದಲ್ಲಿ ನಾವು ಯಾವ ಕೆಲಸಮಾಡಿದರೂ ಗದ್ಯದಲ್ಲಿಯೇ ಮಾಡಬೇಕಾಗುತ್ತದೆ—ನಾನು ಪದ್ಯವನ್ನು ಅಲ್ಲಗಳೆಯುತ್ತಿದ್ದೇನೆಂದು ಭಾವಿಸಬೇಡ. ಜನಕ್ಕೆ ಪದ್ಯಕ್ಕಿಂತ ಗದ್ಯ ಸುಲಭವಾಗಿ ಅರ್ಥವಾಗುತ್ತದೆ ಎಂಬ ದೃಷ್ಟಿಯಿಂದಲೇ ಈ ಮಾತು ಹೇಳುತ್ತಿದ್ದೇನೆ. ಆರಂಭದೆಸೆಯಲ್ಲಿರುವ ಲೇಖಕನಿಗೆ ಕನ್ನಡದಲ್ಲಿ ಯಾವ ಸೌಕರ್ಯವೂ ಇಲ್ಲ. ಪರಂಪರೆಯನ್ನನುಸರಿಸೋಣವೆಂದರೆ ನಮ್ಮಲ್ಲಿ ಗದ್ಯಸಾಹಿತ್ಯ ಬೆಳೆಯಲಿಲ್ಲ. ನಾವೇ ನಮ್ಮ ಜಾಡು ನಿರ್ಮಾಣಮಾಡಿಕೊಳ್ಳಬೇಕಾಯಿತು. ಕನ್ನಡವನ್ನು ಗದ್ಯಕ್ಕೆ ಯಾವ ರೀತಿ ಅಳವಡಿಸಿಕೊಳ್ಳಬಹುದೆಂದು ನಾನಾ ಪ್ರಯೋಗದಿಂದ, ಸತತ ಪ್ರಯತ್ನದಿಂದ,

ಲೇಖನಬಾಹುಳ್ಯದಿಂದ ನಾವೇ ನಿಶ್ಚಯಿಸಬೇಕಾಯಿತು. ಆಗ ನಾನು ಪಟ್ಟ ಅವಸ್ಥೆಯನ್ನು ವರ್ಣಿಸಲಾರೆ—ನಮ್ಮ ಸಮಕಾಲೀನರೂ ತರುವಾಯದವರೂ ಈ ಬಗೆಯ ಅವಸ್ಥೆ ಪಡದಿರಲೆಂದು ನಾವು ಹಾರೈಸಬೇಡವೇ ? ಅವರ ಪ್ರಯತ್ನ ಸಫಲವಾಗುವಂತೆ ನಾವು ಸಹಾಯಮಾಡಬೇಡವೇ ?"

"ಸರಿ–ಒಪ್ಪಿಕೊಂಡೆ. ಕ್ರಿಯಶಾಲಿ ಲೇಖಕನಾಗಲು ನೀನು ಪಟ್ಟ ಶ್ರಮ, ಮಾಡಿದ ದುಡಿಮೆ ಪ್ರತಿಯೊಬ್ಬ ಲೇಖಕನೂ ಮಾಡಬೇಡವೇ ? ಹುಯ್ಯಹಾಲಿನಿಂದ ಸಾಹಿತ್ಯ ಬೆಳೆಯಲು ಸಾಧ್ಯವೇ ? ಕಂಡವರು ಉಂಡರೆ ನಮ್ಮ ಹೊಟ್ಟೆಯ ಹಸಿವು ಅಣಗುವುದೇ ?"

"ಇಲ್ಲ—ಹಸಿದವರಿಗೆ ಅಶನವಿರುವ ಎಡೆ ತೋರಿಸಬಹುದು."

"ನಿನ್ನ ಆಶಾವಾದ ಚಿಕಿತ್ಸಾತೀತವಾದದ್ದು ಮೂರ್ತಿ."

"ಕೆರೆ, ಭಾವಿ, ಚತ್ರ ಕಟ್ಟಿಸಿದರೆ ಸಾಹಿತಿಯ ಜನ್ಮಸಾರ್ಥಕವಾಗುವುದಿಲ್ಲ ಗುಂಡ. ಸಾಹಿತಿ ತನ್ನ ಮುಕ್ತಿಯನ್ನು ಸಾಹಿತ್ಯದಿಂದಲೇ ಕಾಣಬೇಕು; ಸಂಗೀತಗಾರ ತನ್ನ ಮುಕ್ತಿಯನ್ನು ಸಂಗೀತದಲ್ಲಿಯೇ ಕಾಣಬೇಕು. 'ಯೋಗಃ ಕರ್ಮಸು ಕೌಶಲಂ'"

ಬಾಗಿಲು ಬಳಿ ನಿಂತಿದ್ದ ಲಲಿತಮ್ಮ ಹೊರಬಾಗಿಲು ನೋಡಿ "ಇದ್ದಾರೆ ಒಳಕ್ಕೆ ಬನ್ನಿ" ಎಂದಳು.

"ಯಾರದು ಲಲಿತಾ ?"

"ನಿಮ್ಮ ಸ್ನೇಹಿತರು ಸುತರಾಮಯ್ಯನವರು."

"ಇಲ್ಲಿಯೇ ಬನ್ನಿ ಎಂದು ಹೇಳು."

ಸುತರಾಮಯ್ಯ ಬಂದವನೇ ಮೂರ್ತಿಗೆ ಕೈಮುಗಿದು ಕುಳಿತ.

"ನನ್ನ ಮಿತ್ರರು ಗುಂಡಣ್ಣನವರ ಪರಿಚಯವಿದೆಯೇ ?"

"ವ್ಯಕ್ತಿ ಪರಿಚಯವಿಲ್ಲ ಸರ್–ಅವರ ಲೇಖನಗಳನ್ನು ಓದಿದ್ದೇನೆ."

"ನಿಮ್ಮ ವಿಷಯವೇ ಮಾತನಾಡುತ್ತಿದ್ದೆವು ಸುತರಾಮಯ್ಯನವರೇ— ನಿಮ್ಮ ಕಾದಂಬರಿ ಓದಿದೆ."

ಸುತರಾಮಯ್ಯ ಜೀವ ಕೈಯಲ್ಲಿ ಹಿಡಿದುಕೊಂಡು "ಹೇಗಿದೆ ಸರ್" ಎಂದು ಕೇಳಿದ.

"ಸ್ಪಷ್ಟಾಭಿಪ್ರಾಯ ವ್ಯಕ್ತಮಾಡಿದರೆ ನಿಮಗೆ ಅಸಮಾಧಾನವಾಗುವುದಿಲ್ಲವಷ್ಟೆ!"

"ಇಲ್ಲ ಸರ್—ಹೇಳಿ."

"ಕಾದಂಬರಿ ಚೆನ್ನಾಗಿದೆ. ಕಥಾಸರಣಿ, ಸಂವಿಧಾನ ಕೌಶಲ್ಯ ಶ್ಲಾಘನೀಯವಾಗಿದೆ. ನಿಮ್ಮ ಶೈಲಿಯಲ್ಲಿ ಕೆಚ್ಚಿದೆ. ಪಾಂಡಿತ್ಯಪ್ರದರ್ಶನದ ಹಂಬಲ ಅಲ್ಲಲ್ಲಿ ಕಂಡುಬರುತ್ತಿದ್ದರೂ ಶೈಲಿಯಲ್ಲಿ ಲಾಲಿತ್ಯವಿದೆ."

"ಕೃತಾರ್ಥನಾದೆ ಸರ್."

"ಇನ್ನು ದೋಷಗಳನ್ನು ಹೇಳುತ್ತೇನೆ ಕೇಳಿ! ಅನುಕರಣಶಬ್ದ, ಚಿನ್ಹೆಗಳನ್ನು ಬಹಳ ಉಪಯೋಗಿಸುತ್ತೀರಿ. 'ಬಿಂದಿಗೆಗೆ ನೀರು **ಧಡಧಡನೆ** ಬಿದ್ದಿತು—ಅವನು **ಚಟಪಟನೆ** ಬಂದ—ಮೋಟಾರ್ ಹಾರ್ನ್ **ಪೊಯ್ ಪೊಯ್** ಎಂದಿತು'—ಈ ಪ್ರಯೋಗಗಳು ಚೆನ್ನಾಗಿಲ್ಲ. ಇವುಗಳನ್ನು ಬಹಳ ಮಿತವಾಗಿ—ಕೇವಲ ಅಗತ್ಯವಾದೆಡೆ ಮಾತ್ರ ಬಳಸಬೇಕು. ಪಂಕ್ತಿಗಳನ್ನು ನೀವು ಮುರಿಯುವಾಗ, ಕ್ರಿಯಾಪದ, ನಾಮಪದಗಳನ್ನು ಪಲ್ಲಟಗೊಳಿಸುವಾಗ ಕನ್ನಡಭಾಷಾ ಮರ್ಯಾದೆಯನ್ನೂ ಅನುಲಕ್ಷಿಸಬೇಕು. ಶೈಲಿಯಲ್ಲಿಯೂ ಅಷ್ಟೇ—ಕನ್ನಡದ ಭಾಷಾಶಿಲ್ಪವನ್ನು ನೀವು ಗಮನಿಸದಿದ್ದರೆ ಅದು ಇಂಗ್ಲಿಷಿನ ಅನುವಾದದಂತೆ ಕಾಣುತ್ತದೆ."

"ಅವುಗಳನ್ನು ತಾವೇ ತಿದ್ದುವ ಉಪಕಾರ ಮಾಡಿಸಾರ್."

"ಆ ಕೆಲಸ ನಾನು ಮೊದಲೇ ಮಾಡಿದ್ದೇನೆ-ನೀವು ಒಳ್ಳೆಯ ವ್ಯಾಸಂಗ ಪ್ರಿಯರೆಂದು ಕಾಣುತ್ತದೆ."

"ಹೌದು ಸರ್. ಪ್ರತಿನಿತ್ಯ ಆರೇಳು ಗಂಟೆಯಾದರೂ ಓದದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ."

"ಆಧುನಿಕ ಲೇಖಕರಲ್ಲಿ ಯಾರ ಯಾರ ಗ್ರಂಥಗಳನ್ನೋದಿರುವಿರಿ ?"

"ಎಲ್ಲರ ಗ್ರಂಥಗಳನ್ನೂ ಓದಿದ್ದೇನೆ ಸರ್."

"ನಿಮ್ಮ ಅತಿ ಮೆಚ್ಚಿನ ಲೇಖಕರು ಯಾರು ?"

"ಜಾಯ್ಸ್ (Joyce), ಕಾಫ್ಕಾ (Kafka), ಹೆಮಿಂಗ್‌ವೇ (Hemingway)—ಅವರ ವಿಚಾರಧಾರೆಯನ್ನು ಕನ್ನಡಕ್ಕಿಳಿಸಬೇಕೆಂಬುದೇ ನನ್ನ ಆಶಯ."

"ಓದುವುದೂ, ಹಲವು ಸಾಹಿತಿಗಳ ಕೃತಿಪರಿಚಯಮಾಡಿಕೊಳ್ಳುವುದೂ

ಎರಡೂ ಒಳ್ಳೆಯದು. ಆದರೆ ಅವರ ವಿಚಾರಧಾರೆಯನ್ನು ಕನ್ನಡಕ್ಕೆ ಕಸಿ ಮಾಡುವ ಪ್ರಯತ್ನ ಮಾತ್ರ ಮೆಚ್ಚತಕ್ಕುದಲ್ಲ. ನೀವು ಜಾಯ್ಸ್, ಕಾಫ್ಕಾ ಇವರ ಕೃತಿಗಳನ್ನು ಮೆಚ್ಚಿಕೊಂಡರೆ ಅವುಗಳನ್ನು ಕನ್ನಡಕ್ಕೆ ಅನುವಾದಮಾಡಿ. ಲೇಖನಗಳ ಮೂಲಕ ಅವರ ಕೃತಿ, ಪ್ರತಿಭೆಯ ಪರಿಚಯಮಾಡಿ—ನಿಮ್ಮ ಕೃತಿ ಎಲ್ಲವಿಧದಿಂದಲೂ ನಿಮ್ಮದೇ ಆಗಿರಬೇಕು—ಶೈಲಿ, ವಸ್ತು, ವಿಚಾರ, ಸಂದೇಶ ಸಮಸ್ತವೂ ನಿಮ್ಮದೇ ಆಗಿರಬೇಕು. ಪರರ ಕೃತಿಗಳನ್ನು ನೀವು ಅವಲಂಬಿಸತೊಡಗಿದರೆ ನಿಮ್ಮ ವೈಶಿಷ್ಟ್ಯ ಉಳಿಯುವುದಿಲ್ಲ. ಇನ್ನೂ ಒಂದು ಮಾತು ಹೇಳಬಯಸುತ್ತೇನೆ."

"ಹೇಳಿ ಸರ್."

"ನಿಮ್ಮ ಅನುಭವ, ವೀಕ್ಷಣೆಗೆ (Experience and observation) ನಿಲುಕದ ವಸ್ತುವಿಗೆ ಕೈಹಾಕಬೇಡಿ. ಅನುಭವ ವಯೋಧರ್ಮವನ್ನೂ ಅನುಸರಿಸುತ್ತದೆ, ಲೇಖಕನ ಸಾಧನೆಯನ್ನೂ ಅನುಸರಿಸುತ್ತದೆ. ಕೋಟ್ಯಾಧೀಶ್ವರನ ಚಿತ್ರಕೊಡಬೇಕೆಂದು ಬಯಸಿದರೆ 'ಕೋಟ್ಯಾಧೀಶ್ವರನ ಜೀವನ ನೋಡಿದ್ದೇನೆಯೇ—ಅದನ್ನು ಸತ್ಯವಾಗಿ ನಿರೂಪಿಸಬಲ್ಲೆನೇ' ಎಂದು ವಿಚಾರಮಾಡಿಕೊಳ್ಳಬೇಕು. ಕೋಟ್ಯಾಧೀಶ್ವರನ ಜೀವನಕ್ರಮದಲ್ಲಿ ನಿಮಗೆ ಸಹಾನುಭೂತಿ ಇರುವುದೂ ಇಲ್ಲದಿರುವುದೂ ಗೌಣವಿಷಯ. ಆದರೆ ಅವನ ಬಗ್ಗೆ ಬರೆಯುವಾಗ ವಿಗಡಚಿತ್ರ ಕೊಡಬಾರದು. ಕಮ್ಯುನಿಸ್ಟರ ಬರವಣಿಗೆಯನ್ನು ಸಾಹಿತ್ಯವೆಂದು ನಾನು ಒಪ್ಪಿಕೊಳ್ಳದಿರುವುದಕ್ಕೆ ಇದೇ ಕಾರಣ—ಒಂದು ದೃಷ್ಟಾಂತ ಕೊಡಬಯಸುತ್ತೇನೆ. ಆಧುನಿಕ ರಷ್ಯಾದಲ್ಲಿ ಇಲ್ಯಾ ಏರನ್‌ಬರ್ಗ್ (Ilya Ehrenberg) ಉತ್ತಮ ಲೇಖಕನಷ್ಟೆ !

"ಹೌದು ಸರ್. ಆತನ 'ಫಾಲ್ ಆಫ್ ಪ್ಯಾರಿ' (Fall of Paris) ಶ್ರೇಷ್ಠ ಗ್ರಂಥ."

"ಆ ಗ್ರಂಥವನ್ನು ಜೋಲನ 'ಜರ್ಮಿನಾಲ್' (Germinal) ಗ್ರಂಥಕ್ಕೆ ಹೋಲಿಸಿ ನೋಡಿ. ಇಬ್ಬರೂ ಶ್ರಮಜೀವಿಗಳ ಪಕ್ಷಪಾತಿಗಳು—ಇಬ್ಬರೂ ತಮ್ಮ ಚಿತ್ರಕ್ಕೆ ವಿಶಾಲವೇಶ್ಮವನ್ನಾಯ್ದುಕೊಂಡಿದ್ದಾರೆ. ಆದರೆ ಜೋಲ ಕಲಾವಿದ, ಏರನ್‌ಬರ್ಗ್ ಕಮ್ಯುನಿಸ್ಟ್ ಪ್ರಚಾರಕ—ಫ್ರಾನ್ಸಿನ ಪತನಕ್ಕೆ ವೇಗಾ, ಪೀತಾ ಸರ್ಕಾರವೇ ಮೂಲಕಾರಣವೆಂಬುದು ಇತಿಹಾಸ ಪ್ರಸಿದ್ಧವಾದ

ವಿಷಯ. ಆ ಕಾಲದ ಜನತೆಯನ್ನು ಚಿತ್ರಿಸುವಾಗ ಏರನ್‌ಬರ್ಗ್ ಫ್ರೆಂಚರೆಲ್ಲಾ ನೀತಿಬಾಹಿರರೆಂದು ಕಾಣಿಸಿದ್ದಾನೆ. ಅವರಲ್ಲಿ ಕಮ್ಯುನಿಸ್ಟರಾಗಿದ್ದವರು ಮಾತ್ರ ನೀತಿವಂತರೂ, ದೇಶವತ್ಸಲರೂ, ಶಾಂತಿಪ್ರಿಯರೂ ಆಗಿದ್ದರಂತೆ. ಕಮ್ಯುನಿಸ್ಟ್ ಅಲ್ಲದ ಫ್ರೆಂಚ್ ಹೆಣ್ಣುಮಗಳು ಕುಲಟೆ—ಕಮ್ಯುನಿಸ್ಟ್ ಹೆಣ್ಣುಮಗಳು ಮಹಾಪತಿವ್ರತೆ! ಪಕ್ಷಾಭಿಮಾನಕ್ಕೆ, ಮನಸ್ಸಿನ ಪೂರ್ವಾಗ್ರಹಕ್ಕೆ ಸಿಕ್ಕುಬಿದ್ದಿರುವ ಕಲಾವಿದನ ಪತನವನ್ನು 'ಫಾಲ್ ಆಫ್ ಪ್ಯಾರಿ' ಕಾದಂಬರಿಯಲ್ಲಿ ಕಾಣಬಹುದು. ಲೇಖಕ ತನ್ನ ಒಲವು ಪೂರ್ವಾಗ್ರಹ ಅಭಿಮಾನಗಳೆಲ್ಲವನ್ನೂ ಬದಿಗೊತ್ತಿ ಜೀವನದ ಸತ್ಯಚಿತ್ರ ಕೊಡುವುದರ ಕಡೆಗೆ ಲಕ್ಷ್ಯವಿಡಬೇಕು."

"ತಮ್ಮ ಸಲಹೆಗಳನ್ನು ನಾನು ಮರೆಯುವುದಿಲ್ಲ ಸರ್. ಕಿರಿಯ ಲೇಖಕರು—ನಮ್ಮನ್ನು ಹೀಗೆ ಕೂರಿಸಿಕೊಂಡು ಹೇಳುವವರೇ ಇಲ್ಲ ಸರ್. ನನ್ನ 'ಬಯಲ ಬಾಳು' ಕಾದಂಬರಿಯನ್ನು ಹಿಡಿದು ಹಿರಿಯ ಲೇಖಕರ ಮನೆಮನೆ ಅಲೆದೆ. ಕೆಲವರು ಮಾತೇ ಆಡಿಸಲಿಲ್ಲ; ಕೆಲವರು ಹಸ್ತಪ್ರತಿಯನ್ನು ತಿಂಗಳುಗಟ್ಟಳೆ ತಮ್ಮಲ್ಲಿಟ್ಟುಕೊಂಡು ಓದದೆ ಹಿಂದಿರುಗಿಸಿದರು; ಕೆಲವರು ಚೋಟುದ್ದ ಹುಡುಗ—ನೀನೇನು ಬರೆಯಬಲ್ಲೆಯಯ್ಯಾ' ಎಂದು ಮೂದಲಿಸಿದರು.

"ನಿಮ್ಮಲ್ಲಿ ನಿಮಗೆ ನಂಬಿಕೆಯಿದೆಯಲ್ಲವೇ ?"

"ಇದೆ ಸರ್."

"ಹಾಗಾದರೆ ಯಾರು ತೆಗಳಿದರೇನು, ಯಾರು ಹೊಗಳಿದರೇನು ? ಇರುವ ಯೋಗ್ಯತೆಯನ್ನು ಯಾರೂ ಅಳಿಸಲಾರರು, ಇಲ್ಲದ ಯೋಗ್ಯತೆಯನ್ನು ಯಾರೂ ಕೂಡಿಸಿಕೊಡಲಾರರು."

"ನನ್ನ ಕಾದಂಬರಿಯ ಪ್ರಕಟನೆಯ ವಿಷಯ............"

"ಕೂಡಲೇ ಪ್ರಕಟಿಸಬೇಕೇ ?"

"ಏಕೆ ಸರ್."

"ನಾಲ್ಕು ದಿನ ತಡೆದರೊಳ್ಳೆಯದು."

"ನನ್ನ ಪರಿಸ್ಥಿತಿ ವಿವರಿಸಿದ್ದೇನಲ್ಲಾ ಸರ್."

"ನನ್ನ ಪ್ರಕಾಶಕರು ವಿಶ್ವೇಶ್ವರಯ್ಯನವರ ಹತ್ತಿರ ಮಾತನಾಡಿದ್ದೇನೆ. ಮೊತ್ತವಾಗಿ ಮುನ್ನೂರು ರೂಪಾಯಿ ಕೊಡಲೊಪ್ಪಿದ್ದಾರೆ—ನೀವು ಹೋಗಿ ಅವರನ್ನು ಕಂಡು ಉಳಿದ ವಿಷಯ ಮಾತನಾಡಿ."

"ಮುನ್ನೂರು ಬಹಳ ಕಡಿಮೆಯಾಯಿತಲ್ಲ ಸರ್."

"ಕಡಿಮೆಯೇ ! ಇಂದಿನ ನಮ್ಮ ಪ್ರಕಟನ ಪ್ರಪಂಚದ ಪರಿಚಯ ನಿಮಗಿಲ್ಲ. ಮುನ್ನೂರು ಕೊಡುವ ಪ್ರಕಾಶಕರನ್ನು ಬಹಳ ಉದಾರಿಗಳೆಂದು ಪರಿಗಣಿಸಬಹುದು."

"ನೀವು ಹೇಳಿದಂತೆಯೇ ಆಗಲಿ ಸರ್. ತಾವೇ ಮುನ್ನುಡಿ ಬರೆಯಬೇಕು."

"ಅದು ಮಾತ್ರ ಬೇಡ—ನಿಮ್ಮ ಗ್ರಂಥದ ಯೋಗ್ಯತೆಯ ಬಲದ ಮೇಲೆ ಅದು ನಿಲ್ಲಬೇಕು. ನಿಮ್ಮ ಹಿತದ ದೃಷ್ಟಿಯಿಂದಲೂ ನನ್ನ ಮುನ್ನುಡಿ ಬೇಡವೆಂದು ಹೇಳುತ್ತೇನೆ."

"ಏಕೆ ಸರ್."

"ನನ್ನ ವಿರುದ್ಧ ಒಂದು ಗುಂಪು ಎದ್ದಿರುವ ಸಂಗತಿ ನಿಮಗೆ ಗೊತ್ತೇ ಇದೆಯಲ್ಲ--ನೀವೇಕೆ ವಿನಾಕಾರಣ ಅವರ ವಿರೋಧ ಕಟ್ಟಿಕೊಳ್ಳಬೇಕು. ನಾನು ಮುನ್ನುಡಿ ಬರೆದಿರುವೆನೆಂಬ ಕಾರಣಕ್ಕೇ ಅವರು ನಿಮ್ಮ ಪುಸ್ತಕದ ಮೇಲೆ ವಿರುದ್ಧ ಪ್ರಚಾರಮಾಡುತ್ತಾರೆ."

"ವಿಶ್ವೇಶ್ವರಯ್ಯನವರನ್ನು ಇವತ್ತೇ ನೋಡಲೇ ?"

"ನೋಡಿ"

ಎಂದು ಸುತರಾಮಯ್ಯನ ಹಸ್ತಪ್ರತಿಯನ್ನು ಅವನ ಕೈಯಲ್ಲಿಟ್ಟು

"ನಿಮ್ಮ ಸಾಹಿತ್ಯಸೇವೆ ಸಾಂಗವಾಗಿ ನೆರವೇರಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ ಸುತರಾಮಯ್ಯನವರೇ"

ಎಂದು ಹೇಳಿದ.

ಸುತರಾಮಯ್ಯ ಕೃತಜ್ಞತೆ ವ್ಯಕ್ತಪಡಿಸಿ ಹಸ್ತಪ್ರತಿಯೊಂದಿಗೆ ಹೊರಟ.

ಗುಂಡಣ್ಣ ಸಾವಕಾಶವಾಗಿ

"ಈ ಬೆಳಿಗ್ಗೆ ನಿಸ್ಸಾರ್ಥಕವಾಗಲಿಲ್ಲವೆಂದು ನನಗೆ ಸಂತೋಷ" ಎಂದ.

"ಏಕೆ ಗುಂಡಾ ?"

"ಸಾಹಿತ್ಯ, ಸಾಹಿತಿಗಳ ಬಗ್ಗೆ ನೀನಾಡಿದ ಮಾತುಗಳು ಬಹು ತೂಕವಾಗಿದ್ದವು. ಆದರೆ ನಿನ್ನ ಉಪದೇಶ 'ಗೋರ್ಕಲ್ಲಮೇಲೆ ಮಳೆಸುರಿದಂತೆ' ಆಗುವದೇನು ಎನ್ನುವ ನನ್ನ ಅನುಮಾನ ಮತ್ತಷ್ಟು ಸ್ಥಿರವಾಯಿತು."

"ಏಕೆ ?"

"ಈ ಹುಡುಗನ ಚಹರೆ ಚೆನ್ನಿಲ್ಲ."

"ನೀನೇನು ಪೋಲೀಸ್ ಡಿಪಾರ್ಟ್‌ಮೆಂಟ್ ಸೇರಿದೆಯೇನಯ್ಯಾ? ಚಹರೆಪಟ್ಟಿ ಸಿದ್ಧಮಾಡುತ್ತಿರುವೆ."

"ಹಾಗಲ್ಲ ಮೂರ್ತಿ. ಹುಡುಗ ಕೀರ್ತಿಕಾಮಿ, ಧನಕಾಮಿ–ಅದೂ ಹೋಗಲಿ ಏನೋ ಪಾಪ! ಅವನ ಕಷ್ಟಸುಖ ಹೇಗಿದೆಯೋ? ಸಾಹಿತ್ಯವನ್ನು ಶ್ರದ್ಧಾಪೂರ್ವಕವಾಗಿ ರೂಢಿಸಿಕೊಳ್ಳಬೇಕು–ಸಾಹಿತ್ಯ ಸಿದ್ಧಿ ಸುಲಭವಾಗಿ ಲಭಿಸುವುದಿಲ್ಲ ಎಂದು ಅವನಿಗೆ ಮನವರಿಕೆಯಾಗಿಲ್ಲ. ಕಾಫ್ಕಾ, ಜಾಯ್ಸ್ ಓದಿ ತಾನು ಸರ್ವಜ್ಞ ಎಂದು ತಿಳಿದುಕೊಂಡಿದ್ದಾನೆ. ಇದು ವಿದ್ಯಾಭಿಮಾನಿಯ ಮನೋಭಾವವಲ್ಲ."

"ನನ್ನಲ್ಲಿ ಬಂದವರಿಗೆ ಕೈಲಾಗುವ ಸೇವೆಮಾಡಿಬಿಡುತ್ತೇನೆ. ಅವರ ಜಾತಕ ನಾನೇಕೆ ನೋಡಲಿ."

"ನೋಡಬೇಕಾಗುತ್ತದೆ ಮೂರ್ತಿ. ನಿನ್ನ ಸುತರಾಮಯ್ಯನದು ಕುಂಭ ಲಗ್ನವೆಂದು ಕಾಣುತ್ತದೆ. ಕುಂಭಲಗ್ನದವರನ್ನು ಸ್ವಲ್ಪ ದೂರವಿಡುವುದೇ ಒಳ್ಳೆಯದು. ಇವನು ನಾಳೆ ನಿನ್ನ ಪರಮಶತ್ರುವಾದರೆ ನಾನು ಸ್ವಲ್ಪವೂ ಆಶ್ಚರ್ಯಪಡುವುದಿಲ್ಲ."

"ಅದೂ ಆಗಲಿ–ಬೇಡವೆಂದವರು ಯಾರು?"

ಎಂದು ಮೂರ್ತಿನೊಂದು ನುಡಿದ.

ಗಂಟೆ ಹನ್ನೊಂದಕ್ಕೆ ಬಂದಿದ್ದುದನ್ನು ಕಂಡು ಗುಂಡಣ್ಣ ಹೊರಟುನಿಂತ.

ಅವನು ಹೋದಮೇಲೆ ಲಲಿತ ಮೂರ್ತಿಯ ಬಳಿ ಬಂದು

"ಮನಸ್ಸು ಖಿನ್ನವಾಯಿತೇ?" ಎಂದು ಕೇಳಿದಳು.

"ಏಕೆ?"

"ಗುಂಡಣ್ಣನವರ ಕಟುಟೀಕೆಯಿಂದ."

"ಇಲ್ಲ ಲಲಿತಾ–ಗುಂಡಣ್ಣ ಏನೇ ಹೇಳಿದರೂ ನಾನು ತಪ್ಪು ತಿಳಿದು ಕೊಳ್ಳುವುದಿಲ್ಲ. ಅವನೇ ನನ್ನ ನಿಜವಾದ ಹಿತೈಷಿ."

"ಯಾವ ಕಾರಣಕ್ಕೂ ನಿಮ್ಮ ಮನಸ್ಸು ಮುದುಡಬಾರದು ದೊರೆ."

"ಮುದುಡುವುದಿಲ್ಲ ಲಲಿತಾ—ನಿನ್ನ ಪ್ರೇಮದ ಅಮೃತಕಿರಣಗಳು ನನ್ನನ್ನು ಸದಾ ಸಂರಕ್ಷಿಸುತ್ತಿರುವಾಗ ನನಗೇತರ ಭಯ" ಎಂದ.

## ೪

ಒಮ್ಮೊಮ್ಮೆ ಆಲಸಿಗನಾಗಿ ಕಾಣುತ್ತಿದ್ದ ಮೂರ್ತಿಯ ಅಂತರಂಗ ಲಲಿತಮ್ಮ ಒಬ್ಬಳಿಗೇ ಅರ್ಥವಾಗಿದ್ದುದು. ಪರಿಪ್ಲುತ ವಿಚಾರಕ್ಕೆ ಸಶಕ್ತ ಅಭಿವ್ಯಕ್ತಿಯನ್ನೀಯಲು ಅವನ ಅಂತರಂಗದಲ್ಲಾಗುತ್ತಿದ್ದ ತುಮುಲವಿಪ್ಲವ ಕಂಡು ಅವಳ ಹೃದಯಕ್ಕೆ ಅಪಾರ ವೇದನೆಯಾಗುತ್ತಿತ್ತು. 'ಇವರು ಕಲಾವಿದರು ಏಕಾದರು? ಇತರರ ಹಾಗೆ ಸಾಮಾನ್ಯ ಜೀವಿಯಾಗಿದ್ದರೇ ಚೆನ್ನಾಗಿರುತ್ತಿತ್ತಲ್ಲ' ಎಂದುಕೊಳ್ಳುವಳು.

ಆ ಸ್ಥಿತಿಯಲ್ಲಿದ್ದಾಗ ಮೂರ್ತಿ ಜಗತ್ತನ್ನೇ ಮರೆತುಬಿಡುತ್ತಿದ್ದ. ಮನೆಯ ಕಷ್ಟಸುಖ, ಲಲಿತಮ್ಮನ ಆಸೆ ನಿರೀಕ್ಷೆಗಳಮೇಲೆ ಅವನು ಅವಕುಂಠನ ಹಾಕಿಬಿಡುತ್ತಿದ್ದ. ಸೃಷ್ಟಿಕ್ರಿಯೆಯಲ್ಲಿ ತೊಡಗಿದ ಕಲಾವಿದನಿಗೂ ಭೂತಗ್ರಸ್ತನಿಗೂ ಯಾವ ವ್ಯತ್ಯಾಸವೂ ಇಲ್ಲವೆಂಬುದನ್ನು ಲಲಿತಮ್ಮ ಚೆನ್ನಾಗಿ ಮನಗಂಡಿದ್ದಳು.

ಅವಳ ದೈವಿಕ ಸಹನೆ, ಸಹಾನುಭೂತಿ ಪರ್ಯಾಯವಾಗಿ ಮೂರ್ತಿಗೆ ಕ್ರತುಶಕ್ತಿಯನ್ನೊದಗಿಸಿತ್ತು.

ಸೃಷ್ಟಿಕ್ರಿಯೆಯಲ್ಲಿ ನಿರತನಾಗಿದ್ದ ಮೂರ್ತಿ ಕೆಲವು ದಿನ ಯಾರೊಂದಿಗೂ ಮಾತನಾಡುತ್ತಿರಲಿಲ್ಲ–ಕೆಲವು ದಿನ ಊಟವನ್ನೇ ಬಿಟ್ಟುಬಿಡುತ್ತಿದ್ದ–ಹತ್ತಾರು ಕಪ್ ಕಾಫಿ, ಐದಾರುಪ್ಯಾಕ್ ಸಿಗರೇಟ್ ಮೇಲೆ ಅವನ ಜೀವನ ಸಾಗುತ್ತಿತ್ತು. ಒಮ್ಮೊಮ್ಮೆ ವಿನಾಕಾರಣ ಲಲಿತಮ್ಮನ ಮೇಲೆ ಸಿಟ್ಟಾಗುತ್ತಿದ್ದ. ತಾನು ಸಿಟ್ಟಾಗಿದ್ದೇನೆಂಬುದೇ ಅವನ ಮನಸ್ಸಿಗೆ ಬರುತ್ತಿರಲಿಲ್ಲ.

ಕೈಯ್ಯಲ್ಲಿದ್ದ ಕೃತಿ ಮುಗಿದಾಗಲೇ ಈ ಯಾತನೆ ಕೊನೆಗಾಣುತ್ತಿದ್ದುದು. ಕೊನೆಯ ಪಂಕ್ತಿ ಅವನು ಮುಗಿಸುವುದೇ ತಡ ಬೆನ್ನು ಹಿಂದೆ ಅಡಗಿ ಕುಳಿತಿದ್ದ ಜ್ವರ ಮೈಯೇರುತ್ತಿತ್ತು. ಮೇಜು ಬಿಟ್ಟೆದ್ದು ಹಾಸಿಗೆ ಸೇರಲೂ ಅವನಲ್ಲಿ

ತ್ರಾಣವಿರುತ್ತಿರಲಿಲ್ಲ. ಆಗ ಲಲಿತಮ್ಮ ಅವನ ದಾದಿಯಾಗುತ್ತಿದ್ದಳು–ಒಲುಮೆಯ ತಾಯಿಯಾಗುತ್ತಿದ್ದಳು.

ಮೂರ್ತಿ 'ತಾಯಿದೇವಿ'ಯನ್ನು ಮುಗಿಸಿದ್ದ.

ಪದ್ಧತಿಯಪ್ರಕಾರ ಜ್ವರ ಕಾಯುತ್ತಿತ್ತು.

ಜ್ವರದ ಉದ್ವೇಗದಲ್ಲಿ ಮೂರ್ತಿ "ಲಲಿತಾ–ಲಲಿತಾ" ಎಂದು ಕೂಗಿದ.

ಸಮೀಪಪಲ್ಲಿಯೇ ಕುಳಿತಿದ್ದ ಲಲಿತಾ ಅವನ ಹಣೆಮುಟ್ಟಿ

"ಏನು ದೊರೆ" ಎಂದಳು.

"ತಾಯಿದೇವಿ ಓದಿದೆಯಾ ?"

"ಓದಿದೆ."

"ಸರಿಯಾಗಿ ಬಂದಿದೆಯೇ ?"

"ಈಗೇತಕ್ಕೆ ಅದರ ಚಿಂತೆ ?"

"ಇಲ್ಲ ಹೇಳು ಲಲಿತಾ"

"ಅದು ಅಸಾಮಾನ್ಯಕೃತಿಯೆಂದರೆ ಉತ್ಪ್ರೇಕ್ಷೆಯೆಂದು ಭಾವಿಸುವಿರಿ !"

"ನಿಜವಾಗಿಯೂ ಚೆನ್ನಾಗಿದೆಯೇ ?"

"ನಿಮ್ಮ ಕೃತಿಯ ಬಗ್ಗೆ ನಿಮಗೇ ಅಪನಂಬಿಕೆಯೇ ?"

"ಮನುಸ್ಸು ಅನುಭವಿಸುವಷ್ಟನ್ನೂ ಬರವಣಿಗೆಯಲ್ಲಿ ಮೂಡಿಸಲಾಗುವುದಿಲ್ಲವಲ್ಲಾ ಎಂಬ ಕೊರಗು ಸದಾ ನನ್ನನ್ನು ಕಾಡುತ್ತಿದೆ ಲಲಿತಾ–ಅಭಿಮಾನ ಬಿಟ್ಟು ಹೇಳು–ನನ್ನ ಕೃತಿ ಓದಲರ್ಹವಾಗಿದೆಯೇ ?"

"ಕನ್ನಡ ಕಾದಂಬರಿ ಪ್ರಪಂಚದಲ್ಲಿ 'ತಾಯಿದೇವಿ' ಒಂದು ಮೈಲಿಗಲ್ಲು–ಇದು ಉತ್ತಮ ಕಲಾಕೃತಿ ಮಾತ್ರವೇ ಅಲ್ಲ–ನಮ್ಮ ರಾಷ್ಟ್ರವನ್ನು ಕಟ್ಟುವ ಕೃತಿ. ನೂರಾರು ಲೇಖಕರು ಇನ್ನುಮುಂದೆ ಈ ಜಾಡು ತುಳಿಯುತ್ತಾರೆ."

"ಥ್ಯಾಂಕ್ಸ್ ಮೈ ಡಿಯರ್–ಮೆನಿ ಮೆನಿ ಥ್ಯಾಂಕ್ಸ್ (Thanks my dear-many many thanks)."

ಮೂರು ನಾಲ್ಕು ದಿವಸ ಜ್ವರಕಾದು ತಣ್ಣಗಾಗುತ್ತಿತ್ತು. ಮೂರ್ತಿ ಹಾಸಿಗೆ ಬಿಟ್ಟೇಳಲು ಲಲಿತಾ ಅವಕಾಶಕೊಡುತ್ತಿರಲಿಲ್ಲ.

"ಜ್ವರವಿಲ್ಲದಿರುವಾಗ ನಾನೇಕೆ ಮಲಗಿರಬೇಕು ?"

"ನಮ್ಮ ಸಂಸಾರದಲ್ಲಿ ಇಬ್ಬರು ಸರ್ವಾಧಿಕಾರಿಗಳಲ್ಲವೇ ದೊರೆ."

"ಯಾರು ಯಾರು ?"

"ನೀವು–ನಾನು. ಕೃತಿಸೃಷ್ಟಿಯಲ್ಲಿರುವಾಗ ನೀವು ಸರ್ವಾಧಿಕಾರಿಗಳು–ಉಳಿದ ವೇಳೆಯಲ್ಲಿ ನಾನು."

ಮೂರ್ತಿ ನಿಟ್ಟುಸಿರುಬಿಟ್ಟು

"ಪತಿ ಪತ್ನಿಗೆ ತೋರಿಸಬೇಕಾದ ಯಾವ ಆದರ, ಗಮನವನ್ನೂ ನಾನು ನಿನಗೆ ತೋರಿಸುತ್ತಿಲ್ಲ. ಹುಚ್ಚನ ಕೈಹಿಡಿದಿರುವ ನೀನು ಸುಖವನ್ನು ಸ್ವಪ್ನದಲ್ಲಿಯೇ ಕಾಣಬೇಕು."

"ದೊರೆ–ನೀವು ಚಿತ್ತೈಕಾಗ್ರತೆಯಿಂದ ಬರೆಯುತ್ತ ಕುಳಿತಿರುವಾಗ ನಿಮ್ಮ ಮುಖದ ಮೇಲೆ ದಿವ್ಯದೀಪ್ತಿ ಬೆಳಗುತ್ತಿರುತ್ತದೆ. ಅದನ್ನು ನೋಡುವ ಸೌಭಾಗ್ಯಕ್ಕೆ ನಾನು ಜಗತ್ತಿನ ಸಮಸ್ತ ಸಂಪತ್ತನ್ನೂ ಕೊಟ್ಟುಬಿಡಲು ಸಿದ್ಧಳಾಗಿದ್ದೇನೆ."

"ನಾನೇ ಹುಚ್ಚನೆಂದಿದ್ದೆ–ನೀನು ನನಗಿಂತಲೂ ಹೆಚ್ಚಿನ ಹುಚ್ಚಿ."

ಬಾಗಿಲು ತಟ್ಟಿದ ಶಬ್ದವಾಯಿತು.

ತಲೆಬಾಗಿಲು ತೆಗೆದು ಬಂದ ಲಲಿತಮ್ಮ

"ಗಣೇಶರು ಬಂದಿದ್ದಾರೆ" ಎಂದಳು.

ಒಳಪ್ರವೇಶಿಸಿದ ಗಣೇಶ ಮೂರ್ತಿ ಏಳುತ್ತಿದ್ದುದನ್ನು ಕಂಡು

"ಏಳಬೇಡಿ–ಮಲಗಿಕೊಳ್ಳಿ–ನಾನಿಲ್ಲೇ ಕುಳಿತುಕೊಳ್ಳುತ್ತೇನೆ"

ಎಂದು ಮೂರ್ತಿಯ ಮಂಚದ ಬಳಿಗೆ ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡರು.

"ಕ್ಷೇಮವೇ ?" ಎಂದು ಮೂರ್ತಿ ಕೇಳಿದ.

"ಚೆನ್ನಾಗಿದ್ದೇನೆ–ನಿಮಗೆ ಆರೋಗ್ಯವಿಲ್ಲವೆಂದು ತಿಳಿಯಿತು."

"ಯಾರು ಹೇಳಿದರು."

"ವಿಶ್ವೇಶ್ವರಯ್ಯನವರು. 'ತಾಯಿದೇವಿ' ಮುಗಿಯಿತಂತೆ!"

"ಮುಗಿಯಿತು."

"ದೇಹಾರೋಗ್ಯ ಇಷ್ಟು ನಿರ್ಲಕ್ಷಿಸಬೇಡಿ. ಈಚೆಗೆ ನೀವು ಪ್ರತಿತಿಂಗಳೂ ಹಾಸಿಗೆ ಹಿಡಿದು ಮಲಗುತ್ತಿದ್ದೀರಿ."

"ನಿಜ–ಲಲಿತ ಒಳಗೆ ಹೋದಳೇನು ನೋಡಿ."

"ಒಳಗೆ ಹೋದರು."

"ಲಲಿತನಲ್ಲಿಯೂ ಹೇಳಲಾಗದ ಒಳವೇದನೆಯೊಂದನ್ನು ನಿಮ್ಮಲ್ಲಿ ನಿವೇದಿಸಿಕೊಳ್ಳುತ್ತೇನೆ. ಒಂದು ಕೃತಿ ಮುಗಿಸಿದೊಡನೆಯೇ ನನ್ನ ಆಯುಷ್ಯದ ಸ್ವಲ್ಪ ಭಾಗ ಸವೆದುಹೋಯಿತೆಂದು ಭಾಸವಾಗುತ್ತದೆ."

"ದೇಹಶಕ್ತಿಗೂ ಒಂದು ಮಿತಿಯಿದೆ. ರಸಾನುಭವಕ್ಕೂ ದೇಹಶಕ್ತಿಗೂ ತಾರ್ಕಣೆಯಾಗಬೇಕು. ಸದಾ ರಸಸಾಗರದಲ್ಲಿ ಮೀಯುವ ನಿಮಗೆ ತ್ರಿವಿಕ್ರಮ ದೇಹವಿರಬೇಕಾಗಿತ್ತು. ದಯೆಯಿಟ್ಟು ಅವಿಶ್ರಾಂತ ದುಡಿಮೆ ನಿಲ್ಲಿಸಿ. ಒಂದೆರಡು ಕೃತಿಮುಗಿಸಿದ ಮೇಲೆ ನಂದಿ, ನೀಲಗಿರಿ, ಕೊಡೈಕನಾಲ್ ಮೊದಲಾದ ಸ್ಥಳಗಳಿಗೆ ಹೋಗಿ ವಿಶ್ರಾಂತಿಪಡೆದು ಬನ್ನಿ."

"ಆ ಸೌಲಭ್ಯ ನಮಗೆಲ್ಲಿಯದು ಗಣೇಶರೇ. ಕಾಹಿಲೆಬಿದ್ದಾಗ ತೆಗೆದು ಕೊಳ್ಳುವ ಔಷಧದ ಬಿಲ್ ಕೊಟ್ಟರೆ ಸಾಕಾಗಿದೆ—ನನ್ನ ವಿಷಯ ಹಾಗಿರಲಿ, ನೀವು ಹುಬ್ಬಳ್ಳಿಗೆ ಹೋದ ಕೆಲಸವೇನಾಯಿತು ?"

"ನನ್ನ ಶೀಲಾಶ್ಲೀಲ ಪರೀಕ್ಷಿಸುವುದಕ್ಕೆ ಮುಂಬಯಿಂದ ಪಿ. ಬಿ. (Pilot-Bureau) ಸದಸ್ಯರು ಬರುವರಂತೆ ! ಹುನಗುಂದನ ಮೇಲಣ ಆಪಾದನೆಗಳ್ನು ಕಾಮತ್ ತಿಪ್ಪೆಸಾರಿಸಿ, ಅವನನ್ನು ಕಾರವಾರಕ್ಕೆ ಕಳಿಸಿಕೊಡುವ ಹವ್ಯಾಸದಲ್ಲಿದ್ದಾನೆ."

"ಹುನಗುಂದ ನಡೆಸಿದ ಅತ್ಯಾಚಾರ ತಿಳಿದೂ ತಿಳಿದೂ ಅವನನ್ನು ಪಾರ್ಟಿಯಲ್ಲಿಟ್ಟುಕೊಳ್ಳುವರೇ ?"

"ನಮ್ಮದು ಕಮ್ಯುನಿಸ್ಟ್‌ಪಾರ್ಟಿ ಎಂಬುದನ್ನು ನೀವು ಮರೆತಂತಿದೆ."

"ದೊರೆಸ್ವಾಮಿಯ ಸಂಸಾರ ನೀವು ಕೂಡಿಸಿ ಒಳ್ಳೆಯ ಕೆಲಸ ಮಾಡಿದಿರಿ."

"ಹುನಗುಂದನ ಅವಿವೇಕಕ್ಕೆ ಆ ಹೆಣ್ಣುಮಗಳೇಕೆ ನರಕಯಾತನೆ ಅನುಭವಿಸಬೇಕು."

"ಪಾರ್ಟಿಯಿಂದ ನಿಮ್ಮನ್ನು ಹೊರಗೆ ಹಾಕುವರೇ ?"

"ಅದಂತೂ ಸ್ವತಃಸ್ಸಿದ್ಧ–ಕಾಮತ್ ಭೂಮಿಕೆ ಸಿದ್ಧಗೊಳಿಸುತ್ತಿದ್ದಾನೆ."

"ಪಾರ್ಟಿಗೆ ನೀವೇ ಏಕೆ ರಾಜೀನಾಮೆಕೊಡಬಾರದು"

"ಹಾಗೆ ಕೊಡುವಂತಿಲ್ಲ. ಪಾರ್ಟಿ ನಮ್ಮನ್ನು ಹೊರಗೆ ಹಾಕಬಹುದಲ್ಲದೆ ನಾವು ಪಾರ್ಟಿ ಬಿಡಲು ಸಾಧ್ಯವೇ ಇಲ್ಲ."

"ಈ ಪಾರ್ಟಿಯ ಕಪಿಮುಷ್ಠಿಯಿಂದ ಬಿಡುಗಡೆಯೇ ಇಲ್ಲವೇ ?"

"ಇದೆ—ಮೃತ್ಯು !"

"ನೀವೂ ಅಧೀರರಾಗುವಿರಾ ಗಣೇಶ್."

"ಇಲ್ಲ ಇಲ್ಲ–ಪಾರ್ಟಿಯ ಸರ್ವಾಧಿಕಾರದ ವಿರುದ್ಧ ಬಂಡಾಯವೆಬ್ಬಿಸ ಬೇಕೆಂದಿದ್ದೇನೆ."

"ನಿಮ್ಮ ದೃಷ್ಟಿಪಥ ಇನ್ನೂ ಜನಗಳಿಗೆ ಸರಿಯಾಗಿ ಅರ್ಥವಾಗಿಲ್ಲ. ಕಮ್ಯುನಿಸ್ಟ್ ಪಾರ್ಟಿಯ ಬಗ್ಗೆ ವಿಶ್ವಾಸವಿಲ್ಲದವರು ನಿಮ್ಮ ತಾತ್ತ್ವಿಕ ಹೋರಾಟವನ್ನು ಕಡೆಗಾಣಿಸುತ್ತಾರೆ ; ವಿಶ್ವಾಸವಿರುವವರು ಅಧಿಕಾರದಲ್ಲಿರುವ ಗುಂಪಿನ ಬಾಲಬಡಿಯುತ್ತಾರೆ. ರಾಷ್ಟ್ರೀಯ ಪತ್ರಿಕೆಗಳು ನಿಮ್ಮ ಪಾರ್ಟಿಯ ಯಾನ ಸುದ್ದಿಯನ್ನೂ ಪ್ರಕಟಿಸುವುದಿಲ್ಲ. ಕಮ್ಯುನಿಸ್ಟ್ ಮತ್ತು ಕಮ್ಯುನಿಸಂ ಅಭಿಮಾನಿ ಪತ್ರಿಕೆಗಳು ಪಾರ್ಟಿ ಏನೇ ಮಾಡಿದರೂ ನ್ಯಾಯವೆಂದು ಒಪ್ಪಿಕೊಳ್ಳುತ್ತವೆ."

"ಪರಿಸ್ಥಿತಿಯನ್ನು ನೀವು ಚೆನ್ನಾಗಿ ಪೃಥಕ್ಕರಿಸಿದ್ದೀರಿ. ನಮ್ಮ ತತ್ತ್ವ ಸಮರ್ಥನೆಗಾಗಿ ನಾನು ಒಂದು ಪತ್ರಿಕೆ ಆರಂಭಿಸಲು ನಿಶ್ಚಯಿಸಿದ್ದೇನೆ."

"ಪತ್ರಿಕೆಯೆಂದರೆ ಹಣದ ಪ್ರಶ್ನೆ ಬರುತ್ತದೆ."

"ಸದ್ಯಕ್ಕೆ ಮೂರುಕಾಸಿನ ದೈನಂದಿನ ಪತ್ರಿಕೆ ಆರಂಭಿಸಬೇಕೆಂದಿದ್ದೇನೆ. ಒಂದು ಸಣ್ಣ ಪ್ರೆಸ್ ಕೊಳ್ಳಲು ಸಹಾಯಮಾಡಲು ಕೆಲವು ಮಂದಿ ಮಿತ್ರರು ಒಪ್ಪಿಕೊಂಡಿದ್ದಾರೆ. ನಿಮ್ಮ ಸಹಾಯ, ಸಹಾನುಭೂತಿ ಕೋರಲು ಬಂದೆ."

"ಅದನ್ನು ನೀವು ಕೋರಬೇಕಾದ ಅಗತ್ಯವೇ ಇಲ್ಲ ಗಣೇಶರೇ."

"ನಿಮಗೆ ತೊಂದರೆಕೊಡಲು ಮನಸ್ಸು ಹಿಂಜರಿಯುತ್ತದೆ. ಹಗಲಿರುಳೂ ಒಂದೇ ಸಮನಾಗಿ ನೀವು ದುಡಿಯುವುದನ್ನು ಕಂಡರೆ ಮನಸ್ಸಿಗೆ ತುಂಬಾ ವ್ಯಥೆಯಾಗುತ್ತದೆ. ನನ್ನ ಹೋರಾಟಕ್ಕೆ ನಿಮ್ಮ ನೆರವಿನ ನೈತಿಕಬೆಂಬಲ ಬೇಕು. ನಾಳೆ ಬರಲಿರುವ ಮಹಾಚುನಾವಣೆ ನಮ್ಮ ಪಾರ್ಟಿಯ ಭವಿಷ್ಯತ್ತನ್ನು ನಿರ್ಧರಿಸುತ್ತದೆ. ಆ ವೇಳೆಗೆ ಕಣದಲ್ಲಿ ಸಾಕಷ್ಟು ಕೆಮ್ಮಣ್ಣು ಇರಬೇಕೆಂದು ನನ್ನ ಆಶಯ."

"ನಿಮ್ಮ ಸೇವೆಗೆ ನಾನು ಸಿದ್ಧನಾಗಿದ್ದೇನೆ."

"ಇನ್ನೂ ಒಂದು ಪ್ರಾರ್ಥನೆ ಇದೆ."

"ಹೇಳಿ."

"ನಾಯಕನಪಾಳ್ಯದಲ್ಲಿ ನನ್ನ ಇಬ್ಬರು ಮಿತ್ರರು ಒಂದು ಸೇವಾಮಂದಿರ ಸ್ಥಾಪಿಸಿದ್ದಾರೆ. ಗಾಂಧೀತತ್ತ್ವಗಳನ್ನು ಪ್ರಸಾರಮಾಡುವುದೇ ಮಂದಿರದ ಉದ್ದೇಶ. ಗಾಂಧೀಜಯಂತಿಗೆ ನಿಮ್ಮನ್ನೂ ಸೌಭಾಗ್ಯವತಿ ಲಲಿತಮ್ಮನವರನ್ನೂ ಕರೆದುಕೊಂಡು ಬರಬೇಕೆಂದು ಆಮಂತ್ರಣ ಬಂದಿದೆ."

"ನನಗೆ ವ್ಯವಧಾನವೆಲ್ಲಿದೆ ?"

"ನಾಲ್ಕು ದಿನ ವ್ಯವಧಾನಮಾಡಿಕೊಳ್ಳಿ. ನಿಮಗೆ ಸ್ವಲ್ಪ ವಿಶ್ರಾಂತಿ ದೊರೆತಂತಾಗುತ್ತದೆ. ನಾಯಕನಪಾಳ್ಯದ ಇಬ್ಬರು ಮಿತ್ರರು—ಪ್ರಭಾಕರ, ನರಸಿಂಹನಾಯಕ ನನ್ನ ಜತೆ ಸೆರೆಮನೆಯಲ್ಲಿದ್ದರು. ಆದರ್ಶವಾದಿಗಳಾದ ಅವರು ಗಾಂಧೀತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನಮಾಡುವುದಕ್ಕಾಗಿಯೇ ಈ ಮಂದಿರ ಸ್ಥಾಪಿಸಿದ್ದಾರೆ. ನೀವೂ, ಲಲಿತಮ್ಮನವರೂ ಬಂದರೆ ಅವರಿಗೆ ಸಂತೋಷವೂ ಆಗುತ್ತದೆ, ಹೊಸಹುರುಪೂ ಬರುತ್ತದೆ. ಈ ಮಿತ್ರರಿಗೂ ನಿಮಗೂ ಸ್ನೇಹ ಬೆಳೆಯಬೇಕೆಂಬುದೂ ನನ್ನ ಆಶಯ."

"ಆಗಬಹುದು"

ಎಂದು ಮೂರ್ತಿ ಒಪ್ಪಿಕೊಂಡ.

ಗಣೇಶ ಹೊರಡಲನುವಾಗಿ ಮೆಲಕ್ಕೆದ್ದು

"ಆರೋಗ್ಯದ ಕಡೆ ಲಕ್ಷ್ಯವಿಡಿ. ಈ ನಾಡು ನಿಮ್ಮಿಂದ ಬಹಳ ಕೆಲಸ ನಿರೀಕ್ಷಿಸುತ್ತಿದೆ"

ಎಂದು ಹೇಳಿ ಹೊರಟ.

ಗಣೇಶನ ಮಾತು ಮೂರ್ತಿಯ ಕಿವಿಯಲ್ಲಿ ಒಂದೇ ಸಮನಾಗಿ ಮೊರೆಯಲಾರಂಭಿಸಿತು.

'ಈ ನಾಡು ನಿಮ್ಮಿಂದ ಬಹಳ ಕೆಲಸ ನಿರೀಕ್ಷಿಸುತ್ತಿದೆ'

ಎಂದು ತನಗೆ ತಾನೇ ಹೇಳಿಕೊಂಡ.

೫

ಹುನಗುಂದ ದೊರೆಸ್ವಾಮಿಯ ಮನೆಮುರಿದು ಮುಂಬಯಿಗೆ ಓಡಿ ಹೋದುದನ್ನು ಕೇಳಿ ರಾಘವಯ್ಯ ಕುಪಿತನಾಗಿದ್ದ—ಹುನಗುಂದನ ಈ ತಪ್ಪು ಹೆಜ್ಜೆ ತಮ್ಮೆಲ್ಲರನ್ನೂ ಯಾವ ಕಷ್ಟಕ್ಕೆ ಗುರಿಮಾಡುವುದೋ ಎಂಬ ಭೀತಿ ಅವನನ್ನಾವರಿಸಿತ್ತು.

ಪುಟ್ಟಣ್ಣ, ವಶಿಷ್ಠ ಬಂದಾಗ ಪ್ರೂಫು ನೋಡುತ್ತ ಕುಳಿತಿದ್ದ ರಾಘವಯ್ಯ "ಕುಳಿತುಕೊಳ್ಳಿ—ಬಂದುಬಿಟ್ಟೆ" ಎಂದ.

ಕಛೇರಿಯ ಕೆಲಸದಿಂದ ಅರ್ಧಗಂಟೆಯಲ್ಲಿ ಬಿಡುಗಡೆ ಹೊಂದಿದ ರಾಘವಯ್ಯ ಗೆಳೆಯರನ್ನು ಕೂಡಿಕೊಂಡು 'ಕಾಫಿಬಾರ್'ಗೆ ಬಂದು ಕುಳಿತ.

"ಕಾಫಿ ಕುಡಿಯುವಷ್ಟು ದುಸ್ಥಿತಿಗೆ ಬಂದೆಯಾ ರಾಘು"

ಎಂದು ಪುಟ್ಟಣ್ಣ ಹಾಸ್ಯಮಾಡಿದ.

"ಮೊದಲು ಒಂದು ಡೋಸ್ ಕಾಫಿ–ಆಮೇಲೆ ಮುಂದಿನ ಮಾತು."

"ಹುನಗುಂದನಿಂದ ಇವತ್ತು ಕಾಗದ ಬಂದಿದೆ"

ಎಂದು ವಶಿಷ್ಠ ಆರಂಭಿಸಿದ.

"ಓಹೋ! ಅದಕ್ಕೋ ರಾಯರು ಇಷ್ಟುಬೇಗ ನಮ್ಮ ಆಫೀಸಿಗೆ ದಯೆ ಮಾಡಿಸಿದ್ದು! ಅವನ ಸುದ್ದಿ ಹೇಳಬೇಡಪ್ಪಾ!"

"ಕಾಗದದಲ್ಲಿ ಏನು ಬರೆದಿದ್ದಾನೆ ಅದನ್ನಾದರೂ ತಿಳಿದುಕೊಳ್ಳಯ್ಯಾ."

"ಏನು ಬರೆದಿದ್ದಾನೆ."

"ಹುಬ್ಬಳ್ಳಿಸಭೆಯಲ್ಲಿ ಗಣೇಶನಿಗೂ ಅವನ ಪಾರ್ಟಿಯವರಿಗೂ ಸಂಪೂರ್ಣವಾಗಿ ಸೋಲಾಯಿತಂತೆ. ಹುನಗುಂದನಿಗೆ ಗೌರವಯುತ ಬಿಡುಗಡೆ ದೊರೆತು ಅವನಿಗೆ ಹೆಚ್ಚಿನ ಜವಾಬ್ದಾರಿ ಕೆಲಸವನ್ನೂ ಒಪ್ಪಿಸಲಾಗಿದೆಯಂತೆ!"

"ನೋಡು ವಶಿಷ್ಠ–ಇವನನ್ನು ಕಟ್ಟಿಕೊಂಡು, ಇವನು ಹೇಳಿದ ಹಾಗೆ ಕುಣಿದು ನಾವು ಕಪಿಗಳಾದೆವು. ಮೂರ್ತಿ, ಸುದರ್ಶನ, ಗುಂಡಣ್ಣ ಮೊದಲಾದ ಪ್ರಗತಿಶೀಲ ಸಾಹಿತಿಗಳ ವಿರೋಧ ಬೆಳಸಿಕೊಂಡೆವು. ಅದೂ ಹೋಗಲಿ ಎಂದರೆ ಇವನು ಜಾನಕಿಯನ್ನು ಹಾರಿಸಿಕೊಂಡು ಹೋಗಿ ನಮ್ಮ ಗೌರವಕ್ಕೆ ಮಸಿ ಬಳಿದುಬಿಟ್ಟ. ಇನ್ನು ಇವನ ಸಹವಾಸದಿಂದ ದೂರವಿರುವುದೇ ಲೇಸು."

"ಪೂರ್ವಾಪರ ನೀನು ಸ್ವಲ್ಪವೂ ಯೋಚಿಸುವುದಿಲ್ಲ ರಾಘು. ಎತ್ತು ಈಯಿತು ಎಂದರೆ ಕೊಟ್ಟಿಗೆಗೆ ಹಾಕು ಎನ್ನುವ ಹಾಗೇ ಮಾಡುತ್ತೀ. ಜ್ಞಾತಾಜ್ಞಾತವಾಗಿ ನಾವು ಕಮ್ಯುನಿಸ್ಟ್ ಪಾರ್ಟಿಯ ಜತೆ ಸ್ನೇಹ ಬೆಳಸಿದ್ದಾಯಿತು. ಇನ್ನು ನಮ್ಮನ್ನು ಬೇರೆ ರಾಜಕೀಯ ಪಕ್ಷದವರು ಹತ್ತಿರವೂ ಸೇರಿಸುವುದಿಲ್ಲ. ಹುನಗುಂದನ ಕೈ ನಾವು ಬಿಟ್ಟರೆ, ಕಮ್ಯುನಿಸ್ಟ್‌ಪಾರ್ಟಿ ನಮ್ಮ ಕೈಬಿಡುತ್ತದೆ. ಅತ್ತಲೂ ಇಲ್ಲದೆ ಇತ್ತಲೂ ಇಲ್ಲದೆ ನಾವು ತ್ರಿಶಂಕುಸ್ವರ್ಗ ಸೇರಬೇಕಾಗುತ್ತದೆ. —ಹುನಗುಂದನನ್ನು ಕಟ್ಟಿಕೊಳ್ಳುವುದರಿಂದ ನಮಗೆ ಲಾಭವಿದೆಯೇ ವಿನಾ ನಷ್ಟವಿಲ್ಲ."

"ಹೇಗೆ ?"

"ಚೀಣ, ರಷ್ಯಾಗಳಿಗೆ ಭಾರತದಿಂದ ಹೋಗುತ್ತಿರುವ ಸಾಂಸ್ಕೃತಿಕ ನಿಯೋಗಗಳಲ್ಲಿ ಸ್ಥಾನದೊರಕಿಸಲು ನಮಗೆ ಹುನಗುಂದ, ಕಾಮತರ ನೆರವು ಅತ್ಯವಶ್ಯಕ. ಮೂರ್ತಿ, ಸುದರ್ಶನ, ಗುಂಡಣ್ಣ ಇವರ ವಿರುದ್ಧ ಹೋರಾಡಲು ನಮಗೆ ಸಾಧ್ಯವಿಲ್ಲ. ಹುನಗುಂದ ನಮ್ಮ ಪರವಾಗಿ ಹೋರಾಟ ನಡಸುತ್ತಾನೆ. ನೀನೂ, ನಾನೂ, ಪುಟ್ಟಣ್ಣ ಹಣಹಾಕಿ 'ಜನಪದ ಸಾಹಿತ್ಯಮಾಲೆ' ಬೇರೆ ಆರಂಭಿಸಿದ್ದೇವೆ. ಅದನ್ನು ಮುಂದುವರಿಸದಿದ್ದರೆ ನಮ್ಮ ಗೌರವ ಉಳಿಯುವುದಿಲ್ಲ."

" 'ರಕ್ತಧಾರೆ'–'ಮೋಹನಾಂಗಿ' ಹಣೆಯಬರಹ ಏನಾಯಿತು ?"

"ಪ್ರಿಂಟರ್ಸ್ ಬಿಲ್ ಕೂಡ ಹುಟ್ಟಿಲ್ಲ."

"ಈ ಮಾಲೆ ನಮ್ಮ ಮೃತ್ಯುಮಾಲೆಯಾಗುತ್ತದೆ. ಅಜ್ಜಿ ನೂತದ್ದು ಅಜ್ಜನ ಉಡಿದಾರಕ್ಕೆ ಎಂದು ಗಾದೆಯಿರುವಂತೆ, ನಾವು ಸಂಪಾದಿಸುವ ನಾಲ್ಕು ಪುಡಿಗಾಸು ಈ ಗ್ರಂಥಮಾಲೆಗೆ ತೆತ್ತುಬಿಟ್ಟರೆ ನಮ್ಮ ಗತಿ ?"

"ಅದಕ್ಕೊಂದು ಮಾರ್ಗ ಹುಡುಕಿದ್ದೇನೆ. ಹುನಗುಂದ 'ಪೇಜಿನಪೇಪೆ'

ಎನ್ನುವ ಕಾದಂಬರಿ ಬರೆದಿದ್ದಾನೆ. ಅದನ್ನು ನಾವು ಪ್ರ ಕ ಟಿ ಸೋ ೯ ಣ. ಮೂರ್ತಿಯ 'ತಾಯಿದೇವಿ' ಹೊರಬೀಳಲಿದೆ-ಅದರ ವಿರುದ್ಧ 'ಪೇಜಿನ ಪೇದೆ' ನಿಲ್ಲಿಸಿದರಾಯಿತು."

"ಏನುಮಾತು ಹೇಳುತ್ತೀ ವಶಿಷ್ಠ. ಮೂರ್ತಿಯ ಕೃತಿಯ ಮುಂದೆ ಹುನಗುಂದನ ಕೃತಿ ನಿಲ್ಲಿಸಿ ನಾವು ಯಾವ ಪುರುಷಾರ್ಥ ಸಾಧಿಸಲು ಶಕ್ಯ ? ಮೂರ್ತಿಯ ಬಗ್ಗೆ ನಮಗೆ ನೂರೂ ಆಕ್ಷೇಪಣೆಯಿದ್ದರೂ ಅವನು ಪ್ರತಿಭಾಶಾಲಿ ಲೇಖಕ ಎಂಬುದನ್ನು ಒಪ್ಪಿಕೊಳ್ಳಲೇಬೇಕು."

"ದೈನಂದಿನ ಪತ್ರಿಕೆ ಸಂಪಾದಕನಾಗಿ ನೀನು ಈ ಮಾತು ಹೇಳುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ ಪುಟ್ಟಣ್ಣ. ದೈನಂದಿನಪತ್ರಿಕೆ ಬ್ರಹ್ಮಾಸ್ತ್ರ ವಿದ್ದಂತೆ—ಅದರ ಬಲದಿಂದ ನಾವು ಲೇಖಕರನ್ನು ಸೃಷ್ಟಿಮಾಡಬಹುದು—ನಾಶಮಾಡಬಹುದು."

"ನೋಡು ವಶಿಷ್ಠ-ಪತ್ರಿಕೆಗಳ ಆಶ್ರಯದಿಂದ ಮುಂದಕ್ಕೆ ಬರುವವರ ಬಗ್ಗೆ ನಿನ್ನ ನೀತಿ ಅನ್ವಯಿಸಬಲ್ಲುದೇ ವಿನಾ ಸ್ವಸಾಮರ್ಥ್ಯದಿಂದ ಲೋಕ ಪ್ರಿಯತೆ ಗಳಿಸಿಕೊಳ್ಳುವ ಸಾಹಿತಿಗೆ ನಿನ್ನ ಪ್ರಚಾರ—ಅಪಪ್ರಚಾರದಿಂದೇನೂ ಆಗುವುದಿಲ್ಲ. ದ್ರವಿಡ ಕಜಕಂ ಪಾರ್ಟಿಯವರು ರಾಮಾಯಣದ ಮೇಲೆ ಭಯಂಕರ ಅಪಪ್ರಚಾರ ನಡೆಸಿದರು. ಎನ್.ಎಸ್. ಕೃಷ್ಣನ್, ಎಂ.ಆರ್. ರಾಧಾ ರಾಮಾಯಣವನ್ನು ಲೇವಡಿಮಾಡುವ ನಾಟಕಗಳನ್ನಾಡುತ್ತಿದ್ದಾರೆ. ಇದರಿಂದ ರಾಮಾಯಣದ ಪ್ರಸಾರಕ್ಕೆ ಕಿಂಚಿತ್ತಾದರೂ ಅಡ್ಡಿಯೊದಗಿದೆ ಎಂದು ಭಾವಿಸಿರುವೆಯಾ ? ಕೃಷ್ಣನ್, ರಾಧಾ ಇವರ ಅಪಪ್ರಚಾರದಿಂದ ರಾಮಾಯಣ ಓದುವವರ ಸಂಖ್ಯೆ ಬೆಳದಿದೆ."

"ಧರ್ಮಗ್ರಂಥಕ್ಕೂ ಕಾದಂಬರಿಗೂ ವ್ಯತ್ಯಾಸವಿಲ್ಲವೇನಯ್ಯಾ ?"

"ಹುನಗುಂದನಿಗೆ ಸಹಾಯಮಾಡಬೇಕು—ಮಾಡೋಣ. ಆ ದ ರೆ ಅವನು ಎಂದಿಗಾದರೂ ಮೂರ್ತಿಯವರ ಉಂಗುಷ್ಠಕ್ಕೆ ಸರಿಹೋಲುವನೇ ? ಅವರ ಶೈಲಿ, ವಿಷಯವೈವಿಧ್ಯ, ಸಂವಿಧಾನ ಕೌಶಲ್ಯ ಬೇರೆ ಯಾರಲ್ಲಿ ಕಾಣಲು ಸಾಧ್ಯ ?"

ವಶಿಷ್ಠ ಮುಖ ಕೆಂಪಗೆ ಮಾಡಿಕೊಂಡು

"'ಜನಸಂದೇಶ'ದಿಂದ ಮೂರ್ತಿಯನ್ನು ಹೊರಗೆ ಹಾಕಿದುದಕ್ಕೆ ಪಶ್ಚಾತ್ತಾಪವಾಗುತ್ತಿದೆಯೇ ಪುಟ್ಟಣ್ಣ" ಎಂದು ಕೇಳಿದ.

"ಅದಕ್ಕೂ ಇದಕ್ಕೂ ಸಂಬಂಧವಿಲ್ಲ."

ಗೆಳೆಯರಲ್ಲಿ ಘರ್ಷಣೆ ಆರಂಭವಾದುದನ್ನು ಕಂಡು ರಾಘವಯ್ಯ "ನಾನೊಂದು ಸುದ್ದಿ ಕೇಳಿದೆ—ನಿಜವೇನಯ್ಯಾ ?" ಎಂದ.

"ಏನು ಸುದ್ದಿ ?"

"ಸುತರಾಮಯ್ಯ ಒಂದು ಕಾದಂಬರಿ ಬರೆದಿದ್ದಾನಂತೆ—ಅದನ್ನು ಮೂರ್ತಿ ತಿದ್ದಿ ಪ್ರಕಟಿಸುತ್ತಿರುವನಂತೆ !"

"ಇರಬಹುದು."

"ಹುನಗುಂದನ 'ರಕ್ತಧಾರೆ'ಗೆ ಸುತರಾಮಯ್ಯನ ಕೈಯಲ್ಲಿ ಮುನ್ನುಡಿ ಬರೆಸಬೇಕೆಂದಿದ್ದೆ !"

"ಸುತರಾಮಯ್ಯ ಮೂರ್ತಿಗೆ ತಾಳಿಕಟ್ಟಿರುವನೆಂದು ಭಾವಿಸಿರುವೆಯಾ ?"

"ಇಲ್ಲವೇ ?!"

"ಅವನೊಬ್ಬ ಸಮಯಸಾಧಕ–ಆರುದೋಸೆ ಕೊಟ್ಟರೆ ಅತ್ತೆಕಡೆ, ಮೂರು ದೋಸೆ ಕೊಟ್ಟರೆ ಸೊಸೆ ಕಡೆ. ಅವನ 'ಬಯಲ ಬಾಳು' ಹೊರಬರಲಿ ಎಂದು ಕಾದಿದ್ದೇನೆ."

"ಏನು ಮಾಡುತ್ತೀ ?"

"ಅದೇ ಕಾಲಕ್ಕೆ ಮೂರ್ತಿಯ 'ತಾಯಿದೇವಿ' ಪ್ರಕಟವಾಗುತ್ತದೆ. ಎರಡನ್ನೂ ತುಲನಾತ್ಮಕ ದೃಷ್ಟಿಯಿಂದ ವಿಮರ್ಶಿಸಿ ಸುತರಾಮನ ಕಾದಂಬರಿ, ಮೂರ್ತಿಯ ಕಾದಂಬರಿಗಿಂತಲೂ ಸಾವಿರಪಾಲು ಮೇಲು ಎಂದು ಸಾಧಿಸುತ್ತೇನೆ."

"ಕರಿ ಕಾಗೆಯನ್ನು ನೀನು ಬಿಳಿ ಕಾಗೆ ಎಂದು ಸಾಧಿಸಬಹುದು—ನಿನ್ನ ವಾದ ಯಾರು ಒಪ್ಪಿಕೊಳ್ಳುತ್ತಾರೆ ?"

"ಓದುಗರು ಒಪ್ಪದಿದ್ದರೂ ಚಿಂತೆಯಿಲ್ಲ. ಸುತರಾಮ ಒಪ್ಪಿಕೊಳ್ಳುತ್ತಾನೋ ಇಲ್ಲವೋ—ಸಾಕು—ನಮ್ಮ ಕೆಲಸವಾಯಿತು. 'ಮೂರ್ತಿಗಿಂತಲೂ ನೀನು ಹೆಚ್ಚಿನ ಪ್ರತಿಭಾಶಾಲಿ' ಎಂಬ ಅಭಿಪ್ರಾಯ ಅವನ ತಲೆಗೆ ಹಾಕಿದರೆ

ಸುತರಾಂ ನಾವು ಸಾಕಿದ ನಾಯಿಮರಿಯಾಗುತ್ತಾನೆ. ಅವನ ಕೈಯಲ್ಲೇ ಮೂರ್ತಿಯ ವಿರುದ್ಧ ಲೇಖನಗಳನ್ನು ಬರೆಸುತ್ತೇನೆ ನೋಡುತ್ತಿರು."

"ನೀನು ಚಂಡಾಲ ಕಣೋ ವಶಿಷ್ಠ"

ಎಂದು ರಾಘವಯ್ಯ ಅಭಿಮಾನಪೂರ್ವಕವಾಗಿ ನುಡಿದ.

"ನನ್ನ ಸ್ಕೀಮ್ (Scheme) ಎಲ್ಲರಿಗೂ ಒಪ್ಪಿಗೆ ತಾನೇ !"

"ಒಪ್ಪದಿದ್ದರೆ ನೀನು ಬಿಡುತ್ತೀಯಾ ?"

"ಇನ್ನು ನಡೆಯಿರಿ. ಸೆಲಿಬ್ರೇಟ್ (Celebrate) ಮಾಡೋಣ."

"ಎಲ್ಲಿಗೆ ಹೋಗುವುದು ?"

"ಎಲ್ಲಾ ರಸ್ತೆಗಳೂ ನಮ್ಮನ್ನು ಕೊಂಡೊಯ್ಯುವುದು........"

"ಸುಖಜಗತ್ತಿಗೆ"

"ಸುಖಜಗತ್ತಿಗೆ"

ಎಂದು ವಶಿಷ್ಠನೂ ದನಿಗೂಡಿಸಿದ.

೬

ಮೂರ್ತಿ ನಾಯಕನಪಾಳ್ಯದ ಆಹ್ವಾನ ಅಂಗೀಕರಿಸುವುದಕ್ಕೆ ಅವನಿಗೆ ಗಣೇಶನಲ್ಲಿದ್ದ ಸಹಜ ವಿಶ್ವಾಸ, ಗೌರವ ಕಾರಣವಾಗಿದ್ದುದಲ್ಲದೆ, ಗಾಂಧೀ ಸೇವಾಮಂದಿರದ ಕಾರ್ಯಕಲಾಪಗಳನ್ನು ನೋಡಬೇಕೆಂಬ ಆಕಾಂಕ್ಷೆಯೂ ಕಾರಣವಾಗಿತ್ತು.

ಮೂರ್ತಿ ಆಹ್ವಾನ ಅಂಗೀಕರಿಸಿ, ಗಣೇಶನಿಗೂ ಮಾತುಕೊಟ್ಟದ್ದೂ ಆಗಿತ್ತು. ತಾನು ಊರುಬಿಟ್ಟು ಹೋಗುವುದರಿಂದ 'ಅಭಯಾಶ್ರಮ'ದ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತದೆಂದು ಲಲಿತಮ್ಮ

"ನೀವೂ ಗಣೇಶರೂ ಹೋಗಿ ಬನ್ನಿ" ಎಂದಳು.

"ಆಹ್ವಾನವಿರುವುದು ಇಬ್ಬರಿಗೆ—ನನಗೊಬ್ಬನಿಗೇ ಅಲ್ಲ."

"ಈಚೆಗೆ ನಾನು 'ಅಭಯಾಶ್ರಮ'ವನ್ನು ತುಂಬ ದುರ್ಲಕ್ಷಿಸುತ್ತಿದ್ದೇನೆ."

"ತಪ್ಪು ನಿನ್ನದಲ್ಲ—ನನ್ನದು."

"ಇಬ್ಬರದೂ ತಪ್ಪಿಲ್ಲವೆಂದೇ ನನ್ನ ಭಾವನೆ. 'ಅಭಯಾಶ್ರಮ'ದ ಕೆಲಸ ನನಗೆ ಅತಿಪ್ರಿಯವಾದರೂ, ನಿಮ್ಮ ಸೇವೆ ಅದಕ್ಕೂ ಹಿರಿಯದು."

"ಅಭಯಾಶ್ರಮದ ಪ್ರಗತಿಗೆ ನಾನು ಅಡ್ಡಿ ಬಂದಂತಾಯಿತು."

"ಅಡ್ಡಿಯೇ ?—ನಿಮ್ಮಿಂದಲೇ ಅಲ್ಲವೇ ಅಭಯಾಶ್ರಮದ ಬಗ್ಗೆ ನನಗೆ ವಿಶ್ವಾಸಹುಟ್ಟಿದುದು."

"ಈಗ ನಾಯಕನಪಾಳ್ಯದ ವಿಷಯ ಏನು ಮಾಡುತ್ತೀ ?"

"ನೀವು ಬಾರೆಂದರೆ ನಾನು ಒಲ್ಲೆಯೆನ್ನುತ್ತೇನೆಯೇ ?"

"ಬಾ ಲಲಿತ–ಸೇವಾಮಂದಿರದ ವಿಷಯ ಗಣೇಶರೂ ಪ್ರಶಂಸಿಸಿದ್ದಾರೆ, ಸುಹೃದಯರ ಸಂಗದಲ್ಲಿ ನಾಲ್ಕು ದಿನ ನಾವು ಕಳೆದರೆ........"

"ಅಸುಹೃದಯರ ಸಂಗದಲ್ಲಿ ಜೀವಮಾನ ಕಳೆಯಲು-ಸಾಧ್ಯವಾಗುತ್ತದೆ."

ಅಪೂರ್ಣವಾಗಿ ತಾನು ವ್ಯಕ್ತಮಾಡಿದ್ದ ಭಾವನೆಯನ್ನು ಲಲಿತ ಪೂರ್ಣಗೊಳಿಸಿದುದನ್ನು ಕಂಡು ಮೂರ್ತಿ ಗಹಗಹಿಸಿ ನಕ್ಕು

"ನನ್ನ ಅಂತರಂಗದ ಒಳಹೊರಗನ್ನು ನಿನ್ನಂತೆ ಯಾರೂ ಅರಿಯಲಾರರು ಲಲಿತ."

ಎಂದವನೇ ಹೊರಗೆ ಹೊರಡಲನುವಾಗಿ ಎದ್ದು ನಿಂತು,

"ನಾನು ವಿಶ್ವೇಶ್ವರಯ್ಯನವರನ್ನು ಕಂಡು ಬರುತ್ತೇನೆ."

ಎಂದು ಹೇಳಿ ಹೊರಟ.

ವಿಶ್ವೇಶ್ವರಯ್ಯ ಸ್ಥಾಪಿಸಿದ್ದ **'ವಿಕಾಸ ಮುದ್ರಣಾಲಯ'**ದ ಹೆಸರು ಒಮ್ಮೊಮ್ಮೆ ಮುದ್ರಾರಾಕ್ಷಸನ ಹಾವಳಿಗೆ ಸಿಕ್ಕಿ **ಮುದ್ರಣಲಾಯ**ವಾಗುತ್ತಿತ್ತು. ಪ್ರೂಫು ತಿದ್ದುತ್ತ ವಿಶ್ವೇಶ್ವರಯ್ಯನೇ ನಕ್ಕು

"ನನಗಿಂತಲೂ ನನ್ನ ಕಂಪೋಸಿಟರುಗಳು (Campositors) ಬುದ್ಧಿವಂತರು—ಪ್ರೆಸ್ ಹೆಸರು ನಾನು ತಪ್ಪಾಗಿ ಹಾಕಿದ್ದರೂ ಅವರೇ ತಿದ್ದಿ ಸರಿಪಡಿಸುತ್ತಾರೆ"

ಎಂದನ್ನುತ್ತಿದ್ದ. ಮುದ್ರಾರಾಕ್ಷಸ ನಾಮಕರಣ ಮಾಡಿದ್ದಂತೆ ಅವನ ಪ್ರೆಸ್ ಒಂದು ಗಾಡೀಖಾನೆಯಲ್ಲಿ ಸ್ಥಾಪಿತವಾಗಿತ್ತು. ಒಂದು ಹಳೆಯ ಜಪಾನ್ ಸಿಲೆಂಡರ್—ನಾಲ್ಕಾರು ಕೇಸುಗಳ ಅಚ್ಚು ಮೊಳೆಗಳು. ಕಟಿಂಗ್, ಸ್ಟಿಚಿಂಗ್, ರೂಲಿಂಗ್, ನಂಬರಿಂಗ್ (Cutting, Stitching, Ruling, numbering) ಮುಂತಾದ ಕೆಲಸಗಳಿಗೆ ವಿಶ್ವೇಶ್ವರಯ್ಯ ಹೊರಗಿನ ಪ್ರೆಸ್ಸಿನ ನೆರವು ಕೋರಲೇ ಬೇಕಾಗಿತ್ತು.

'ವಿಕಾಸ ಮುದ್ರಣಾಲಯ'ದ ಜಪಾನ್ ಸಿಲೆಂಡರ್ ನಾಲ್ಕುವರ್ಷ ವೃತ್ತಪತ್ರಿಕೆಯ ಕಛೇರಿಯೊಂದರ ಸೇವೆ ಸಲ್ಲಿಸಿ ವಿಶ್ವೇಶ್ವರಯ್ಯನ ಕೈಸೇರಿತ್ತು. ಜಪಾನ್ ಜನಗಳ ಸಾಹಸದ ಪ್ರತೀಕವಾಗಿ ಸಿಲೆಂಡರ್ ಇತ್ತೆಂದು ದಾರಾಳವಾಗಿ ಹೇಳಬಹುದು. ಶಕ್ತಿಮೀರಿದ ಸೇವಾಜೀವನದಿಂದ ಅಕಾಲಿಕ ವೃದ್ಧಾಪ್ಯ ತಳೆದಿದ್ದ ಸಿಲೆಂಡರ್ ಇನ್ನೂ ಕೆಲಸ ಮಾಡಲು ಸಿದ್ಧವಾಗಿತ್ತು. ಒಮ್ಮೊಮ್ಮೆ ಅದರಲ್ಲಿ ಅಚ್ಚಾಗುತ್ತಿದ್ದ ಹಾಳೆಗಳು ಫಾಲ್ಕನ್, ಮರ್ಕ್ಯುರ್ ಮೊದಲಾದ ಪ್ರಸಿದ್ಧ ಮುದ್ರಣ ಯಂತ್ರಗಳನ್ನೂ ನಾಚಿಸುತ್ತಿತ್ತು. ಅಕಸ್ಮಾತ್ತಾಗಿ ಸಿಲೆಂಡರ್ ನಿಂತು

ಹೋದರೆ ನಿಂತೇ ಹೋಗುತ್ತಿತ್ತು. ಯಂತ್ರದ ರೋಗಗ್ರಸ್ತ ಭಾಗಕ್ಕೆ ಶಸ್ತ್ರ ಚಿಕಿತ್ಸೆಯಾಗಿ, ಪ್ಲಾಸ್ಟಿಕ್ ಸರ್ಜರಿಯ ಮೂಲಕ, ಬೇರೆ ಭಾಗವನ್ನು ಜೋಡಿಸಿದರೇ ಅದು ಮತ್ತೆ ಓಡಲಾರಂಭಿಸುತ್ತಿತ್ತು.

ಇಂಥ ಅನಿವಾರ್ಯ ತಿಂಗಳಿಗೆ ಹದಿನೈದು ದಿನ 'ವಿಕಾಸ ಮುದ್ರಣಾಲಯ'ಕ್ಕೆ ತಪ್ಪಿದ್ದಲ್ಲ. ಆ ಕಾಲದಲ್ಲಿ ಅಚ್ಚು ಹಾಕಿಸಲು ಜೋಡಿಸಿದ ಮೊಳೆಗಳನ್ನು ಬೇರೆ ಪ್ರೆಸ್ಸಿಗೆ ಕಳಿಸಿಕೊಟ್ಟು ಸ್ವಯಂ ವಿಶ್ವೇಶ್ವರಯ್ಯನೇ ತನ್ನ ಯಂತ್ರದ ಚಿಕಿತ್ಸೆಗೆ ನಿಲ್ಲುತ್ತಿದ್ದ.

ಕೈಮೈಯೆಲ್ಲಾ ಮಸಿಮಾಡಿಕೊಂಡು, ಸಿಲೆಂಡರ್ ಕೆಳಗೆ ಮಲಗಿ ಯಾವದೋ ನಟ್ಟನ್ನು ಬಿಗಿಮಾಡುತ್ತಿದ್ದ ವಿಶ್ವೇಶ್ವರಯ್ಯನನ್ನು ನೋಡಿ ಮೂರ್ತಿ

"ಜಪಾನ್‌ಬಂಧು ಮತ್ತೆ ಕಾಹಿಲೆಬಿದ್ದಿದ್ದಾನೇನು ?" ಎಂದು ಕೇಳಿದ.

"ಕುಳಿತುಕೊಳ್ಳಿ ಸಾರ್—ಬಂದುಬಿಟ್ಟೆ"

ಎಂದು ವಿಶ್ವೇಶ್ವರಯ್ಯ ಯಂತ್ರದ ಕೆಳಗಿನಿಂದ ಹೊರಬಂದು ಕಾಟನ್ ವೇಸ್ಟ್ (Cotton waste) ನಲ್ಲಿ ಮೈಕೈ ಒರಸಿಕೊಂಡು

"ಯಂತ್ರಕ್ಕೇನೂ ಆಗಿಲ್ಲಸಾರ್-ಕೆಲವು ನಟ್ಟುಗಳು ಅಳ್ಳಕವಾಗಿದ್ದವಷ್ಟೆ."

"ದಿನಕ್ಕೊಮ್ಮೆಯಾದರೂ ಮೈಕೈ ಮಸಿಮಾಡಿಕೊಳ್ಳದಿದ್ದರೆ ನಿಮಗೆ ಸಮಾಧಾನವಿರುವುದೇ ಇಲ್ಲ—ಅಲ್ಲವೇ ವಿಶ್ವೇಶ್ವರಯ್ಯನವರೇ ?"

ಮೂಗಿನ ಮೇಲಿನ ಮಸಿ ಒರಸಿಕೊಳ್ಳುತ್ತ ವಿಶ್ವೇಶ್ವರಯ್ಯ

"ಯಂತ್ರವೂ ಮನುಷ್ಯನಂತೆಯೇ ಸಾರ್. ಅದಕ್ಕೂ ಸೇವೆ, ಶುಶ್ರೂಷೆ, ಆದರ, ಉಪಚಾರ ಎಲ್ಲಾ ಆಗಬೇಕು."

"ನಿಮ್ಮ ಸಿಲೆಂಡರ್ ಬದಲಾಯಿಸಿಯಪ್ಪ—ಈ ಅವಸ್ಥೆ ನೋಡಲಾರೆ."

"ಎಲ್ಲಿ ಸಾರ್—ಹನ್ನೆರಡು ಸಾವಿರ ರೂಪಾಯಿ ಕೈಯಲ್ಲಿಟ್ಟುಕೊಂಡರೆ ತಾನೆ ಬೇರೆ ಯಂತ್ರ ಕೊಳ್ಳುವ ಯೋಚನೆ."

"ಪ್ರೂಫ್ ಸಿದ್ಧವಾಗಿದೆಯೇ ?"

"ಒಂದು ಫಾರ್ಮು ರೆಡಿಯಾಗಿದೆ"

ಎಂದು ತಪ್ಪೋಲೆಗಳನ್ನು ಮೂರ್ತಿ ಕೈಯಲ್ಲಿಟ್ಟ.

ಮೂರ್ತಿ ತಪ್ಪೋಲೆಗಳನ್ನು ತಿದ್ದುತ್ತಾ

"ನಾನು ಒಂದುವಾರ ಊರಿನಲ್ಲಿರುವುದಿಲ್ಲ ವಿಶ್ವೇಶ್ವರಯ್ಯನವರೇ. ನೀವೇ ಪ್ರೂಫ್ ನೋಡಿ ಸ್ಟ್ರೈಕ್ ಆರ್ಡ್ಡರ್ (Strike order) ಕೊಡಬೇಕು."

"ಎಲ್ಲಿಗೆ ಸಾರ್ ಪ್ರಯಾಣ ?"

"ನಾಯಕನಹಳ್ಳಿ ಗಾಂಧಿ ಸೇವಾಮಂದಿರಕ್ಕೆ—ಜತೆಯಲ್ಲಿ ಲಲಿತ, ಗಣೇಶರೂ ಬರುತ್ತಾರೆ."

"ಹೋಗಿ ಬನ್ನಿ—ನಾನು ನೋಡಿಕೊಳ್ಳುತ್ತೇನೆ."

"ಸುತರಾಮಯ್ಯನವರ ಪುಸ್ತಕ ಎಲ್ಲಿಗೆ ಬಂತು ?"

"ಹತ್ತು ಫಾರ್ಮು ಆಯಿತು ಸಾರ್—ಇನ್ನು ಆರು ಫಾರ್ಮ್ ಆದರೆ ಮುಗಿಯುತ್ತದೆ."

"**ತಾಯಿದೇವಿ—ಬಯಲಬಾಳು** ಎರಡನ್ನೂ ಒಟ್ಟಿಗೆ ಪ್ರಕಟಿಸುತ್ತಿರುವಿರಾ ?"

"ಹೂ!"

"ಹಾಗೇಕೆ ಮಾಡುವಿರಿ ? ಅವರ ಗ್ರಂಥದ ಮುದ್ರಣ ಬೇಗ ಮುಗಿಯುತ್ತದೆ. ಅದನ್ನೇ ಮೊದಲು ಪ್ರಕಟಿಸಿ."

"ನಿಮ್ಮ ಗ್ರಂಥದ ಜತೆ ಅದನ್ನು ಪ್ರಕಟಿಸಿದರೇ ಕೆಲವು ಪ್ರತಿಗಳಾದರೂ ಮಾರಾಟವಾಗುತ್ತವೆ."

"ಅವರ ಪುಸ್ತಕ ಮಾರಾಟವಾಗುವ ಸಂಭವವಿಲ್ಲವೇ ?"

"ಆಗಬಹುದು—ಬಹಳ ಸಾವಕಾಶವಾಗಿ."

"ನಿಮಗೆ ನಾನು ತೊಂದರೆ ಕೊಟ್ಟಂತಾಯಿತು."

"ಚಿಂತೆಯಿಲ್ಲ ಸಾರ್. ಒಂದು ಮುದ್ರಣ ಹೇಗೂ ತಳ್ಳಿಕೊಳ್ಳುತ್ತೇನೆ.... ಆದರೆ ಈ ವ್ಯಕ್ತಿ ಕಂಡರೇ ನನಗೆ ಬೇಸರ."

"ಏಕೆ ?"

"ಬಹಳ ಮಾತಾಡುತ್ತಾರೆ ಸಾರ್. ತಮ್ಮ ಪುಸ್ತಕದ ಪ್ರೂಫ್ ನೋಡುವುದಕ್ಕೆ ದಿನವೂ ಇಲ್ಲಿಗೆ ಬರುತ್ತಾರೆ. ಮನುಷ್ಯ ತನ್ನ ಕೆಲಸ ತಾನು ಮಾಡಿಕೊಂಡು ಹೋಗುವುದೇ ಇಲ್ಲ—ಅರ್ಧ ಮುಕ್ಕಾಲು ಗಂಟೆಯಾದರೂ ಸೋದರ ಸಾಹಿತಿಗಳ ಭರ್ತ್ಸನೆಮಾಡಿದಲ್ಲದೆ ಆತನಿಗೆ ತೃಪ್ತಿಯಿಲ್ಲ."

"ಹಾಗೇನು !"

"ಮೊನ್ನೆ ಮೇಜಿನ ಮೇಲಿದ್ದ ತಮ್ಮ ಕಾದಂಬರಿಯ ತಪ್ಪೋಲೆಗಳನ್ನು ಓದುತ್ತ ಟೀಕೆ ಆರಂಭಿಸಿದರು."

"ಏನು ಹೇಳಿದರು ?"

"ಯಾರು ಯಾರೋ ಇಂಗ್ಲಿಷ್, ಅಮೆರಿಕನ್ ಕಾದಂಬರಿಕಾರರ ಹೆಸರು ಹೇಳಿ 'ಹಾಗಿಲ್ಲ' ಎಂದರು. ನೀವು ಕೋಪಮಾಡಿಕೊಳ್ಳದಿದ್ದರೆ ನಾನೊಂದು ಪ್ರಶ್ನೆ ಕೇಳುತ್ತೇನೆ ಸರ್."

"ಕೇಳಿ ವಿಶ್ವೇಶ್ವರಯ್ಯ."

"ಈ ಹಾವಿಗೇಕೆ ಸಾರ್—ನೀವು ಹಾಲೆರೆಯುತ್ತಿರುವಿರಿ ?"

"ಸೋದರ ಸಾಹಿತಿಯೆಂದು."

"ಪರನಿಂದೆಯನ್ನೇ ಒಂದು ಧರ್ಮವಾಗಿ ಅವಲಂಬಿಸಿರುವವನು ಸಾಹಿತಿಯಾಗಬಲ್ಲನೇ ? ಸುತರಾಮಯ್ಯ ಎಂದಿಗಾದರೂ ಒಂದು ಒಳ್ಳೆಯ ಕೃತಿ ರಚಿಸಬಲ್ಲನೆಂದು ನೀವು ನಂಬುವಿರಾ ?"

"ಅವರ ಬಗ್ಗೆ ಅಂತಿಮನಿರ್ಧಾರ ವ್ಯಕ್ತಮಾಡಲು ನಾನೀಗಲೇ ಅವಸರಪಡುವುದಿಲ್ಲ."

"ಜನಸಂದೇಶ ಪುಟ್ಟಣ್ಣನಿಗೂ, ಸುತರಾಮಯ್ಯನಿಗೂ ಯಾವ ವ್ಯತ್ಯಾಸವೂ ಇಲ್ಲವೆಂದು ನನ್ನ ಅಭಿಪ್ರಾಯ."

"ಸುತರಾಮಯ್ಯ ನನ್ನ ಬಗ್ಗೆ ಟೀಕೆಮಾಡಿದರೆಂದು ಇಷ್ಟು ಮುನಿದಿರುವಿರಾ ?"

"ಹೌದು–ಅದು ದೊಡ್ಡ ಕಾರಣ. ನೀವು ಅವನ ಕೈಹಿಡಿದಿದ್ದರಿಂದಲೇ ನಾವು ಪ್ರಕಟನೆಗೆ ಒಪ್ಪಿಕೊಂಡು, ನಾಲ್ಕು ಕಾಸು ಹೆಚ್ಚುಕೊಡಲು ಸಮ್ಮತಿಸಿದುದು. ಅವನ ಹಸ್ತಪ್ರತಿ ಓದಿ, ತಿದ್ದಿ, ಪ್ರಕಟನೆಯ ವ್ಯವಸ್ಥೆಮಾಡಿ ಉಪಕಾರ ಮಾಡಿದ ನಿಮ್ಮನ್ನು ತೆಗಳಿದರೆ, ಆ ಮನುಷ್ಯನಿಗೆ ನಾವೇನು ಬೆಲೆ ಕೊಡಲು ಸಾಧ್ಯ ?"

"ವ್ಯಕ್ತಿಗೂ ಅವನ ಕೃತಿಗೂ ತಾಳೆಹಾಕಬಾರದು ವಿಶ್ವೇಶ್ವರಯ್ಯ."

"ಹೇಗೆ ಸಾಧ್ಯ ಸಾರ್. ವ್ಯಕ್ತಿ ವಿಚಾರಮಾಡುವುದನ್ನು, ಆಚರಿಸುವುದನ್ನು ಅವನ ಕೃತಿ ಪ್ರತಿಬಿಂಬಿಸುತ್ತದೆ."

"ಈ ಮಾತನ್ನು ತಾತ್ತ್ವಿಕವಾಗಿ ಹೇಳುತ್ತಿರುವಿರೋ ಸುತರಾಮಯ್ಯನಿಗೆ ಅನ್ವಯಿಸಿ ಹೇಳುತ್ತಿರುವಿರೋ?"

"ತಾತ್ತ್ವಿಕವಾಗಿಯೇ ಹೇಳುತ್ತಿದ್ದೇನೆ."

"ಧರ್ಮಸಂಬಂಧವಾದ ವಿಷಯಗಳಿಗೆ ನಿಮ್ಮ ಮಾತು ಅನ್ವಯಿಸುತ್ತದೆ-ಸಾಹಿತ್ಯಕ್ಕಲ್ಲ. ತನ್ನ ಜೀವನ, ಅನುಭವವಷ್ಟನ್ನೇ ಆಧಾರವಾಗಿಟ್ಟುಕೊಂಡು ಸಾಹಿತಿಯಾಗುವವನು ಒಂದೇ ಕೃತಿ ರಚಿಸಬಲ್ಲ. ಸಾಹಿತಿ ಕಲಾವಿದನಷ್ಟೇ! ದೊರೆಯ ಪಾತ್ರ ಅಭಿನಯಿಸುವ ನಟ ದೊರೆಯೇ ಅಗಿರಬೇಕೆಂಬುದೂ, ಕಳ್ಳನ ಪಾತ್ರ ಅಭಿನಯಿಸುವ ನಟ ಕಳ್ಳನೇ ಆಗಿರಬೇಕೆಂಬುದೂ ಎಷ್ಟು ಸೂಕ್ತವೋ ಅಷ್ಟೇ ಸೂಕ್ತ ನಿಮ್ಮ ವಾದ. ಕಾದಂಬರಿಯಲ್ಲಿ ನಾವು ಸುಕುಮಾರ ವ್ಯಕ್ತಿಗಳನ್ನಲ್ಲದೆ ಆವಿದ್ಧ ವ್ಯಕ್ತಿಗಳನ್ನೂ ತರುತ್ತೇವೆ. ಜಗತ್ತಿನ ಹಾಗೂ ಜೀವನದ ಸಮ್ಯಗ್ದರ್ಶನ ಮಾಡಿಸಲೆತ್ನಿಸುವ ಕಾದಂಬರಿಕಾರ ಕೇವಲ ಸುಕುಮಾರ ವ್ಯಕ್ತಿಗಳನ್ನು, ಉದಾತ್ತಜೀವಿಗಳನ್ನು ಮಾತ್ರ ಚಿತ್ರಿಸಿದರೆ ಸಾಲದು. ಬೃಹತ್ ಸ್ವರೂಪ ಹೊತ್ತು ನಿಂತಿರುವ ಜೀವನದಲ್ಲಿ ಯೋಗ್ಯರು ಅಯೋಗ್ಯರು, ಸತ್ಯವಂತರು ಸುಳ್ಳರು, ಪತಿವ್ರತೆಯರು ವ್ಯಭಿಚಾರಿಣಿಯರು, ಕರ್ಮನಿಷ್ಠರು ಕರ್ಮಚಂಡಾಲರು ಎಲ್ಲರೂ ಇರುತ್ತಾರೆ. ಅವರೆಲ್ಲರ ಚಿತ್ರಣವೇ ಕಲೆಯೆನಿಸಿಕೊಳ್ಳುತ್ತದೆ. ವ್ಯಭಿಚಾರಿಣಿಯರನ್ನು ಚಿತ್ರಿಸುವ ಲೇಖಕ ವ್ಯಭಿಚಾರಪ್ರಿಯನೆಂದೂ, ಕರ್ಮಚಂಡಾಲರನ್ನು ಚಿತ್ರಿಸುವ ಲೇಖಕ ಕರ್ಮಬಾಹಿರನೆಂದೂ ಭಾವಿಸುವುದು ತಪ್ಪಾಗುತ್ತದೆ. ಈ ತಪ್ಪು ಸಿದ್ಧಾಂತವನ್ನು ನಂಬಿಕೊಂಡೇ ವಿಮರ್ಶಕರು ನನ್ನ 'ಕೆಸರಿನ ಕಮಲ' ಕಾದಂಬರಿಯನ್ನು ಹಳಿದರು. **ವಾಗ್ದೇವಿಯ ಭಂಡಾರವನ್ನೊಡೆಯಲು ಸಾಹಿತಿ ಪ್ರಯತ್ನಿಸುತ್ತಿರುವಾಗ ಅವಳ ಬಾಯಿಗೆ ಬೀಗ ಹಾಕುವ ಕೆಲಸದಲ್ಲಿ ವಿಮರ್ಶಕ ತೊಡಗಬಾರದು."**

"ಶ್ರೇಷ್ಠಲೇಖಕ ಶ್ರೇಷ್ಠವ್ಯಕ್ತಿಯಾಗಿಯೂ ಇರಬೇಕೆಂಬುದನ್ನು ನೀವು ಒಪ್ಪುವುದಿಲ್ಲವೇ?"

"ಏಕೆ ಒಪ್ಪುವುದಿಲ್ಲ. ಓದುಗರನ್ನು ಶ್ರೇಷ್ಠರನ್ನಾಗಿ ಮಾಡುವುದೇ ಸಾಹಿತ್ಯಕೃತಿಯ ಉದ್ದೇಶವಲ್ಲವೇ? ಬರೆದವನನ್ನೇ ಅದು ಶ್ರೇಷ್ಠವ್ಯಕ್ತಿಯನ್ನಾಗಿ ಮಾಡದಿದ್ದರೆ ಓದುಗರನ್ನು ಮಾಡಬಲ್ಲುದೇ? ಆದರೆ ಶ್ರೇಷ್ಠತೆಗೂ

ಬಗೆ ಬಗೆಯ ರೂಪರೇಷೆ, ಮಾನದಂಡವಿದೆಯೆಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಮಾಂಸಮಾರುವ ವ್ಯಾಧ ಬ್ರಹ್ಮಜ್ಞಾನಿಯಾಗಿದ್ದುದರ ನಿದರ್ಶನ ಮಹಾಭಾರತದಲ್ಲಿ ಬಂದಿದೆ. ಬ್ರಹ್ಮಜ್ಞಾನಿಯಾದವನು ಮಾಂಸವನ್ನೇಕೆ ಮಾರಬೇಕು ಎಂದು ಕೇಳುವುದರಲ್ಲಿ ಅರ್ಥವೇನು ? ನಿತ್ಯಕರ್ಮಾನುಷ್ಠಾನವೇ ಶ್ರೇಷ್ಠವೆಂದು ಒಬ್ಬ ಭಾವಿಸಿದರೆ ಕರ್ಮನಿರಸನವೇ ಶ್ರೇಷ್ಠವೆಂದು ಇನ್ನೊಬ್ಬ ಭಾವಿಸುತ್ತಾನೆ. ಕರ್ಮ ಒಬ್ಬನಿಗೆ ಹೆಚ್ಚಾದರೆ ಕರ್ಮನಿರಸನ ಇನ್ನೊಬ್ಬನಿಗೆ ಹೆಚ್ಚು. ಈ ಇಬ್ಬರ ಮನೋಭಾವ ಇಬ್ಬಗೆಯಾಗಿ ಹರಿದರೂ ಅವರ ಗುರಿ ಒಂದೇ ಅಲ್ಲವೇ? ಯಾವ ದಾರಿಯಲ್ಲಿ ಸಾಧಕ ನಡೆದರೂ ತನ್ನ ಸಿದ್ಧಿಯನ್ನು ಸತ್—ಚಿತ್—ಆನಂದದಲ್ಲಿಯೇ ಕಂಡುಕೊಳ್ಳಬೇಕು. ಸದ್ಯ ನಾವು ಸುತರಾಮಯ್ಯನವರನ್ನು ಮರೆಯೋಣ. ಅವರ ಕೃತಿಯ ಯೋಗ್ಯತೆಯ ಕಡೆಗೇ ಲಕ್ಷ್ಯವಿಡೋಣ. ಇನ್ನು ಅವರು ನನ್ನ ತೆಗಳಿದ ವಿಷಯ— ಅದೂ ಅಂಥ ಅಪರಾಧವೆಂದು ನನಗನಿಸುವುದಿಲ್ಲ, ಸಣ್ಣ ವಯಸ್ಸು— ಲೋಕಾನುಭವವಿಲ್ಲ— ಅಟ್ಟಕ್ಕೆ ಹಾರುವ ಮುನ್ನವೇ ಬೆಟ್ಟಕ್ಕೆ ಹಾರಬೇಕೆಂದು ಆಸೆ. ಈ ಸಣ್ಣಪುಟ್ಟ ದೋಷಗಳು ಕಾಲಕ್ರಮೇಣ ಅಳಿಸಿಹೋಗುತ್ತವೆ. ಬಂಗಾರ ಚೊಕ್ಕವಾಗಿದ್ದರೆ ಅದರ ಮೇಲಣ ಧೂಳು ಬಹಳ ಕಾಲ ಅದರ ಕಾಂತಿಯನ್ನು ಮುಚ್ಚಲಾರದು."

"ಈ ಬಂಗಾರ ಚೊಕ್ಕ ಬಂಗಾರವೋ ರಂಗೂನ್ ಬಂಗಾರವೋ ಎಂದು ಯೋಚಿಸುತ್ತಿದ್ದೇನೆ ಸಾರ್"

ಎಂದು ವಿಶ್ವೇಶ್ವರಯ್ಯ ಕಟುವಾಗಿಯೇ ನುಡಿದ. ಮೂರ್ತಿ ಅವನಿಗೆ ಉತ್ತರಕೊಡಲೆತ್ನಿಸಲಿಲ್ಲ.

ತಪ್ಪೋಲೆಗಳ ಶುದ್ಧೀಕರಣ ಮುಗಿದ ಮೇಲೆ, ಮೂರ್ತಿ ಹಾಳೆಗಳನ್ನು ವಿಶ್ವೇಶ್ವರಯ್ಯನ ಕೈಯಲ್ಲಿಟ್ಟು

"ನಾಯಕನಪಾಳ್ಯದಿಂದ ಹಿಂದಿರುಗಿದ ಮೇಲೆ ಬಂದು ಕಾಣುತ್ತೇನೆ" ಎಂದ.

"ಒಂದು ವಾರವಾಗುತ್ತದೆಯೋ ?"

"ಆಗಬಹುದು."

"ನೀವು ಬರುವ ವೇಳೆಗೆ ನಾನು ನಾಲ್ಕು ಫಾರಂ ಮುಗಿಸಿರುತ್ತೇನೆ."

"ಬಹಳ ಸಂತೋಷ."

"ಸುತರಾಮಯ್ಯನವರ ಪುಸ್ತಕಕ್ಕೆ ನಿಮ್ಮ ಮುನ್ನುಡಿ."

"ಅದು ಅಗತ್ಯವೇ ?"

"ನನ್ನ ದೃಷ್ಟಿಯಿಂದ ಅಗತ್ಯ."

"ಆಗಲಿ–ಬರೆದು ಕಳಿಸಿಯೇ ಪ್ರಯಾಣಮಾಡುತ್ತೇನೆ."

ಖಿನ್ನನಾಗಿ ಮನೆಗೆ ಹಿಂದಿರುಗಿದ ಪತಿಯನ್ನು ಕಂಡು ಲಲಿತಮ್ಮನಿಗೆ ಚಿಂತೆಯುಂಟಾಯಿತು. ಅವನ ಕೈಗೆ ಒಂದು ಕಪ್ ಬಿಸಿ ಕಾಫಿ ತಂದುಕೊಟ್ಟು

"ಇದು ನಿಮಗೆ ಬೇಕಾಗಿತ್ತಲ್ಲವೇ ?"

"ನಿಸ್ಸಂದೇಹವಾಗಿ. ನಿನಗೆ ಹೇಗೆ ಗೊತ್ತಾಯಿತು ?"

"ಮನೆಯೊಳಗೆ ನೀವು ಬರುವಾಗ ನಡಿಗೆ ನಿಧಾನವಾಗುವುದೇ ಸಾಕ್ಷಿ."

"ಯಾವದಕ್ಕೆ ?"

"ನಿಮ್ಮ ಮನಸ್ಸು ಖಿನ್ನವಾಗಿರುವುದಕ್ಕೆ—ಏನಾಯಿತು ?"

"ನನ್ನ ಸಾಧನೆ ಎರಡು ಮಾರ್ಗವಾಗಿ ಹೋಗಬೇಕಾಗಿದೆ."

"ಯಾವ ಯಾವ ಮಾರ್ಗವಾಗಿ ಹೋಗಬೇಕಾಗಿದೆ."

"ಒಂದು–ಲೇಖಕನಾಗಿ ನನ್ನ ಅಭಿವ್ಯಕ್ತಿಯ ಪೂರ್ಣ ವಿಕಾಸ ಕಾಣಬೇಕೆಂಬುದು; ಎರಡು—ಮಾನವ್ಯದಲ್ಲಿ ನನ್ನ ನಂಬಿಕೆ ಉಳಿಸಿಕೊಳ್ಳಬೇಕೆಂಬುದು."

"ಮಾನವ್ಯದಲ್ಲಿ ನಂಬಿಕೆ ಉಳಿಸಿಕೊಳ್ಳುವುದೇ ! ?"

"ಸುತರಾಮಯ್ಯನವರೂ ನನ್ನ ಟೀಕಾಕಾರರಾಗಿದ್ದಾರಂತೆ-ವಿಶ್ವೇಶ್ವರಯ್ಯ ಈ ವಿಷಯ ಹೇಳಿ ತಮ್ಮ ಅಸಂತೋಷ ವ್ಯಕ್ತಪಡಿಸಿದರು."

"ಆತನ ಚಹರೆ ಚೆನ್ನಿಲ್ಲವೆಂದು ನಾನು ಅವತ್ತೇ ಹೇಳಿದೆ—ನೀವು ನನ್ನ ಮಾತು ದುರ್ಲಕ್ಷಿಸಿದಿರಿ."

"ಇದೇ ನನ್ನ ಸಾಧನೆ–ನಿಮ್ಮ ಮಾತು ಸುಳ್ಳೆನಿಸಬೇಕೆಂಬ ಛಲಕ್ಕೆ ಬಿದ್ದಿದ್ದೇನೆ."

"ನಮ್ಮ ಮಾತು ಸುಳ್ಳಾಗಲಿ ಎಂದೇ ನಾನೂ ಹಾರೈಸುವುದು."

"ಲಲಿತಾ, ಈ ವಿಶಾಲವಿಶ್ವದಲ್ಲಿ ಒಬ್ಬರನ್ನು ಒಬ್ಬರು ತೆಗಳದೆ, ದ್ವೇಷಿಸದೆ, ವಿಷಕಾರದೆ ಬಾಳಲು ಸಾಧ್ಯವಿಲ್ಲವೇ ? ನಿತ್ಯಸಂಪದ್ಭರಿತೆಯಾದ ಜಗದ್ಧಾತ್ರಿ

ನಮ್ಮೆಲ್ಲರ ದೇಹ, ಬುದ್ಧಿ, ಮನಸ್ಸುಗಳಿಗೆ ಅನ್ನ ಒದಗಿಸುವ ಹೊಣೆ ಹೊತ್ತಿದ್ದಾಳೆ. ನಾವೇಕೆ ಬಡಿದಾಡಬೇಕು—ನಾವೇಕೆ ಅಸೂಯೆಪಡಬೇಕು. ಬರ್ಟ್ರಾಂಡ್ ರಸಲ್ ಅವರಿಗೆ ನೋಬೆಲ್ ಪಾರಿತೋಷಕ ಸಿಕ್ಕಿತೆಂದು ನಾನು ಹಲುಬಿದರೆ ನನಗೆ ಲಾಭವಾಗುತ್ತದೆಯೇ ? ಅಲ್ಲಮಪ್ರಭು ಹೇಳಿದಂತೆ

**"ಕುರೂಪಿ ಸುರೂಪಿಯ ನೆನೆದಡೆ ಸುರೂಪಿಯಪ್ಪನೆ ?**
**ಆ ಸುರೂಪಿ ಕುರೂಪಿಯ ನೆನೆದಡೆ ಕುರೂಪಿಯಪ್ಪನೆ ?**
**ಧನವುಳ್ಳವರ ನೆನೆದಡೆ ದಾರಿದ್ರ್ಯ ಹೋಹುದೆ !**
**ಪುರಾತನರ ನೆನೆದು ಕೃತಾರ್ಥರಾದೆವೆಂಬರು.**
**ತಮ್ಮಲ್ಲಿ ಭಕ್ತಿನಿಷ್ಠೆಯಿಲ್ಲದವರ ಕಂಡಡೆ ಮೆಚ್ಚನು ಗುಹೇಶ್ವರ"**

"ನಿಮ್ಮ ವಚನಕ್ಕೆ ಉತ್ತರರೂಪವಾಗಿ ನಾನೊಂದು ವಚನ ಹೇಳಲೇ ?"
"ಅಗತ್ಯವಾಗಿ ಹೇಳು."

**"ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಗಳಿಗಂಜಿದ**
**ಡೆಂತಯ್ಯ ?**
**ಸಮುದ್ರದ ತಡೆಯಲ್ಲಿ ಮನೆಯಮಾಡಿ ನೊರೆತೆರೆಗಳಿಗಂಜಿದ**
**ಡೆಂತಯ್ಯ ?**
**ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದ**
**ಡೆಂತಯ್ಯ ?**
**ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದರೆ**
**ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು."**

ಮೂರ್ತಿಯ ಮನಸ್ಸು ಪ್ರಫುಲ್ಲಗೊಂಡಿತೆಂಬುದನ್ನು ಅವನ ಕಣ್ಣುಗಳು ಸಾರಿಹೇಳಿದವು. ಮಾತುಮೀರಿದ ಒಲುಮೆಯಿಂದ ಹೆಂಡತಿಯ ಮೃದುಹಸ್ತಗಳನ್ನು ಮೂರ್ತಿ ಹಿಡಿದ,

ಲಲಿತಮ್ಮ ಕೈಕೊಸರಿಕೊಳ್ಳಲಿಲ್ಲ.

## ೭

ಗಣೇಶ ನಾಯಕನಪಾಳ್ಯದಲ್ಲಿಯೇ ಗಾಂಧಿ ಜಯಂತಿ ಮುಗಿದಮೇಲೆ ಉಳಿದುಕೊಂಡರು.

ನಾಲ್ಕುದಿನ ನಾಯಕನಪಾಳ್ಯದ 'ಗಾಂಧಿಸೇವಾ ಮಂದಿರ' * ದಲ್ಲಿದ್ದು ಮೂರ್ತಿ, ಲಲಿತಮ್ಮ ಊರಿಗೆ ಹಿಂದಿರುಗಿದರು. ಸೇವಾಮಂದಿರದ ವಿದ್ಯಾರ್ಥಿಗಳು, ಅಧ್ಯಾಪಕರು, ಪ್ರಭಾಕರ, ನಾಯಕ, ಗಣೇಶ—ಗುಂಡಾಭಟ್ಟರು ಇವರ ಸಂಗದಲ್ಲಿದ್ದ ಮೂರ್ತಿ ವಿಶ್ವವನ್ನೇ ಮರೆತುಬಿಟ್ಟದ್ದ.

ಭಟ್ಟರ ಕೊನೆಯ ಸಂದೇಶ-ಆ 'ಅಭೀಃ' ಮಂತ್ರೋಪದೇಶ ಮೂರ್ತಿಯ ಕಿವಿಗಳಲ್ಲಿ ಗುಂಜಾರವ ಮಾಡುತ್ತಿತ್ತು.

ಭಟ್ಟರು ಲಲಿತಮ್ಮನಿಗೆ ಹೇಳಿದ್ದ ಮಾತು ಅವಳ ಹೃದಯದಲ್ಲಿ ಸ್ವರ್ಣಾಕ್ಷರಗಳಲ್ಲಿ ಉಲ್ಲಿಖಿತವಾಯಿತು.

'ಕವಿಯ ಕುಸುಮಕೋಮಲ ಮನಸ್ಸು ಪಿಶುಣರು, ಅಸೂಯಾಪರರು, ಕುಮತಿಗಳ ಕಟುನುಡಿಗಳಿಗೆ ಸಿಕ್ಕಿ ನೋಯುವುದು ಸ್ವಾಭಾವಿಕ. ಹಾಗೆ ನೊಂದ ಮನಸ್ಸಿಗೆ ನೀನು ಅಮೃತಸೇಚನೆ ಮಾಡಬೇಕು—ನಿನಗಾಗಿ ಹಾಗೂ ಸಾರಸ್ವತ ಪ್ರಪಂಚಕ್ಕಾಗಿ'

**'ನೀನು ನೊಂದ ಮನಸ್ಸಿಗೆ ಅಮೃತಸೇಚನೆಮಾಡಬೇಕು.'**
**ಅಮೃತಸೇಚನೆ ಮಾಡಬೇಕು**
**ಅಮೃತಸೇಚನೆ ಮಾಡಬೇಕು.'**

ಈ ಮಾತುಗಳು ಪದೇಪದೇ ಲಲಿತಮ್ಮನ ಕಿವಿಗಳಮೇಲೆ ಬಿದ್ದು ಅಪ್ಪಳಿಸುತ್ತಿದ್ದವು.

---

* ಈ ಪ್ರಸಂಗವನ್ನು ನಾನು ಸವಿಸ್ತಾರವಾಗಿ 'ಅನುಗ್ರಹ' ಕಾದಂಬರಿಯಲ್ಲಿ ವಿವರಿಸಿದ್ದೇನೆ.

'ನಾನೇನು ಮಾಡಬಲ್ಲೆ.

'ನನ್ನಿಂದೇನು ಸಾಧ್ಯ.

ನನ್ನಿದ ಅವರಿಗೆ ಉಪಕಾರಕ್ಕಿಂತ ಅಪಕಾರವೇ ಹೆಚ್ಚಾಗಿ ಆಗಿದೆಯಲ್ಲ!'

ಎಂದು ಒಂದೇ ಸಮನೆ ಚಿಂತಿಸಿದಳು.

ನಾಯಕನಪಾಳ್ಯದಿಂದ ಹಿಂದಿರುಗಿದ ಮೇಲೆ ಮೂರ್ತಿಗೆ ಹೊಸ ಚೈತನ್ಯ ಹುಟ್ಟಿತು, ಸುಪ್ತವಾಗಿದ್ದ ಪ್ರತಿಭೆಯ ಕುಂಡಲಿನೀಶಕ್ತಿ ಹೆಡೆಯೆತ್ತಿ ನಿಂತಿತು.

'ಸೇವೆ—ಸೇವೆ—ಸೇವೆ.

'ಎಲ್ಲರೂ ಸೇವೆಯ ಬಗ್ಗೆ ಮಾತನಾಡುತ್ತೇವೆ.

'ಸೇವೆಯೆಂದರೇನು ?

'ಹೆಚ್ಚಾಗಿರುವುದರ ಒಂದು ಭಾಗ ಕೊಡುವುದು ಸೇವೆಯೋ ?—ಇರುವ ಒಂದು ತುಣುಕನ್ನೇ ದಾನಮಾಡುವುದು ಸೇವೆಯೋ ?'

ಎಂದು ವಿಚಾರಮಾಡುತ್ತ ಮಾಡುತ್ತಲೇ ಮೂರ್ತಿ **'ಸೇವಾಮಂದಿರ'** ಕಾದಂಬರಿಯನ್ನಾರಂಭಿಸಿದ.

ಅವನಲ್ಲಿ ಮೂಡಿದ ಉದ್ವೇಗಕಂಡು ಲಲಿತಮ್ಮ ಬೆಚ್ಚಿದಳು. ಮೂರ್ತಿಯನ್ನು ತನ್ನ ವಾಣಿಯನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದ ವಾಗ್ದೇವಿಯನ್ನು ಶಪಿಸಿದಳು.

'ವಿಶ್ರಾಂತಿಯಿಲ್ಲದೆ ದುಡಿಯುವುದೇ ಲೇಖಕನ ಬಾಳೇ'

ಎಂದು ಯೋಚಿಸಿದಳು.

ಮೂರ್ತಿಗೆ ಜಗತ್ತೇ ಶೂನ್ಯವಾಯಿತು. ಯಥಾರ್ಥಲೋಕ ಅವನ ಕಣ್ಣಿಗೆ ಮಿಥ್ಯವಾಯಿತು ; ಅವನು ಸೃಷ್ಟಿಸುತ್ತಿದ್ದ ಲೋಕ ಸತ್ಯವಾಯಿತು.

ಧನ–ಕೀರ್ತಿ–ತಾಪತ್ರಯ–ವಿಶ್ವೇಶ್ವರಯ್ಯ – ಮುದ್ರಣ – ಪ್ರಕಾಶನ— ಮಿತ್ರರು—ನಿಂದಕರು—**ಲಲಿತಮ್ಮ** ಎಲ್ಲವೂ ಸುಳ್ಳು–ಎಲ್ಲವೂ ಮಾಯೆ— ಎಲ್ಲವೂ ಅನಿತ್ಯ.

'ಸೇವಾಮಂದಿರ'ದ ಜೀವನ–ವ್ಯಕ್ತಿಗಳು–ವಾತಾವರಣ–ಗಿಡಮರಗಳು– ಪಾತ್ರೆ ಪದಾರ್ಥ–ತಕಲಿ ರಾಟೆ–ಹರಿಜನರ ಹಾಹಾಕಾರ–ನೀರಿನ ಅಭಾವ– ಜಗಳ, ರೋಗ, ಅಶುಚಿ, ಅಂತಃಕಲಹ ಇವು ಸತ್ಯ–ನಿತ್ಯ.

ಕ್ರಿಯಾಯಜ್ಞದ ದೀಕ್ಷೆಹೊತ್ತು ಕುಳಿತಿದ್ದ ಈ ತಪಸ್ವಿಯ ಬಳಿ ಸುಳಿಯಲು ಲಲಿತಮ್ಮನೂ ಅಂಜುತ್ತಿದ್ದಳು. ಕೆದರಿದ ಕೇಶರಾಶಿ–ರಕ್ತಚಿಮ್ಮುತ್ತಿದ್ದ ಕೆಂಗಣ್ಣು–ಕತ್ತು ತಗ್ಗಿಸಿ ಬರವಣಿಗೆಯಲ್ಲಿಯೇ ಮುಳುಗಿದ್ದ ನಿಶ್ಚಲತೆ ಕಂಡು ಲಲಿತಮ್ಮನ ಹೃದಯವರಳುತ್ತಿತ್ತು.

ಸದ್ದುಮಾಡದಂತೆ ಬಂದು ಬಾಗಿಲಬಳಿ ನಿಂತು ತನ್ನ ಪತಿಯನ್ನೊಮ್ಮೆ ನೋಡಿ ಹೋಗುತ್ತಿದ್ದಳು. ಯಾವ ಕಾರಣಕ್ಕೂ ಅವನ ತಪೋಭಂಗ ಮಾಡ ಬಯಸಳು.

ಒಂದು ದಿನ ಅವಳು ತನ್ನ ಪ್ರತಿಜ್ಞೆಯನ್ನೇ ಭಂಗಗೊಳಿಸಬೇಕಾಯಿತು.

ಮೂರ್ತಿಯ ಮೇಜಿನ ಬಳಿ ಮೆಲ್ಲನೆ ಬಂದು ನಿಂತಳು. ಅವಳು ಬಂದುದನ್ನು ಕಾಣದಿದ್ದ ಮೂರ್ತಿ ಚಕಿತನಾದ. ಅಸಮಾಧಾನದಿಂದ ಅವನ ಹುಬ್ಬುಗಳು ಗಂಟಿಕ್ಕಿದವು. ಅವನ ತೀಕ್ಷ್ಣನೋಟವನ್ನಿದಿರಿಸಲಾರದೆ ಲಲಿತಮ್ಮ ಕತ್ತು ತಗ್ಗಿಸಿ

"ವಿಶ್ವೇಶ್ವರಯ್ಯನವರು ಸುಮ್ಮನೆ ಹೇಳಿಕಳಿಸುತ್ತಿದ್ದಾರೆ—ಅವರಿಗೆ ಮುನ್ನುಡಿ ಬೇಕಂತೆ!"

"ಯಾವ ಮುನ್ನುಡಿ."

"ಸುತರಾಮಯ್ಯನವರ ಪುಸ್ತಕಕ್ಕೆ ಮುನ್ನುಡಿ ಬರೆಯಲು ನೀವು ಒಪ್ಪಿಕೊಂಡಿದ್ದರಂತೆ!"

"ಓ—ಇದೊಂದು ಕಾಟ"

ಎಂದು ಮೂರ್ತಿ ಲೇಖನಿಯನ್ನು ಮೇಜಿನ ಮೇಲಿಟ್ಟು ಹೊರಗೆ ಹೋಗಿ ನಿಂತ.

ಮುಖದ ಮೇಲೆ ಬೀಸಿದ ತಂಗಾಳಿ ಮೂರ್ತಿಯನ್ನೆಚ್ಚರಗೊಳಿಸಿತು. 'ನಾನೆಂಥ ಅವಿವೇಕ ಮಾಡಿದೆ' ಎಂದುಕೊಂಡು ಒಳಗೆ ಬಂದು ಕುಳಿತು ಮತ್ತೆ ಲೇಖನಿಯನ್ನು ಕೈಗೆತ್ತಿಕೊಂಡ.

ಒಂದು ತಾಸಿನವಧಿಯಲ್ಲಿ 'ಮುನ್ನುಡಿ' ಸಿದ್ಧವಾಯಿತು. ಅದನ್ನು ಅಚ್ಚುಗಟ್ಟಾಗಿ ಲಕೋಟೆಯಲ್ಲಿ ಹಾಕಿ ವಿಳಾಸ ಬರೆದು ಲಲಿತಮ್ಮನ ಕೈಯಲ್ಲಿಟ್ಟು

"ವಿಶ್ವೇಶ್ವರಯ್ಯನವರು ಪುನಃ ಹೇಳಿ ಕಳಿಸಿದರೆ ಈ ಲಕೋಟೆ ಕೊಟ್ಟು ಬಿಡು" ಎಂದ.

"ತೊಂದರೆಯಾಯಿತಲ್ಲವೇ ?"

"ತೊಂದರೆಯೆಂದುಕೊಂಡಿದ್ದು ನನ್ನ ತಪ್ಪು. ನಿನ್ನನ್ನೂ ಒರಟಾಗಿ ಮಾತನಾಡಿಸಿದೆ—ಕ್ಷಮಿಸು ಲಲಿತಾ."

"ಚಿತ್ತೈಕಾಗ್ರತೆಗೆ ಭಂಗಬಂದರೆ ಹಿಂಸೆಯಾಗುತ್ತದೆಂಬುದನ್ನು ನಾನು ಬಲ್ಲೆ—ನಿಮ್ಮನ್ನು ತಪ್ಪು ತಿಳಿದುಕೊಳ್ಳುವುದಿಲ್ಲ."

"ನನ್ನ ಜೀವ ಇನ್ನೂ ಮಾಗಬೇಕೆಂಬುದೇ ಇದೇ ನಿದರ್ಶನ ಸಾಕು."

"ಇನ್ನೂ ಮಾಗಬೇಕೆ ?"

"ಚಿತ್ತನಿರೋಧ ಕಲೆಯೇ ಇನ್ನೂ ನನಗೆ ಸಾಧಿಸಿಲ್ಲ. ಹತ್ತು ಕೆಲಸ ಒಟ್ಟಿಗೆ ಮಾಡಿದರೂ ಮನಃಶಾಂತಿಗೆ ಭಂಗ ಬರಬಾರದು. ನನ್ನ ಅಪ್ರಬುದ್ಧಾವಸ್ಥೆಯ ಅರಿವಾಯಿತು. ಮುಂದಕ್ಕೆ ತಿದ್ದಿಕೊಳ್ಳುತ್ತೇನೆ ಲಲಿತ."

"ಸ್ವಾಮಿ—ಸ್ವಲ್ಪ ವಿಶ್ರಾಂತಿ ಪಡೆಯುವುದಿಲ್ಲವೇ ?"

"ಏತರಿಂದ ?"

"ಬರವಣಿಗೆಯಿಂದ."

"ಕ್ರಿಯಾಚೇತನ ಅರಳಿ ನಿಂತಾಗ ವಿಶ್ರಾಂತಿಯಿಲ್ಲ ಲಲಿತಾ. ನಾನು ಮಲಗಿದರೂ ನನ್ನ ಮನಸ್ಸು 'ಸೇವಾಮಂದಿರ'ದ ಧ್ಯಾನವನ್ನೇ ಮಾಡುತ್ತಿರುತ್ತದೆ."

"ನಿಮಗೆ ಈ ಶಕ್ತಿಕೊಟ್ಟಿರುವ ಸರಸ್ವತಿಯನ್ನು ನಾನು ಹಲವು ಬಾರಿ ಶಪಿಸಿದ್ದೇನೆ."

"ಮತ್ಸರದಿಂದಲೇ....?"

"ಅಲ್ಲ. ಅವಳು ನಿಮ್ಮ ತಾಯಿ—ನನ್ನ ಅತ್ತೆ."

"ನಿನ್ನ ಮನೆ ಬಹು ಸ್ವಾರಸ್ಯವಾಗಿದೆ."

ಎಂದವನೇ ಮೂರ್ತಿ ಗಹಗಹಿಸಿ ನಕ್ಕ.

"ಇನ್ನಾದರೂ ಊಟಕ್ಕೆ ಏಳುವಿರಾ ?"

"ಏಳಲೇ ಬೇಕು."

"ಏಕೆ ?"

"ಮನೆಯಲ್ಲಿ ಅತ್ತೆಸೊಸೆಯರಿಗೆ ಜಗಳವಾಗದಿರಲೆಂದು. ನಿನ್ನ ಮಾತು ಕೇಳಿದರೆ ನನ್ನ ತಾಯಿ ಸರಸ್ವತಿಗೆ ಕೋಪ—ಅವಳ ಮಾತು ಕೇಳಿದರೆ ನಿನಗೆ ಕೋಪ."

"ಇಬ್ಬರ ಮಾತೂ ಕೇಳಿ. ಉತ್ತಮ ಗೃಹಸ್ಥರು ತಾಯಿ, ಹೆಂಡತಿ ಇಬ್ಬರನ್ನೂ ಅಸಮಾಧಾನಕ್ಕೊಳಗಾಗಿಸುವುದಿಲ್ಲ."

"ನಾನು ಯಾವ ವರ್ಗದ ಗೃಹಸ್ಥ."

"ನಿಮ್ಮದೇ ಒಂದು ವಿಶಿಷ್ಟವರ್ಗ. ತಾಯಿಮಾತು ಕೇಳಲಾರಂಭಿಸಿದರೆ ಅದನ್ನೇ ಕೇಳುವಿರಿ—ಹೆಂಡತಿಯ ಮಾತು ಕೇಳಲಾರಂಭಿಸಿದರೆ ಅದನ್ನೇ ಕೇಳುವಿರಿ."

"ಹೆಂಡತಿಯ ಮಾತನ್ನು ಕೇಳುವೆನೆಂಬುದನ್ನು ಒಪ್ಪಿಕೊಳ್ಳುವೆಯಷ್ಟೆ !"

"ಒಪ್ಪದಿದ್ದರಾಗುತ್ತದೆಯೇ ?"

"ಸರಿ ಹಾಗಾದರೆ"

ಎಂದು ತೃಪ್ತಿಯಿಂದ ಮೇಲಕ್ಕೆದ್ದ.

ಲಲಿತಮ್ಮನಿಗೂ ತೃಪ್ತಿಯಾಯಿತು.

ರಾಷ್ಟ್ರಕ್ಕೆ, ಸಮಾಜಕ್ಕೆ, ಸಾಹಿತ್ಯಕ್ಕೆ ಹುನಗುಂದ ಈಶ್ವರರಾಯ ಮಾಡಿದ ಬಹುವಿಧ ಸೇವೆಯ ಬಗ್ಗೆ ಆಗಿಂದಾಗ್ಗೆ ಯುಗವಾಣಿ–ಕಾಲದೂತ ಜನಸಂದೇಶ ಪತ್ರಿಕೆಗಳಲ್ಲಿ ಲೇಖನಗಳು ಬರಲಾರಂಭಿಸಿದ್ದವು. ಹುನಗುಂದನ ತಪ್ಪದೆ ಈ ಪತ್ರಿಕೆಗಳಿಗೆ ಕಾರವಾರ ಜಿಲ್ಲೆಯ ಇತಿಹಾಸ, ಅಲ್ಲಿಯ ರೈತ ಸ್ಥಿತಿಗತಿ, ಸಮುದ್ರತೀರದ ಸೊಗಸು, ಸ್ತ್ರೀಯರ ಸೌಂದರ್ಯ, ಅಲ್ಲಿನ ಜನ ಯಲ್ಲಿ ಸಾರ್ವತ್ರಿಕವಾಗಿ ವ್ಯಾಪಿಸಿದ್ದ ರೋಗರುಜಿನಾದಿಗಳನ್ನು ಕುರಿತು ಲೇಖ ಗಳನ್ನು ಬರೆಯುತ್ತಿದ್ದ. 'ಕಾಲದೂತ'ದಲ್ಲಿ ಆರಂಭವಾದ ಹುನಗುಂದ 'ಕುಸುಮಕುಂಜ' ಅವನ ಪಾಂಡಿತ್ಯ, ಪೌರುಷ, ಜೀವನದರ್ಶನ, ಸಮಾ ವಿಶ್ಲೇಷಣೆ, ವಿಮರ್ಶಾಜ್ಞಾನಗಳ ರಸಗನ್ನಡಿಯಾಯಿತು.

ಕನ್ನಡದಲ್ಲಿ ಹೊಸದಾಗಿ ಬರೆಯಲಾರಂಭಿಸಿದ್ದ ಕಿರಿಯಲೇಖಕರನ ಪ್ರಸಿದ್ಧಿಗೆ ತರಲು ಹಟತೊಟ್ಟಿದ್ದ ಹುನಗುಂದ, ವೆಂಕಟದಾಸಪ್ಪ, ಎಮ್ಮಿಗನೂ ದೊಡ್ಡಬಸಪ್ಪ, ಮನೋರಮಾದೇವಿ, ಅರಸೀಕೆರೆ ವೆಂಕಟೇಶ, ಬಾಣಾವರ ಸೂರಭಟ್ಟ, ಪುತ್ತೂರಿನ ಅನಂತಪೈ, ಗೋಪಿಚೆಟ್ಟಿಪಾಳ್ಯದ ವಡಿವೇ ಪತ್ರಿಕೆಗಳಲ್ಲಿ ಬರೆಯುತ್ತಿದ್ದ ಲೇಖನಗಳ ಮೇಲೆ ಪ್ರಶಂಸನಾತ್ಮಕ ಲೇಖ ಗಳನ್ನು ಬರೆದು ತನ್ನ 'ಕುಸುಮಕುಂಜ' ತುಂಬುತ್ತಿದ್ದ.

ಒಂದು ವ್ಯವಸ್ಥಿತ ಕ್ರಮದಲ್ಲಿ ಹುನಗುಂದನ ಪ್ರಚಾರ ಸಾಗಿತು ಶಿವಮೊಗ್ಗೆಯ ವೆಂಕಟದಾಸಪ್ಪನ 'ಪುರೋಗಾಮಿ ಸಾಹಿತ್ಯಶ ಶ್ರೀ ಹುನಗುಂದರು' ಲೇಖನ 'ಯುಗವಾಣಿ'ಯಲ್ಲಿ, ಬಾಣಾವರದ ಸೂರಭಟ್ಟ ಸಾಹಿತ್ಯಶಿಲ್ಪಿ ಶ್ರೀ ಹುನಗುಂದರು' ಲೇಖನ, 'ಜನಸಂದೇಶ'ದ ದೊಡ್ಡಬಸಪ್ಪನ 'ಕನ್ನಡದ ಗಾರ್ಕಿ ಶ್ರೀ ಹುನಗುಂದರು' ಲೇಖನ 'ಶ್ರಮಜೀ ಯಲ್ಲಿ ಪ್ರಕಟವಾದ ಮರುವಾರವೇ ಹುನಗುಂದ ತನ್ನ 'ಕುಸುಮಕುಂಜ'ದ

 



ನಲ್ಲೆ,

ಕಾಲಹರಣಮಾಡದೆ ಓದಿನಲ್ಲಿ ಉದ್ಯುಕ್ತಳಾಗಿರುವ ನಿನ್ನ ಖಾಸಾ ಪತ್ರಿಕೆಯಾದ 'ಕಾಲದೂತ'ದ ಕಳೆದವಾರದ ಸಂಚಿಕೆಯಲ್ಲಿ ಶ್ರೀಮತಿ ಮನೋರಮಾದೇವಿ ಬರೆದ 'ಶ್ರೀ ಹುನಗುಂದರ ಸಾಹಿತ್ಯದ ಸಂದೇಶ' ಲೇಖನವನ್ನು ನೀನು ಓದಿಯೇ ಇರುವೆ—ಒಂದಲ್ಲ ಹತ್ತು ಬಾರಿ !

ಕನ್ನಡನಾಡಿನಲ್ಲಿ ಪುರೋಗಾಮಿ ಸಾಹಿತ್ಯ ಚಳುವಳಿ ಆರಂಭಿಸಿದ ಶ್ರೀ ಹುನಗುಂದರ ಸಾಹಿತ್ಯ ಹೆಣ್ಣಿನ ಅಂತರಂಗ, ಕಷ್ಟಸುಖ, ಆಸೆ ನಿರಾಶೆಗಳನ್ನು ಅದ್ವಿತೀಯವಾಗಿ ಚಿತ್ರಿಸುವುದೆಂದು ಮನೋರಮಾದೇವಿ ಅಭಿಪ್ರಾಯಪಟ್ಟಿದ್ದಾರೆ. ನಮ್ಮ ಹೆಣ್ಣುಮಕ್ಕಳೂ ಪುರೋಗಾಮಿಗಳಾಗಿ ರಷ್ಯಾದ ಮಹಿಳೆಯರಂತೆ ರಾಷ್ಟ್ರದ ಸಮಸ್ತ ಚಟುವಟಿಕೆಗಳಲ್ಲಿ ಭಾಗವಹಿಸಬೇಕೆಂಬ ಹುನಗುಂದರ ದಿವ್ಯ ಆಸೆಯನ್ನು ಲೇಖಿಕೆಯರು ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಹುನಗುಂದರ ಸಾಹಿತ್ಯದ ಬಗ್ಗೆ ಒಬ್ಬ ಹೆಣ್ಣುಮಗಳು ಕೊಡುವ ಈ 'ಸರ್ಟಿಫಿಕೇಟ'ಗಿಂತಲೂ ಹೆಚ್ಚಿನದೇನು ಬೇಕು.

ಹುನಗುಂದರ ಜೀವನವೇ ದೀನ ದಲಿತರ ಉದ್ಧಾರ, ಮಹಿಳೆಯರ ಪುನರುಜ್ಜೀವನಕ್ಕೆ ಮೀಸಲಾಗಿರುವ ಸಂಗತಿ ನಿನಗೆ ಹೊಸದಾಗಿ ನಾನು ಹೇಳಬೇಕಾಗಿಲ್ಲ. ದಂತದ ಅರಮನೆಗಳಲ್ಲಿ ಕುಳಿತು ಸಿಗರೇಟಿನ ಮತ್ತ ಪ್ರಭಾವದಿಂದ ಸಾಹಿತ್ಯ ನಿರ್ಮಿಸುವ ಲೇಖಕರ ಪಂಕ್ತಿಗೆ ಹುನಗುಂದರು ಸೇರಿದವರಲ್ಲ; ಕೇವಲ ರಾಮಾಯಣ, ಭಾರತಗಳ ಹಳೆಯ ಪಲ್ಲವಿಯನ್ನು ಹಾಡುವ ಮಡಿ ಸಾಹಿತಿಗಳ ವರ್ಗಕ್ಕೂ ಹುನಗುಂದರು ಸೇರಿದವರಲ್ಲ. ಕನ್ನಡ ಸಾರಸ್ವತಪ್ರಪಂಚದಲ್ಲಿ ಅವರು ತಮ್ಮದೇ ಆದ ವಿಶಿಷ್ಟಸ್ಥಾನ ಗಳಿಸಿಕೊಂಡಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ಕಾಣಬರದಿರುವ ನವೀನತೆ, ನವಶಕ್ತಿ, ನವಗಾಂಭೀರ್ಯ ಹುನಗುಂದರ ಸಿಡಿಲುಬರಹಗಳಲ್ಲಿ ಏಕೆ ಕಂಡುಬರುತ್ತಿದೆ ಬಲ್ಲೆಯಾ? ಹುನಗುಂದರು ಜೀವನದಲ್ಲಿ ಬೆರೆತು ಜೀವನ ನೋಡುವರು—ಬಡತನ ಅನುಭವಿಸಿ ಬಡತನದ ಮೇಲೆ ಬರೆಯುವರು—ಕಾಳಗದ ಕಣಕ್ಕೆ ಧುಮ್ಮಿಕ್ಕಿ ಯುದ್ಧವನ್ನು ವರ್ಣಿಸುವರು. ಈಗವರು ಕಾರವಾರ ಜಿಲ್ಲೆಯಲ್ಲಿ ಹೊಸ ಇತಿಹಾಸವನ್ನು ನಿರ್ಮಿಸುತ್ತಿದ್ದಾರೆ. ಶತಮಾನಗಳ ಸುಲಿಗೆಗೆ ಸಿಕ್ಕಿದ್ದ ರೈತರಲ್ಲಿ ಜಾಗೃತಿಯನ್ನುಂಟುಮಾಡಿ ಭಾರತದ ಮುಖವನ್ನೇ ಬದಲಿಸಿದ್ದಾರೆ.

ಅವರ ಸಾಹಿತ್ಯಾರಾಧಕಳಾದ ನೀನೂ ಅವರ ಬಹುಮುಖ ಪ್ರತಿಭೆ

ಯಮೇಲೆ ಲೇಖನಗಳನ್ನು-ಗ್ರಂಥಗಳನ್ನು ಬರೆಯಬೇಕು. ಬರೆಯುವೆ ಯಲ್ಲವೇ?

ಇತಿ ನಿನ್ನ 'ರಂಜನ'

ಹುನಗುಂದನ ನಿರ್ಲಜ್ಜ ಆತ್ಮಪ್ರಶಂಸೆ, ಸ್ವಪ್ರಚಾರವೈಖರಿ ಕಂಡು ಮೂರ್ತಿ ಹೊಟ್ಟೆಹುಣ್ಣಾಗುವಂತೆ ನಕ್ಕಿದ್ದ.

'ಕಾಲದೂತ' ಪತ್ರಿಕೆಯ ಪ್ರತಿಯನ್ನು ಕೈಯಲ್ಲಿ ಹಿಡಿದು ಬಂದ ಗಣೇಶರು ನಗುತ್ತ ಬರಲಿಲ್ಲ. ಅವರನ್ನು ಸ್ವಾಗತಿಸುತ್ತಾ ಮೂರ್ತಿ

'ನಾಯಕನಪಾಳ್ಯದಿಂದ ಯಾವಾಗ ಬಂದಿರಿ ?" ಎಂದು ಕೇಳಿದ.

"ಎರಡುವಾರವಾಯಿತು."

"ಎರಡುವಾರವಾದರೂ ಇತ್ತ ಬರಲಾಗಲಿಲ್ಲವೇ ?"

"ನನಗೂ ಬಿಡುವಾಗಲಿಲ್ಲ-ನಿಮಗೂ ಬಿಡವಿಲ್ಲವೆಂದು ಕೇಳಿದೆ. ನಿಮ್ಮ 'ಸೇವಾಮಂದಿರ' ಹೇಗೆ ಸಾಗಿದೆ ?"

"ಆವೆ, ಮೊಲದ ಕಥೆಯಂತೆ ಸಾಗಿದೆ. ಒಮ್ಮೊಮ್ಮೆ ಜಡತ್ವ ವುಂಟಾಗಿ ನಿರುತ್ಸಾಹಿಯಾಗುತ್ತೇನೆ. ಉತ್ಸಾಹದ ನಚಿಕೇತಾಗ್ನಿಯನ್ನು ಸದಾ ಪೋಷಿಸಿಕೊಂಡು ಹೋಗುವುದು ಕಷ್ಟ."

"ನಿಜ ನಿಜ—ಮನಸ್ಸಿನ ವೇಗದಲ್ಲಿ ಕೈ ಓಡಬೇಕಲ್ಲ !"

"ಇಂಗ್ಲಿಷಿನಲ್ಲಿರುವಂತೆ ಕನ್ನಡಕ್ಕೂ ಯಾಂತ್ರಿಕಸಾಧನೆಯಿದ್ದಿದ್ದರೆ ಚೆನ್ನಾಗಿತ್ತು. ಡಿಕ್ಟೋಫೋನ್ (Dictophone) ಮುಂದೆ ಕುಳಿತು ಕಾದಂಬರಿಯನ್ನು ನಿರೂಪಿಸಬಹುದಾಗಿತ್ತು."

"ಯಂತ್ರಸಾಧನ ನಿರಾಕರಿಸುವ ನೀವೇ ಅದರ ನೆರವು ಬಯಸುವಿರಾ ?"

"ಯಂತ್ರ ಮನುಷ್ಯನಿಗಧೀನವಾಗಿರಬೇಕೆಂಬುದು ನನ್ನ ವಾದ. ಯಂತ್ರವೇ ಅಗತ್ಯವಿಲ್ಲವೆಂದು ನಾನು ಪ್ರತಿಪಾದಿಸಿಲ್ಲ."

ಗಣೇಶರು ನಕ್ಕು

"ಹಾಗೇ ಆಗಲಿ-ಆ ವಿಷಯ ಇನ್ನೊಮ್ಮೆ ಚರ್ಚಿಸಿದರಾಯಿತು. ಈ ವಾರದ 'ಕಾಲದೂತ' ನೋಡಿದಿರಾ ?"

"ನೋಡಿದೆ."

"ನಿಮ್ಮ ಅಭಿಪ್ರಾಯವೇನು ?"

"ಕನ್ನಡದಲ್ಲಿ **ಪಂಗೋಳಿ** ಎನ್ನುವ ಶಬ್ದವಿದೆ. ಅದರ ವ್ಯುತ್ಪತ್ತಿಯನ್ನು ಯಾವ ನಿಘಂಟುಕಾರನೂ ಹೇಳಿಲ್ಲ. ಹುನಗುಂದನಿಗೆ ಈ ಶಬ್ದ ಚೆನ್ನಾಗಿ ಅನ್ವಯಿಸುತ್ತದೆ ನೋಡಿ."

"ಅವನ ಕಾರವಾರದ ಕಾರ್ಯಕಲಾಪಗಳ ಬಗ್ಗೆ ಬಹಳ ಸುದ್ದಿ ಪ್ರಕಟವಾಗುತ್ತಿರುವುದನ್ನು ನೀವು ಗಮನಿಸಿರಬೇಕು."

"ಗಮನಿಸಿದ್ದೇನೆ."

"ಇದರ ರಹಸ್ಯಭೇದಿಸಿದಿರಾ ?"

"ಇಲ್ಲ."

"ಹುನಗುಂದ ಮತ್ತೆ ಇಲ್ಲಿಗೇ ಬರುತ್ತಾನೆ. ದೊರೆಸ್ವಾಮಿಯ ಬಗ್ಗೆ ಅವನು ಆಚರಿಸಿದ ಅತ್ಯಾಚಾರ ಮರೆಸಲಿಕ್ಕೆ ಈ ಪ್ರಚಾರ ನಡೆದಿದೆ. ಅವನನ್ನು ಸ್ವಾಗತಿಸಲು ಸಕಲಸಿದ್ಧತೆ ನಡೆದಿದೆ. ಬೆಂಗಳೂರಿನಲ್ಲಿರುವ ಪಾರ್ಟಿ ಆಫೀಸನ್ನು ಅವನಿಗೊಪ್ಪಿಸಿ, ಕಾಮ್ರೇಡ್ ಕಾಮತರು ಬಿಜಾಪುರ ಜಿಲ್ಲೆಯಲ್ಲಿ ಪ್ರಚಾರ ಕಾರ್ಯ ಕೈಗೊಳ್ಳಬೇಕೆಂದಿದ್ದಾರೆ."

"ನಿಮ್ಮ ಪಾರ್ಟಿಯ ಒಳಜಗಳ ಸಾಹಿತ್ಯದ ಮೇಲೂ ತನ್ನ ದುಷ್ಪರಿಣಾಮವನ್ನುಂಟುಮಾಡುತ್ತಿರುವುದು ಶೋಚನೀಯ."

"ಪ್ರಗತಿಶೀಲ ಸಾಹಿತಿಗಳಾದ ನೀವುಗಳು ಸ್ಮುಮನಿದ್ದರೆ ಇದು ಅನಿವಾರ್ಯವಾಗುತ್ತದೆ."

"ನಾವೇನು ಮಾಡಬೇಕು. ನಾವೂ ಕೆಲವು ಪತ್ರಿಕೆಗಳನ್ನು ಹಿಡಿದು ಹುನಗುಂದನಂತೆ ಆತ್ಮಪ್ರಶಂಸೆ ಮಾಡಿಕೊಳ್ಳೋಣವೇ ?"

"ಉಂಟೇ ? ಆ ಮಾತು ನಾನು ಎಂದಿಗಾದರೂ ಹೇಳುವೆನೇ ? ಪಾರ್ಟಿಯ ಬಗ್ಗೆ ನಮ್ಮ ನಿಲುವನ್ನು ಸ್ಪಷ್ಟಪಡಿಸಲು ನಾನು ನಿರ್ಧರಿಸಿದ್ದೇನೆ–ಸಾಹಿತ್ಯದ ಬಗ್ಗೆ ನಿಮ್ಮ ನಿಲುವನ್ನು ನೀವು ಸ್ಪಷ್ಟಗೊಳಿಸಬೇಕು."

"ಅ ಕೆಲಸ ನಮ್ಮ ಸಾಹಿತ್ಯವೇ ಮಾಡುತ್ತದೆ."

"ಪತ್ರಿಕೆ ಓದುವ ಜನ ಬೇರೆ—ಸಾಹಿತ್ಯ ಓದುವ ಜನ ಬೇರೆ. ವಿನಾಕಾರಣ ಸಾಮಾನ್ಯಜನರ ಮನಸ್ಸೇಕೆ ಕಲುಷಿತವಾಗಬೇಕು."

"ನೀವೇನು ಮಾಡಬೇಕೆಂದಿರುವಿರಿ ?"

"ಪತ್ರಿಕೆ ಸ್ಥಾಪಿಸುವ ಭ್ರಾಂತಿ ನನಗಿನ್ನೂ ಹೋಗಿಲ್ಲ."

"ಮೂರುದಿನಕ್ಕೊಮ್ಮೆ ಊಟಮಾಡುವುದು ಸಾಲದೆಂದು ವಾರಕ್ಕೊಮ್ಮೆ ಊಟಮಾಡಬೇಕೆಂದಿರುವಿರಾ ?"

"ಅಷ್ಟೇ ನನ್ನ ಪ್ರಾಪ್ತಿ."

"ನೀವೂ ವೇದಾಂತಿಗಳಾಗುತ್ತಿರುವಿರಾ ?"

"ಗುಂಡಾಭಟ್ಟರ ಪ್ರಭಾವವೆಂದು ಕಾಣುತ್ತದೆ."

"ಪತ್ರಿಕೆ ಸ್ಥಾಪಿಸುವ ವಿಷಯ ಇನ್ನೊಮ್ಮೆ ವಿಚಾರಮಾಡಿ ಗಣೇಶರೇ."

"ನಾನೇನು ಬಂಡವಳಿಗ ಸಂಸ್ಥೆ ಕಟ್ಟುತ್ತಿಲ್ಲ. ನನ್ನ ಜತೆ ದುಡಿಯಲು ನಾಲ್ವರು ಸಿದ್ಧರಾಗಿದ್ದಾರೆ. ಅವರ ದುಡಿಮೆಯೇ ನನ್ನ ಬಂಡವಾಳ. ಪತ್ರಿಕೆ ನಡೆದಷ್ಟು ದಿನ ನಡೆಯಲಿ."

"ನಿಮ್ಮ ಧೈರ್ಯ ನಾನು ಮೆಚ್ಚುತ್ತೇನೆ."

"ನನ್ನ ಪತ್ರಿಕೆಗೆ ನೀವು ಲೇಖನಗಳನ್ನು ಬರೆದುಕೊಡಬೇಕು."

"ನಿಮ್ಮ ನಾಲ್ವರಲ್ಲಿ ನಾನೂ ಒಬ್ಬನೆಂದಿದ್ದೆ."

"ನಿಮ್ಮ ಸಾಹಿತ್ಯಸೇವೆಗೆ ಕಂಟಕನಾಗಲು ನಾನು ಇಷ್ಟಪಡುವುದಿಲ್ಲ. ನಿಮ್ಮ ನೈತಿಕ ಸಹಾನುಭೂತಿ ಇದ್ದರೆ ಸಾಕು—ಉಳಿದ ಕೆಲಸ ನಾವು ಮಾಡಿ ಕೊಳ್ಳುತ್ತೇವೆ."

"ನಿಮ್ಮ ಸೇವೆಗೆ ಸದಾ ಸಿದ್ಧನಾಗಿರುವೆನೆಂದು ಹೇಳಿಯೇ ಇರುವೆನಲ್ಲಾ !"

ಎಂದು ಮೂರ್ತಿ ಹಾರ್ದಿಕವಾಗಿ ನುಡಿದ. ಮೂರ್ತಿಯ ಆಶ್ವಾಸನ ಗಣೇಶರ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿತು.

# ೬

ಮನೆಗೆಲಸದ ಒತ್ತಡ, ಮೂರ್ತಿಯ ಯೋಗಕ್ಷೇಮ ವೀಕ್ಷಣೆಯಿಂದಾಗಿ ಲಲಿತಮ್ಮ 'ಅಭಯಾಶ್ರಮ'ದ ಕಡೆ ಸುಳಿದಿರಲಿಲ್ಲ. ಸುಂದರಮ್ಮ ನಿತ್ಯವೂ ಹೇಳಿಕಳಿಸುತ್ತಿದ್ದರು. 'ನಾಳೆ ಖಂಡಿತ ಬರುತ್ತೇನೆ' ಎಂದು ಲಲಿತಮ್ಮ ಉತ್ತರ ಹೇಳಿಕಳಿಸುತ್ತಿದ್ದರೂ 'ಆ ನಾಳೆ' ಅವಳ ಪಾಲಿಗೆ ಬಂದಿರಲಿಲ್ಲ.

ಸುಂದರಮ್ಮನವರಿಗೆ ಮೈಯಲ್ಲಿ ಸರಿಯಾಗಿರಲಿಲ್ಲವೆಂದು ಕೇಳಿದ ಮೇಲೆ ಲಲಿತಮ್ಮನ ಜೀವ ಒಂದೇ ಸಮನೆ ಚಡಪಡಿಸಲಾರಂಭಿಸಿತು. ಕಾಫಿ ತುಂಬಿದ ಥರ್ಮಾಸ್ ಫ್ಲ್ಯಾಸ್ಕನ್ನು (Thermas flask)ಮೂರ್ತಿಯ ಮೇಜಿನ ಮೇಲಿಟ್ಟು ಅವನ ಸಮಯ ನಿರೀಕ್ಷಿಸುತ್ತ ನಿಂತಳು.

"ಸೂಚನೆ ಅರ್ಥವಾಯಿತು. ಎಲ್ಲಿಯೋ ನೀನು ಹೊರಟಿರುವಂತಿದೆ."

"ಆಶ್ರಮಕ್ಕೆ ಹೋಗಿ ಬರುತ್ತೇನೆ. ಸುಂದರಮ್ಮನವರ ಮೈಯಲ್ಲಿ ಚೆನ್ನಾಗಿಲ್ಲವಂತೆ!"

"ಏನಾಗಿದೆ ?"

"ನಿತ್ಯ ಸಣ್ಣ ಜ್ವರ ಬರುತ್ತಿದೆಯಂತೆ!"

"ನಾನೂ ಬರುತ್ತಿದ್ದೆ. ಆದರೆ...."

"ಕೆಲಸ ಸಾಗಲಿ. ನಾನು ಹೋಗಿ ನೋಡಿಕೊಂಡು ಬರುತ್ತೇನೆ."

"ಒಳ್ಳೆಯದು."

ಎಂದವನೇ ಮೂರ್ತಿ ತನ್ನ ಬರವಣಿಗೆಯಲ್ಲಿ ಮತ್ತೆ ಉದ್ಯುಕ್ತನಾದ.

ಆಶ್ರಮಸೇರಿದ ಲಲಿತಮ್ಮನ ಸುತ್ತ ಮುತ್ತಿಕೊಂಡ ಆಶ್ರಮವಾಸಿಗಳು "ಏಕಕ್ಕ ನಮ್ಮನ್ನು ಮರೆತುಬಿಟ್ಟಿರಿ" ಎಂದು ಕೇಳಿದರು.

"ಎಂದಿಗಾದರೂ ಮರೆತೇನೇ ?"

ಎಂದವರಿಗೆ ಹೇಳಿ ನಿರ್ಮಲನ ಕಡೆ ತಿರುಗಿ

"ಮ್ಯಾಡಂ ಹೇಗಿದ್ದಾರೆ" ಎಂದು ಕೇಳಿದಳು.

"ಒಳಗೆ ಬನ್ನಿ"

ಹಾಸಿಗೆಯಮೇಲೆ ಮಲಗಿದ್ದ ಸುಂದರಮ್ಮ ಲಲಿತನನ್ನು ಹತ್ತಿರ ಕರೆದು ಕೂಡಿಸಿಕೊಂಡರು.

"ನೀವು ಮನೆಯಲ್ಲಿರಬಹುದೆಂದಿದ್ದೆ ಮ್ಯಾಡಂ"

"ಆಶ್ರಮದಲ್ಲಿಯೇ—ನನ್ನ ಮಕ್ಕಳ ಮಧ್ಯೆ—ಸಾಯಬೇಕೆಂದಿದ್ದೇ ಲಲಿತಾ."

"ಸಾಯುವ ಮಾತಾಡಬೇಡಿ ಮ್ಯಾಡಂ."

"ಇಲ್ಲಿ ಬರುವುದಕ್ಕೆ ಪುರಸತ್ತಾಗಲಿಲ್ಲವೇ ?"

"ಅವರು ಹೊಸ ಕಾದಂಬರಿ ಆರಂಭಿಸಿದ್ದಾರೆ."

"ಹೆಸರು ?"

" 'ಸೇವಾಮಂದಿರ' "

"ನಮ್ಮನ್ನೆಲ್ಲಾ ತಮ್ಮ ಕಾದಂಬರಿಯಲ್ಲಿ ತಂದುಬಿಡುತ್ತಾರೋ ಏನೋ ಈ ಲೇಖಕರ ಸಹವಾಸ ಬಹಳ ಕಷ್ಟಾಪ್ಪ. ನಾವು ಆಡಿದ್ದು ಮಾಡಿದ್ದನ್ನೆಲ್ಲಾ ಬರೆದುಬಿಡುತ್ತಾರೆ."

"ಮೈಯಲ್ಲಿ ಹೇಗಿದೆ ಮ್ಯಾಡಂ."

"ಸ್ವಲ್ಪ ಜ್ವರ ಬರುತ್ತಿದೆಯಷ್ಟೆ. ಗಾಬರಿಪಡುವ ಕಾರಣವಿಲ್ಲ. ವಯಸ್ಸಾಯಿತು. ಉಗುರುಘಾಯ ಬ್ರಹ್ಮರಾಕ್ಷಸನಾಗುವುದು ಸ್ವಾಭಾವಿಕ."

"ನಿಮ್ಮ ಮೈಯಲ್ಲಿ ಚೆನ್ನಾಗಿಲ್ಲವೆಂದು ನನಗೆ ಇಂದೇ ಗೊತ್ತಾದುದು—ಹೀಗೇಕೆ ಮಾಡಿದಿರಿ—ಮೊದಲೇ ಹೇಳಿಕಳಿಸಬಾರದಾಗಿತ್ತೇ ?"

"ನಾನು ಕವಿಯ ಹೆಂಡತಿಯುಲ್ಲದಿದ್ದರೂ, ಕವಿಯ ಹೆಂಡತಿಯಾಗುವ ಕಷ್ಟಬಲ್ಲೆ ಲಲಿತ. ಇಂದಂತೂ ನಿನ್ನನ್ನು ನೋಡಲೇಬೇಕಾಗಿತ್ತು—ನಾನು ಹೇಳುವುದನ್ನು ನೀನು ಶಾಂತಿಯಿಂದ ಕೇಳಬೇಕು. ನಿನ್ನ ಕಣ್ಣಲ್ಲಿ ನೀರು ಬಂದರೆ ನನ್ನ ಮಾತು ನಿಂತೇ ಹೋಗುತ್ತದೆ."

"ಆಗಲಿ—ಹೇಳಿ."

"ರೂಮಿನ ಬಾಗಿಲು ಮುಂದಕ್ಕೆ ಮಾಡು."

ಲಲಿತ ರೂಮಿನ ಬಾಗಿಲು ಹಾಕಿ ಸ್ವಸ್ಥಾನದಲ್ಲಿ ಬಂದು ಕುಳಿತಳು.

"ನಾನು ಗಟ್ಟಿ ಗಡುತರದ ಹೆಂಗಸಲ್ಲವೆಂಬುದು ನಿನಗೆ ಗೊತ್ತೇ ಇದೆ. ನಿತ್ಯರೋಗಿಯ ಜೀವ ಯಾವಾಗಲೂ ಭದ್ರವಂತೆ! ಆದರೆ ಈ ಸಲ ನಾನು ಕಾಹಿಲೆ ಮಲಗಿದ ಮೇಲೆ ನನ್ನ ವಿಚಾರ ಬದಲಾಗಿದೆ. ಹೆಚ್ಚುದಿನ ನಾನು ಉಳಿಯುವ ಸಂಭವವಿಲ್ಲ. ರಾಮಚಂದ್ರರಾಯರ ಜೀವವೂ ಶಾಶ್ವತವಲ್ಲ. ನಾವಿಬ್ಬರೂ ಕಟ್ಟಿದ ಸಂಸ್ಥೆ ನಾಮಾವಶೇಷವಾಗಬಾರದೆಂದೇ ನನ್ನ ಆಸೆ. ದೈವಾನುಗ್ರಹದಿಂದ 'ಅಭಯಾಶ್ರಮ' ತನ್ನ ಕಾಲಮೇಲೆ ನಿಲ್ಲುವಂತಾಗಿದೆ. ಸಂಸ್ಥೆ ಮುನ್ನಡೆಯುವುದಕ್ಕೆ ಸ್ವಲ್ಪ ಇಡುಗಂಟನ್ನೂ ಇಟ್ಟಿದ್ದೇನೆ. ಇಷ್ಟು ಸಾಲದು—ನೂರಾರು ನಿರ್ಭಾಗ್ಯಸ್ತ್ರೀಯರ ದುಃಖ ನೋಡುವಾಗ ನಾವು ಮಾಡಿರುವುದು ಸಾಕೇ ಎಂದೆನಿಸುತ್ತದೆ. ನಮ್ಮ ಸಂಸ್ಥೆ ಬೆಳೆಯಬೇಕು—ಇದು ದೀನ, ದರಿದ್ರ, ದಲಿತ, ಪತಿತ ಸ್ತ್ರೀಯರಿಗೆಲ್ಲಾ ಪುನರ್ಜನ್ಮ ಕರುಣಿಸುವಂತಾಗಬೇಕು. ನಾನು ಆರಂಭಿಸಿದ ಕೆಲಸ ಮುಂದುವರಿಸುವ ಚೇತನ ಇರುವುದು ನಿನಗೊಬ್ಬಳಿಗೆ—ಸಂಸ್ಥೆಯನ್ನು ನೀನು ಒಪ್ಪಿಸಿಕೊಂಡರೆ ನಾನು ನಿಶ್ಚಿಂತೆಯಿಂದ ಪ್ರಾಣತ್ಯಜಿಸಬಲ್ಲೆ—ಆದರೆ–ಈ ಜವಾಬ್ದಾರಿ ನಿನ್ನ ಹೆಗಲ ಮೇಲೆ ಹೇಗೆ ಹಾಕಲಿ. ನಿನ್ನನ್ನು ಇಲ್ಲಿಗೆ ಎಳೆದುಕೊಂಡು ಕವಿಗಳಿಗೆ ಅನ್ಯಾಯ ಮಾಡಲು ಮನಸ್ಸು ಒಪ್ಪುತ್ತಿಲ್ಲ. ಇದಕ್ಕೆ ಒಂದು ಪರಿಹಾರ ಹುಡುಕಿದ್ದೇನೆ."

"ಏನು ಪರಿಹಾರ ?"

"ಆಶ್ರಮದ ಎಲ್ಲ ಕೆಲಸಕಾರ್ಯವೂ ನಿರ್ಮಲನಿಗೆ ಗೊತ್ತಿದೆ. ನೀನು ಸಮ್ಮತಿಸುವುದಾದರೆ ಅವಳನ್ನು ಕಾರ್ಯದರ್ಶಿ ಮಾಡಲಿಚ್ಛಿಸುತ್ತೇನೆ. ನಿರ್ಮಲನಿಗೆ ಎಲ್ಲ ಸಹಕಾರ ನೀಡಿ, ಅವಳು ದಕ್ಷತೆಯಿಂದ ಕರ್ತವ್ಯ ನಿರ್ವಹಿಸುವಂತೆ ಮಾಡುವುದು ನಿನ್ನ ಜವಾಬ್ದಾರಿ."

"ನಿಮ್ಮ ಸ್ಥಾನದಲ್ಲಿ ನಿಲ್ಲುವಷ್ಟು ಸಮರ್ಥಳೇ ನಿರ್ಮಲಾ ?"

"ಸಾಮರ್ಥ್ಯವನ್ನು ಯಾರೂ ಹುಟ್ಟುವಾಗಲೇ ಕಟ್ಟಿಕೊಂಡು ಬರುವುದಿಲ್ಲ. ಅನುಭವಬೆಳೆದಂತೆ ಸಾಮರ್ಥ್ಯವೂ ಹೆಚ್ಚುತ್ತದೆ."

"ಆಶ್ರಮವಾಸಿಗಳು, ರಾಯರು, ಸಮಿತಿಯ ಸದಸ್ಯರು ಏನನ್ನುತ್ತಾರೆ ?"

"ನನ್ನ ಸಲಹೆ ಅವರು ನಿರಾಕರಿಸಲಾರರು."

"ನಿರ್ಮಲನಿಗಿಂತ ಜ್ವಾಲಾಮಾಲಿನಿ ಹಳಬಳು. ಅವಳಿಗೂ ಆಶ್ರಮದ ಕೆಲಸಕಾರ್ಯದ ಪರಿಚಯವಿದೆ. ಅವಳನ್ನೇ ಏಕೆ ನೇಮಿಸಬಾರದು ?"

"ಆಶ್ರಮದ ಒಳಗೆಲಸ ಮಾಡುವ ಚೈತನ್ಯ ಜ್ವಾಲನಿಗಿದೆಯೇ ವಿನಾ ಹೊರಗೆಲಸ ಮಾಡುವ ಚೈತನ್ಯವಿಲ್ಲ. ಆ ಕೆಲಸದ ಅನುಭವ ನಿರ್ಮಲನಿಗಿದೆ."

"ನಾನೊಂದು ಸಲಹೆ ನೀಡಲೇ ?"

"ಅವಶ್ಯಕವಾಗಿ."

"ಇಬ್ಬರನ್ನೂ ಸಂಯುಕ್ತ ಕಾರ್ಯದರ್ಶಿಯರನ್ನಾಗಿ ಮಾಡೋಣ. ಇದರಿಂದ ಎಲ್ಲರಿಗೂ ತೃಪ್ತಿಯಾಗುತ್ತದೆ. ನಾಳೆ–ಇವರಿಬ್ಬರಲ್ಲಿ ಯಾರಾದರೂ ಹೊರಟುಹೋಗುವ ಸಂಭವ ಬಂದರೆ, ಇನ್ನೊಬ್ಬಳು ಕೆಲಸ ತೂಗಿಸಿಕೊಂಡು ಹೋಗುತ್ತಾಳೆ."

"ನಿಜ. ಹಾಗೂ ಮಾಡಬಹುದು. ನಿರ್ಮಲ ಹೊರಟು ಹೋಗುವ ಸಂಭವವಿದೆಯೇ ?"

"ಯಾವುದನ್ನೂ ನಾನೀಗಲೇ ನಿಶ್ಚಷ್ಟವಾಗಿ ಹೇಳಲಾರೆ. ನಿರ್ಮಲ ದಾಂಪತ್ಯಜೀವನಕ್ಕೆ ಹೇಳಿಮಾಡಿಸಿದ ಹೆಣ್ಣು. ಬೇರೆ ಯಾವ ಜೀವನ ದಲ್ಲಿಯೂ ಅವಳಿಗೆ ಸುಖವಿಲ್ಲ."

"ವರ ಯಾರು ?"

"ನಾನು ಹೇಳಿದ್ದು ಕೇವಲ ಊಹೆಯ ಮಾತು."

ಸುಂದರಮ್ಮನವರು ಮುಗುಳ್ನಗೆ ಬೀರಿ

"ನೀನು ಮಹಾಕಳ್ಳಿ ಕಣೇ ಲಲಿತಾ !" ಎಂದರು.

"ಏಕೆ ಮ್ಯಾಡಾಂ ?"

"ನನಗೂ ತಿಳಿಸದಂತೆ ಎಲ್ಲಾ ಒಳಗೇ ಲೆಕ್ಕ ಹಾಕಿದ್ದೀ !"

"ಛೆ ! ಛೆ ! ಒಳಸಂಚು ಮಾಡುವ ಉದ್ದೇಶ ನನಗಿಲ್ಲ ಮ್ಯಾಡಾಂ."

"ಹುಚ್ಚಿ. ನನ್ನ ಮಾತು ತಪ್ಪು ತಿಳಿದುಕೊಳ್ಳಬೇಡ. ನೀನು ಏನೇ ಮಾಡಿದರೂ ಆಶ್ರಮದ ಹಿತ, ಆಶ್ರಮವಾಸಿಗಳ ಸೌಖ್ಯಕ್ಕಾಗಿ ಎಂಬುವನ್ನೂ ನಾನು ಚೆನ್ನಾಗಿ ಬಲ್ಲೆ. ಈ ಮಕ್ಕಳ ಭವಿಷ್ಯ ಸುಗಮವಾಗಬೇಕೆಂದಲ್ಲವೇ ನಾವಿಷ್ಟು ಚಿಂತೆ ಮಾಡುತ್ತಿರುವುದು."

"ನಿಮ್ಮಲ್ಲೇಕೆ ಮರೆಮಾಜಲಿ—ನಿರ್ಮಲನನ್ನು ಇಲ್ಲಿಗೆ ಕರೆತಂದ ಸರ್ದಾರ್ ತಾರಾಸಿಂಗರ ನೆನಪಿರಬಹುದು."

"ಇದೆ—ಅವರನ್ನು ಮರೆಯಲು ಸಾಧ್ಯವೇ ?"

"ಅವರ ಹೃದಯದಲ್ಲಿ ನಿರ್ಮಲನಿಗೆ ಸದಾ ಸ್ಥಾನವಿದೆ."

"ತಾರಾಸಿಂಗರನ್ನು ಇಲ್ಲಿಗೆ ಬರಮಾಡುವೆಯಾ ?"

"ಇಲ್ಲ—ಎಲ್ಲವೂ ಪ್ರಕೃತಿ ನಿಯಮದಂತೆ ರೂಪುಗೊಳ್ಳಬೇಕು. ಒತ್ತಾಯ, ಅವಸರದಿಂದ ಸಾಧಿಸಿದ ಫಲ ಅಲ್ಪಾಯುವಾಗುತ್ತದೆ."

"ಅನವಸರದಿಂದ ಕೆಲಸ ಕೆಡುವುದೂ ಉಂಟು."

"ಹಾಗಾಗದಂತೆ ಎಚ್ಚರವಾಗಿರುತ್ತೇನೆ."

"ಕೊನೆಗೆ ನಾವು ಯಾವ ನಿರ್ಧಾರಕ್ಕೆ ಬಂದಂತಾಯಿತು."

"ನಿರ್ಮಲಾ ಜ್ವಾಲಾ ಕಾರ್ಯದರ್ಶಿಗಳಾಗಿರಲಿ—ನಾನು ಅವರ ಸಹಾಯಕಳಾಗಿರುತ್ತೇನೆ. ಆದರೆ ಒಂದು ಕರಾರಿನ ಮೇಲೆ ನಾನು ಈ ವ್ಯವಸ್ಥೆಗೊಪ್ಪುವುದು."

"ನಿನ್ನ ಕರಾರೇನು ?"

"ನಿಮ್ಮ ಜೀವಪರ್ಯಂತ ಯಾರೂ ನಿಮ್ಮ ಸ್ಥಾನಕ್ಕೆ ಬರಕೂಡದು."

"ನನಗೆ ವಿಶ್ರಾಂತಿ ಕೊಡಲು ನೀನು ಇಚ್ಛಿಸುವುದಿಲ್ಲ."

"ಇಲ್ಲ—ನೀವು ವಿಶ್ರಾಂತರಾಗಲು ಸಾಧ್ಯವಿಲ್ಲ"

ಎಂದು ಲಲಿತಮ್ಮ ಖಂಡಿತವಾಗಿ ನುಡಿದಳು.

"ಸದ್ಯಕ್ಕೆ ಈ ಮಾತು ನಮ್ಮಲ್ಲಿಯೇ ಇರಲಿ. ಸಮಯ ಬಂದಾಗ ಉಳಿದವರಿಗೆ ತಿಳಿಸಿದರಾಯಿತು"

ಎಂದು ಸುಂದರಮ್ಮ ಸೂಚಿಸಿದರು.

ಸಂಜೆಯವರೆವಿಗೂ ಆಶ್ರಮವಾಸಿಗಳು ಲಲಿತಮ್ಮನನ್ನು ಬಿಡಲಿಲ್ಲ. ತಾವು ಕಲಿತಿದ್ದ ಪಾಠ, ಹಾಡು, ಕಸೂತಿ, ಚಿತ್ರದ ಕೆಲಸಗಳೆಲ್ಲವನ್ನೂ ಅವಳಿಗೆ ನಿವೇದಿಸಿ ಅವಳಿಂದ 'ಭಲೆ' ಎನಿಸಿಕೊಳ್ಳುವವರೆಗೆ ಆಶ್ರಮವಾಸಿಗಳಿಗೆ ತೃಪ್ತಿಯಿರಲಿಲ್ಲ.

ಮನೆಗೆ ಹೊರಟುನಿಂತ ಲಲಿತನ ಬಳಿ ಬಂದು ನಿರ್ಮಲಾ "ದಿನವೂ ಒಮ್ಮೆಯಾದರೂ ಇಲ್ಲಿಗೆ ಬಂದು ಹೋಗಿ ಬರ್ಹೆ" ಎಂದಳು.

"ಬರಲು ಪ್ರಯತ್ನಿಸುತ್ತೀನೆ ನಿರ್ಮಲಾ."

"ಮುಂಬಯಿಯಲ್ಲಿ ಎಲ್ಲರೂ ಕ್ಷೇಮದಿಂದಿರುವರೇ ?"

"ಈಚೆಗೆ ಮುಂಬಯಿಯ ಸುದ್ದಿಯೇ ಇಲ್ಲ. ತಪ್ಪು ಅವರದಲ್ಲ—ನಮ್ಮದು. ಮೇಥಾಜಿ, ಸರ್ದಾರ್ ಬರೆದ ಕಾಗದಗಳಿಗೆ ನಾವು ಉತ್ತರವನ್ನೆ ಬರೆದಿಲ್ಲ."

"ದಯೆಯಿಟ್ಟು ಬರೆಯಿರಿ."

"ನೀನು ಸರ್ದಾರರಿಗೆ ಕಾಗದ ಬರೆದೆಯಾ ?"

"ಏನೆಂದು ಬರೆಯಲಿ."

"ಅದನ್ನು ನಾನು ಹೇಳಿಕೊಡಬೇಕೆ ?"

"ಅವರು ಬರೆದರೆ ನಾನು ಉತ್ತರ ಬರೆಯಬಹುದಲ್ಲವೇ ?"

"ಹೌದು—ಹೌದು—ಸರ್ದಾರ್ ನಿನಗೆ ಕಾಗದ ಬರೆಯಲಿಲ್ಲವೇ ?"

"ಇಲ್ಲ."

ಲಲಿತಮ್ಮ ಮಂದಹಾಸ ಬೀರಿ

"ಸದ್ಯದಲ್ಲಿಯೇ ಬರೆಯುತ್ತಾರೆ ಸುಮ್ಮನಿರು"

ಎಂದಳು.

ಲಲಿತಮ್ಮ ಆಶ್ರಮ ಬಿಟ್ಟು ಹೊರಟುಹೋದ ಬಹಳ ಹೊತ್ತಿನವರೆಗ ನಿರ್ಮಲಾ ನಿಂತಲ್ಲಿಯೇ ನಿಂತಿದ್ದಳು. ಅವಳ ಮನಸ್ಸು ಬಹಳ ದೂ ಪ್ರಯಾಣ ಬೆಳೆಸಿತ್ತು.

ಸುಮಿತ್ರಾ ಬಂದು

"ಒಳಗೆ ಬಾ ನಿರ್ಮಲಕ್ಕ"

ಎಂದು ಕರೆದಾಗಲೇ ಅವಳಿಗೆ ಎಚ್ಚರ.

೧೦

ವಿಶ್ವೇಶ್ವರಯ್ಯ ತನ್ನ 'ವಿಕಾಸ ಮುದ್ರಣಾಲಯ' ದಲ್ಲಿಯೇ ಅಚ್ಚು ಹಾಕಿ ಮೂರ್ತಿಯ 'ತಾಯಿದೇವಿ'—ಸುತರಾಮಯ್ಯನ 'ಬಯಲು ಬಾಳು' ಎರಡು ಗ್ರಂಥಗಳನ್ನೂ ಪ್ರಕಟಿಸಿದ. ಗ್ರಂಥಗಳನ್ನು ವಿಮರ್ಶೆಗಾಗಿ ಪತ್ರಿಕೆಗಳಿಗೆ ಕಳುಹಿಸುವ ಅಗತ್ಯವಿಲ್ಲವೆಂದು ವಿಶ್ವೇಶ್ವರಯ್ಯನ ಅಭಿಪ್ರಾಯವಾಗಿತ್ತು.

"ಏಕೆ ವಿಶ್ವೇಶ್ವರಯ್ಯ, ಪುಸ್ತಕಗಳನ್ನು ವಿಮರ್ಶೆಗೆ ಕಳಿಸುವುದಿಲ್ಲವೇ ?"

ಎಂದು ಮೂರ್ತಿ ಕೇಳಿದಾಗ ವಿಶ್ವೇಶ್ವರಯ್ಯ

"ಏನು ಪ್ರಯೋಜನ ಸಾರ್. ನನಗೆ ವೃಥಾ ಮೂವತ್ತು ನಲವತ್ತು ಪ್ರತಿ ದಂಡ. ನಿಮ್ಮ ಕೃತಿ ಯಾವದೇ ಹೊರಬಿದ್ದರೂ ಯುಗವಾಣಿ—ಜನಸಂದೇಶ—ಶ್ರಮಜೀವಿ—ಕಾಲದೂತ ಪತ್ರಿಕೆಗಳಲ್ಲಿ ನ್ಯಾಯವಾದ ವಿಮರ್ಶೆ ಪ್ರಕಟವಾಗುವುದಿಲ್ಲ. ಅವರು ಹೇಗೂ ನಿಮ್ಮ ಪುಸ್ತಕ ಬಯ್ಯುತ್ತಾರೆ—ಒಂದು ಪ್ರತಿ ಕೊಂಡಾದರೂ ಬಯ್ಯಲಿ."

"ನಮ್ಮ ಪುಸ್ತಕಗಳನ್ನು ಹೊಗಳಲಿ ಎಂದು ನಾವು ಕಳಿಸಿಕೊಡಬೇಕೇ ?"

"ಬಾಯಿಗೆ ಬಂದಂತೆ ಬಯ್ಯಲಿ ಎಂದು ಕಳಿಸಿಕೊಡಬೇಕೇ ಸಾರ್. ಇವತ್ತು ನಮ್ಮಲ್ಲಿ ಪುಸ್ತಕ ವ್ಯಾಪಾರ ಲಕ್ಷಾಂತರ ರೂಪಾಯಿ ಗಳಿಸುವ ಸಾಧನವಾಗಿಲ್ಲ. ಪ್ರಕಾಶಕರಾದ ನಾವು ಹಾಕಿದ ಬಂಡವಾಳವಾದರೂ ಹಿಂದಿರುಗದಿದ್ದರೆ ಏನು ಸಾರ್ಥಕ? ನಮ್ಮಲ್ಲಿ ಹಲವು ಉದ್ಯಮಗಳು ಬೆಳೆಯಬೇಕೆಂದು ಹಾತೊರೆಯುವ ಪತ್ರಿಕಾಕರ್ತರು ಪ್ರಕಾಶನ ಉದ್ಯಮಕ್ಕೇಕೆ ಕಂಟಕಪ್ರಾಯರಾಗಿದ್ದಾರೆ—ನನ್ನ ಅನುಭವದ ಆಧಾರದ ಮೇಲೆ ಹೇಳಬೇಕಾದರೆ ನಿಮ್ಮ ಪುಸ್ತಕಗಳ ಮಾರಾಟ ವಿಮರ್ಶಕರ ಅಭಿಪ್ರಾಯಗಳನ್ನವಲಂಬಿಸಿಲ್ಲ. ಅವರ ಅಭಿಪ್ರಾಯಗಳನ್ನು ನಂಬಿಕೊಂಡು ಯಾರೂ ಪುಸ್ತಕ

ಗಳನ್ನು ಕೊಳ್ಳುವುದಿಲ್ಲ. ಆದರೆ ಹೊಸ ಲೇಖಕರ ಕೃತಿಗಳನ್ನು ಪತ್ರಿಕೆ
ಗಳವರು ಖಂಡಿಸಿದರೆ ಮಾರಾಟಕ್ಕೆ ಧಕ್ಕೆ ತಗಲುತ್ತದೆ. ನೀವು ಮುನ್ನುಡಿ
ಬರೆದಿದ್ದೀರಿ ಎನ್ನುವ ಕಾರಣದಿಂದಲೇ ನಮ್ಮ ವಿಮರ್ಶಕರು ಸುತರಾಮಯ್ಯನ
ಪುಸ್ತಕ ಖಂಡಿಸಿದರೆ ನನಗೆ ಅಪಾರ ನಷ್ಟವಾಗುತ್ತದೆ."

"ಪತ್ರಿಕೋದ್ಯಮಿಗಳು ತಮ್ಮ ವೃತ್ತಿಗೌರವ ರಕ್ಷಿಸಲಿಲ್ಲವೆಂದು ನಾವೂ
ನಮ್ಮ ವೃತ್ತಿಗೌರವ ವಿಸರ್ಜಿಸುವುದು ಯಾವ ನ್ಯಾಯ ?"

"ನಮ್ಮ ವೃತ್ತಿಗೌರವ......."

"ಹೌದು. ಪ್ರಕಟವಾಗುವ ಪುಸ್ತಕಗಳನ್ನು ವಿಮರ್ಶೆಗೆ ಕಳುಹಿಸ
ಬೇಕಾದುದು ನಮ್ಮ ಗೌರವ"

"ನೀವು ಕಳಿಸೆಂದರೆ ನಾನು ಕಳಿಸಲು ಸಿದ್ಧನಾಗಿದ್ದೇನೆ ಸಾರ್
ಮೂವತ್ತು ನಲವತ್ತು ಪ್ರತಿಗಳನ್ನುಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆಂದು
ಭಾವಿಸಿಕೊಳ್ಳಬೇಡಿ."

"ನಮ್ಮಲ್ಲಿ ಅನೇಕ ಸತ್ಸಂಪ್ರದಾಯಗಳು ಇನ್ನೂ ಬೆಳೆದಿಲ್ಲ
ವಿಶ್ವೇಶ್ವರಯ್ಯನವರೇ. ವಿಮರ್ಶೆಯ ವಿಷಯದಲ್ಲಂತೂ ನಾವು ತೀರಾ
ಹಿಂದುಳಿದಿದ್ದೇವೆ. ಗ್ರಂಥಕರ್ತ, ವಿಮರ್ಶಕ ಇವರ ವೈಯಕ್ತಿಕ ಸಂಬಂಧ
ವನ್ನೇ ವಿಮರ್ಶೆಯ ಮಾನದಂಡ ಮಾಡಿಕೊಂಡಿದ್ದೇವೆ. ಒಬ್ಬ ಲೇಖಕ ತನ್ನ
ಮಿತ್ರನೆಂದು ಆತನ ಕೆಳದರ್ಜೆಯ ಪುಸ್ತಕವನ್ನು ಮಹಾಕಾವ್ಯವೆಂದು
ಹೊಗಳುವುದು ಸತ್ಯದಾಭಾಸವಲ್ಲವೇ ?

ಹುನಗುಂದ ಅವನ ಮಿತ್ರರ ಗುಂಪಿನಂಥ ಹಲವು ಗುಂಪುಗಳು ನಮ್ಮ
ದೇಶದಲ್ಲಿವೆ. ಪರಸ್ಪರ ಪ್ರಶಂಸೆಯ ವ್ಯವಸಾಯ ಮಾಡುತ್ತಿರುವ ಅವರು
ತಮ್ಮ ಗುಂಪಿನವರ ಯಾವದೇ ಪುಸ್ತಕವನ್ನಾದರೂ ಮಹಾಕೃತಿ ಎಂದು
ಸಾರುತ್ತಾರೆ. ತಮ್ಮ ಕೃತಿಗಳನ್ನು ಹೊಗಳಿಕೊಳ್ಳಲಿ ಎಂದು
ಉಳಿದವರ ಕೃತಿಗಳನ್ನು ವಿನಾಕಾರಣ ತೆಗಳುತ್ತಾರೆ. ಕಾಲೇಜ್ ಡಿಗ್ರಿ
ಗಳನ್ನು ಹಚ್ಚಿಕೊಂಡಿರುವವರ ಗುಂಪುಗಳಲ್ಲಿಯೂ ಈ ಪಿಡುಗು ಹಬ್ಬಿದೆ
ಪಠ್ಯಪುಸ್ತಕ ಸಮಿತಿಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಮಾರ್ಚ ತಿಂಗಳಲ್ಲಿ
ಸಾಹಿತಿಗಳಾಗಿ ಏಪ್ರಿಲ್ ತಿಂಗಳಲ್ಲಿ ಅದೃಶ್ಯರಾಗುವ ಈ ಸಾಹಿತಿಗಳು ಡಿಗ್ರಿ

ದೊರಕಿಸಿಕೊಳ್ಳದಿರುವವರೂ ಉತ್ತಮ ಗ್ರಂಥಗಳನ್ನು ಬರೆಯಬಲ್ಲರೆಂಬುದನ್ನು ನಂಬುವುದೇ ಇಲ್ಲ.

ಛಿದ್ರಾನ್ವೇಷಣೆಯನ್ನೇ ಕುಲಕಸುಬಾಗಿ ಅವಲಂಬಿಸಿರುವ ವಿಮರ್ಶಕರ ಒಂದು ತಂಡವಿದೆ. ಒಂದು ಗ್ರಂಥವನ್ನು ಮನಸ್ವೀ ಖಂಡಿಸಿದರೆ ತಮ್ಮ ಘನತೆ ಮೇಲಕ್ಕೇರುತ್ತದೆ ಎಂದು ಇವರು ಭಾವಿಸುತ್ತಾರೆ. ಧಾರವಾಡದಲ್ಲಿ ಒಬ್ಬ ವಕೀಲರು 'ಡೆಟ್ಟಾಲ್' (Dettol) ಎನ್ನುವ ಗುಪ್ತ ನಾಮಧೇಯ ಧರಿಸಿ ವಿಮರ್ಶೆಗಳನ್ನು ಬರೆಯುತ್ತಾರೆ. ಅವರು ವೃತ್ತಪತ್ರಿಕೆಯ ಕಛೇರಿಗೆ ಬಂದು '....ಇವರ ಇತ್ತೀಚಿನ ಪುಸ್ತಕಗಳು ಯಾವವು ಬಂದವೆ ಕೊಡ್ರೀ—ಚೆನ್ನಾಗಿ ಹಜಾಮತಿ ಮಾಡ್ತೀನಿ' ಎಂದು ಕೇಳುತ್ತಾರಂತೆ. ಕವಿಯ ಜತೆ ಸ್ಪರ್ಧಿಸ ಬೇಕಾದ ವಿಮರ್ಶಕ ನಾಯಿಂದನ ಜತೆಗೆ ಸ್ಪರ್ಧೆಗೆ ನಿಲ್ಲುವುದು ನಗೆಗೇಡಲ್ಲವೇ ?

ನಮ್ಮ ವಿಮರ್ಶಾಲೋಕದ ಪರಿಸ್ಥಿತಿ ಸ್ವಲ್ಪವೂ ತೃಪ್ತಿಕರವಾಗಿಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಈ ಕೆಸರಿನ ಮಧ್ಯವೇ ಕಮಲ ಹುಟ್ಟ ಬೇಕಲ್ಲವೇ ? ಇಂದಲ್ಲ ನಾಳೆ ಈ ದುರಂತ ಸ್ಥಿತಿ ಸುಧಾರಿಸುವುದು ಹೇಗೆಂಬುದನ್ನು ಕುರಿತು ನಾವು ವಿಚಾರಮಾಡಬೇಕು. ನಮ್ಮ ಸಾಹಿತ್ಯ ಬೆಳೆಯಬೇಕಾದರೆ ವಿಮರ್ಶೆಯೂ ಬೆಳೆಯಬೇಕು. ವಿಮರ್ಶೆಯ ಮಟ್ಟದಿಂದ ನಾವು ಒಂದು ನಾಡಿನ ಸಾಹಿತ್ಯ ಸಂಸ್ಕೃತಿಯ ಯೋಗ್ಯತೆಯನ್ನಳೆಯಬಹುದು."

ಮೂರ್ತಿಯ ಮಾತಿನಿಂದ ಸ್ಫೂರ್ತಿಗೊಂಡ ವಿಶ್ವೇಶ್ವರಯ್ಯ

"ಸಾರ್, ವಿಮರ್ಶೆಯ ಮೇಲೇ ನೀವೇಕೆ ಒಂದು ಗ್ರಂಥ ಬರೆಯ ಬಾರದು" ಎಂದು ಕೇಳಿದ.

"ಬರೆಯಬೇಕೆಂಬುದು ಬಹುದಿನಗಳ ಆಸೆ. ಬರೆದೇನುಮಾಡುವುದು ವಿಶ್ವೇಶ್ವರಯ್ಯ ?"

"ನಾನು ಪ್ರಕಟಿಸುತ್ತೇನೆ ಸಾರ್."

"ಇನ್ನು ಹತ್ತು ವರ್ಷದಲ್ಲಿಯಾದರೂ ನಿಮ್ಮ ಮುದ್ರಣವೆಚ್ಚ ಹುಟ್ಟುವು ದೆಂಬ ನಂಬಿಕೆಯಿದೆಯೇ ?"

"ಚಿಂತೆಯಿಲ್ಲ ಸಾರ್. ನಷ್ಟವಾದರೂ ಆಗಲಿ–ನೀವು ಗ್ರಂಥ ಬರೆದು ಕೊಡಿ—ನಾನು ಅಚ್ಚುಹಾಕಿಸುತ್ತೇನೆ."

"ಒಂದು ಕೆಲಸಮಾಡೋಣ. ಗ್ರಂಥ ಬರೆದುಕೊಡುತ್ತೇನೆ—ನೀವು ಅಚ್ಚುಹಾಕಿಸಿ. ನನಗೆ ಗೌರವಧನ (Royalty) ಕೊಡಬೇಡಿ."

"ನಿಮ್ಮ ಕೈಯಲ್ಲಿ ಒಂದು ಶಾಸ್ತ್ರಗ್ರಂಥ ಬರೆಸಿ ಬರಿಗೈಯಲ್ಲಿ ಕಳಿಸಲೇ ಸಾರ್."

"ಧರ್ಮಕರ್ಮಸಂಯೋಗದಿಂದ ನನ್ನ ಗ್ರಂಥ ಮಾರಾಟವಾದರೆ ಗೌರವ ಧನ ಕೊಡುವಿರಂತೆ–ನಿಮಗೆ ನಷ್ಟವಾಗಬಾರದೆಂದೇ ನನ್ನ ಆಸೆ."

"ಆಗಲಿ ಸಾರ್. 'ಸೇವಾಮಂದಿರ' ಮುಗಿದೊಡನೆಯೇ ಈ ಗ್ರಂಥ ಬರೆದುಬಿಡಿ" ಎಂದು

"ನಿನ್ನೆ ಪೇಪರ್ ನೋಡಿದಿರಾ ಸಾರ್" ಎಂದು ಕೇಳಿದ.

"ಏನು ವಿಶೇಷ-ಒಂದು ವಾರದಿಂದ ನಾನು ಪತ್ರಿಕೆಗಳನ್ನೇ ನೋಡಲಿಲ್ಲ."

"ಕಾರವಾರದ ಡಿಸ್ಟ್ರಿಕ್ಟ್ ಕಲೆಕ್ಟರ್ ಹುನಗುಂದ ಈಶ್ವರರಾಯನನ್ನು ಜಿಲ್ಲೆಯಿಂದ ಹೊರಗೆ ಹಾಕಿರುವಂತೆ."

"ಏಕೆ ?"

"ರೈತರನ್ನು ಹಿಂಸೆಮಾಡಿ ಹಣ ವಸೂಲ್ಮಾಡುತ್ತಿದ್ದನಂತೆ !"

"ರೈತರನ್ನು ಉದ್ಧರಿಸುವುದಕ್ಕೆ ಅವನು ಕಾರವಾರಕ್ಕೆ ಹೋಗಿದ್ದ ನಲ್ಲಪ್ಪಾ !"

"ಕೈಗೆ ಕಾಸು ಬರುತ್ತಿದ್ದರೆ ಎಲ್ಲರೂ ಉದ್ಧಾರಕರೇ ಸಾರ್"

ಎಂದು ವಿಶ್ವೇಶ್ವರಯ್ಯ ಬೇಸರದಿಂದ ನುಡಿದ.

ಅಂದೇ ಸಂಜೆ ಮೂರ್ತಿಯನ್ನು ಕಾಣಲು ಬಂದ ಗುಂಡಣ್ಣ. ವಿಶ್ವೇಶ್ವರಯ್ಯ ಹೇಳಿದ್ದ ಸುದ್ದಿಯನ್ನು ಸಮರ್ಥಿಸಿದುದಲ್ಲದೆ, ಮೂರ್ತಿಯ ಕೈಗೆ ಅಂದಿನ 'ಯುಗವಾಣಿ' ಪತ್ರಿಕೆಯನ್ನಿಟ್ಟು

"ಈ ಕಾಲಂ ಓದು—ಎಲ್ಲಾ ಅರ್ಥವಾಗುತ್ತದೆ" ಎಂದ.

ಯುಗವಾಣಿಯಲ್ಲಿ ಹಲವರ ಸಹಿಯನ್ನೊಳಗೊಂಡ ಒಂದು ಮನವಿ ಪ್ರಕಟವಾಗಿತ್ತು

**ಕ್ರಾಂತಿವೀರ ಶ್ರೀ ಹುನಗುಂದರ ಗಡೀಪಾರು**

ಜಿಲ್ಲಾ ಕಲೆಕ್ಟರರ ಅಸೀಮ ಕ್ರೌರ್ಯ.

"ಸುಪ್ರಸಿದ್ಧ ಪುರೋಗಾಮಿ ಸಾಹಿತಿಗಳಾದ ಶ್ರೀ ಹುನಗುಂದ ಈಶ್ವರರಾಯರು ಕನ್ನಡಿಗರಿಗೆ ಸುಪರಿಚಿತರು. ಅವರ ಹಲವು ಗ್ರಂಥಗಳು

ಜನಪ್ರಿಯತೆಯನ್ನು ಗಳಿಸಿರುವುದಲ್ಲದೆ, ಅವರ ಕೀರ್ತಿಯನ್ನು ಹಳ್ಳಿಹಳ್ಳಿಗೂ ಪಸರಿಸಿವೆ. ಶ್ರೀ ಹುನಗುಂದರು ಉತ್ತಮ ಸಾಹಿತಿಗಳಾಗಿರುವಂತೆ ಶ್ರೇಷ್ಠ ಕಾರ್ಯಕರ್ತರೂ ಆಗಿದ್ದಾರೆ. ವಿಶ್ವಶಾಂತಿಗಾಗಿ ಅವರು ತನು ಮನ ಧನಗಳ ನ್ನರ್ಪಿಸಿ ಶ್ರಮಿಸಿದ್ದಾರೆ.

ಈಚೆಗೆ ಕೆಲವು ತಿಂಗಳಿಂದ ಶ್ರೀ ಹುನಗುಂದರು ಕಾರವಾರ ಜಿಲ್ಲೆಯನ್ನು ತಮ್ಮ ಸೇವಾಕ್ಷೇತ್ರಮಾಡಿಕೊಂಡು, ಅಲ್ಲಿಯೇ ನೆಲಸಿ ಅಲ್ಲಿನ ರೈತರ ಪುನರು ದ್ಧಾರಕ್ಕಾಗಿ ದುಡಿಯುತ್ತಿರುವರು. ಕಾರವಾರದ ಜಿಲ್ಲಾಧಿಕಾರಿಗಳಾದ ಶ್ರೀ ನಾಡಕರಣಿಯವರು ಶ್ರೀ ಹುನಗುಂದರ ಮೇಲೆ ತಮ್ಮ ಕೆಂಗಣ್ಣು ತೆರೆದು, ಅವರನ್ನು ಚಿತ್ರಹಿಂಸೆಗೊಳಗಾಗಿಸಿ, ಜಿಲ್ಲೆಯಿಂದ ಗಡೀಪಾರುಮಾಡಿದ್ದಾರೆ. ಜಿಲ್ಲಾಧಿಕಾರಿಗಳ ಈ ಅಮಾನುಷ ದಬ್ಬಾಳಿಕೆಯನ್ನು ನಾವು ಖಂಡಿಸುವು ದಲ್ಲದೆ ಶ್ರೀ ಹುನಗುಂದರಿಗೆ ನಮ್ಮ ಹೃತ್ಪೂರ್ವಕ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತೇವೆ.

ಶ್ರೀ ಹುನಗುಂದರು ಅಪಾರ ಕಷ್ಟನಷ್ಟಗಳಿಗೊಳಗಾಗಿ ಕಾರವಾರ ಜಿಲ್ಲೆಯನ್ನು ಬಿಟ್ಟು ಬಂದಿರುತ್ತಾರೆ. ಅವರು ತಮ್ಮ ಹೋರಾಟವನ್ನು ಕಾರವಾರದ ಬಡರೈತರ ಸಲುವಾಗಿ ಮುಂದುವರಿಸಬೇಕಾದುದು ಅತ್ಯವಶ್ಯಕ. ಈ ಸಂದರ್ಭದಲ್ಲಿ ಮಹಾಜನರು ಮುಂದೆ ಬಂದು ಶ್ರೀ ಹುನಗುಂದರಿಗೆ ಉದಾರಹೃದಯದಿಂದ ಧನಸಹಾಯವನ್ನೊದಗಿಸಬೇಕೆಂದು ನಾವು ವಿನಂತಿಸಿ ಕೊಳ್ಳುತ್ತೇವೆ.

ಶ್ರೀ ಹುನಗುಂದರಿಗೆ ನೀಡುವ ಸಹಾಯದ್ರವ್ಯ ಸ್ವಾತಂತ್ರರಕ್ಷಣೆಗಾಗಿ, ದಬ್ಬಾಳಿಕೆಯ ದಮನಕ್ಕಾಗಿ, ಕಾಂಗ್ರೆಸ್ ಸರ್ಕಾರದ ಠೊಳ್ಳುತನವನ್ನು ಬಯಲಿಗಿಡುವುದಕ್ಕಾಗಿ ಉಪಯೋಗಿಸಲ್ಪಡುವುದು.

ದಾತೃಗಳು ಹಣವನ್ನು 'ಶ್ರೀ ಹುನಗುಂದ ಸಹಾಯನಿಧಿ'ಯ ಖಜಾಂಚಿ ಗಳಾದ ಶ್ರೀ ರಾಘವಯ್ಯ, ಸಂಪಾದಕರು 'ಯುಗವಾಣಿ' ಅವರ ವಿಳಾಸಕ್ಕೆ ಕಳುಹಿಸಬಹುದು.

ನರಸಿಂಹ ಕಾಮತ್, ಕಾರ್ಯದರ್ಶಿ, ಕ. ಪ್ರಾ. ಕಮ್ಯುನಿಸ್ಟ್ ಪಾರ್ಟಿ.
ರಾಘವಯ್ಯ, ಸಂಪಾದಕ 'ಯುಗವಾಣಿ'.
ನಾಗಪ್ಪ, ಅಧ್ಯಕ್ಷ 'ಶಾಂತಿಸಮಿತಿ' ಮೈಸೂರು.

ಹರಿಣಿ ಮಂಗಸೂಳಿ, ಅಧ್ಯಕ್ಷೆ 'ಶಾಂತಿಸಮಿತಿ' ಹುಬ್ಬಳ್ಳಿ.
ವೆಂಕಟದಾಸಪ್ಪ, ಶಿವಮೊಗ್ಗೆ.
ಎಮ್ಮಿಗನೂರು ದೊಡ್ಡಬಸಪ್ಪ, ಎಲ್. ಎಲ್. ಬಿ. ಸಂಪಾದಕ 'ಶ್ರಮಜೀವಿ
ಹನುಮಂತರಾವ್ ಕಲ್‌ಘಟಿಗಿ, ಹುಬ್ಬಳ್ಳಿ.
ಸುಬ್ಬಣ್ಣ, ಹೊಳೆಯುನರಸೀಪುರ.
ವಶಿಷ್ಠ, ಬಿ. ಎ. ಸಂಪಾದಕ 'ಕಾಲದೂತ'
ವಿ. ಪುಟ್ಟಣ್ಣ, ಸಂಪಾದಕ 'ಜನಸಂದೇಶ'
ವೆಂಕಟೇಶ, ಅರಸೀಕೆರೆ.
ಸೂರಭಟ್ಟ, ಬಾಣಾವರ.
ಅನಂತ ಪೈ, ಪುತ್ತೂರು.
ವಡಿವೇಲು, ಗೋಪಿಚೆಟ್ಟಿಪಾಳ್ಯ.
ಮನೋರಮಾದೇವಿ, ಮೈಸೂರು.
ಅಬ್ದುಲ್ ಗಫಾರ್, ಚೆನ್ನಪಟ್ಟಣ.
ರಾಜಶೇಖರ, ಬೆಂಗಳೂರು.

"ಇದೊಂದೂ ನನಗೆ ಅರ್ಥವೇ ಆಗುವುದಿಲ್ಲ ಗುಂಡಣ್ಣ. ಸಹಾಯ ನಿಧಿಯ ಸಂಗ್ರಹವೇಕೆ ?"

"ಸಂತ್ರಸ್ತ ಕ್ರಾಂತಿವೀರನ ಸಹಾಯಾರ್ಥವಾಗಿ."

"ಇದು ನಿಜವೇ ?"

"ಪ್ರತಿಯೊಂದು ಸನ್ನಿವೇಶವನ್ನೂ ತಮ್ಮ ಅನುಕೂಲಕ್ಕೆ ಉಪಯೋಗಿ ಕೊಳ್ಳುವುದರಲ್ಲಿ ರಾಘವಯ್ಯ ಮತ್ತು ಕಂಪೆನಿ (ಲಿಮಿಟೆಡ್) ನಿಸ್ಸೀಮರೆಂಬ ದನ್ನು ಕಾಣೆಯಾ ? ಈ ಸಹಾಯನಿಧಿಯ ಕಛೇರಿ ಎಲ್ಲಿವೆಯೆಂದ ಭಾವಿಸಿರುವೆ ?"

"ಯುಗವಾಣಿ ಕಾರ್ಯಾಲಯದಲ್ಲಿ."

"ಅಲ್ಲ–ಸುಖಜಗತ್ತಿನಲ್ಲಿ. ಇಂದೇ ಹೋಗಿ ಪರಾಮರ್ಶಿಸಬಹುದು."

"ಇದು ಹಗಲು ದರೋಡೆ."

"ಸಾಮ್ಯವಾದದ ಹೆಸರಿನಲ್ಲ ಕಮ್ಯುನಿಸ್ಟರು ನಡಸುತ್ತಿರುವ ದರೋ ಇರುಳು ದರೋಡೆಯೇ ?"

"ಹೀಗಾದರೆ ದೇಶ ಬದುಕುವುದು ಹೇಗೆ ? ಕಾಂಗ್ರೆಸ್ ಸರ್ಕಾರ ಏತ ಕಣ್ಣುಮುಚ್ಚಿಕೊಂಡು ಕುಳಿತಿದೆ."

"ಗಾಜಿನಮನೆಗಳಲ್ಲಿ ವಾಸಮಾಡುವವರು ಇತರರ ಮೇಲೆ ಕಲ್ಲೆಸೆಯ ಬಾರದು."

"ಮನವಿಗೆ ಸಹಿಮಾಡಿರುವವರೆಲ್ಲ ಹುನಗುಂದನ ಮಿತ್ರರು. ಗಫಾರ್, ರಾಜಶೇಖರ—ಇವರು ಯಾರು ?"

"ಗಫಾರ್ ಚೆನ್ನಪಟ್ಟಣದಲ್ಲಿ ಬಣ್ಣದಸಾಮಾನು ಮಾಡುವ ಸಣ್ಣ ಕಾರ್ಖಾನೆ ಇಟ್ಟುಕೊಂಡಿದ್ದಾನೆ. ಈಚೆಗೆ ಚೆನ್ನಪಟ್ಟಣಕ್ಕೆ ಹೋದ ಕಾಮ್ರೇಡ್ ಕಾಮತ್ ಅಲ್ಲಿ ಒಂದು 'ಬಣ್ಣದಸಾಮಾನು ಮಾಡುವವರ ಸಂಘ' ಸ್ಥಾಪಿಸಿ ಗಫಾರನನ್ನೇ ಅಧ್ಯಕ್ಷನನ್ನಾಗಿ ಮಾಡಿದ್ದಾನೆ."

"ಕೆಲಸಗಾರರ ಸಂಘಕ್ಕೆ ಮಾಲೀಕ ಅಧ್ಯಕ್ಷನಾಗುವುದೇ ?"

"ಏಕಾಗಬಾರದು ? ಮಾಲಿಕನ ಬಂಡವಾಳ ಕರಗಿಸುವುದಕ್ಕೆ ಕಮ್ಯುನಿಸ್ಟ ಪಾರ್ಟಿ ಕಾಮ್ರೇಡುಗಳಿರುವಾಗ—ಬಂಡವಾಳ ನೀಗಿಕೊಂಡ ಮಾಲಿಕನೂ ಕಾಲಕ್ರಮದಲ್ಲಿ ಕೆಲಸಗಾರನಾಗುತ್ತಾನೆ."

"ಸರಿ—ರಾಜಶೇಖರ ಯಾರು ?"

"ಕಮ್ಯುನಿಸ್ಟ ಪಾರ್ಟಿಯಲ್ಲಿರುವ **ಕೆಲವೇ** ಯೋಗ್ಯರಲ್ಲಿ ಒಬ್ಬ. ವ್ಯಾಪಾರಸಾಪಾರ ಮಾಡುತ್ತಿದ್ದ. ಅನುಕೂಲವಾಗಿದ್ದ. ಕಮ್ಯುನಿಸ್ಟ ಸಾಥಿಗಳು ಹೇಗೋ ಅವನನ್ನು ಹಿಡಿದು ಅವನಿಗೆ ಮಾರ್ಕ್ಸ ಮದಿರೆ ಕುಡಿಸಿದರು. ರಾಜಶೇಖರನ ಮನೆ ಕಮ್ಯುನಿಸ್ಟರ ಛತ್ರವಾಯಿತು. ಬೆಳಿಗ್ಗೆ ಯಿಂದ ಸಂಜೆಯವರೆಗೆ ಕಮ್ಯುನಿಸ್ಟ ಸಾಥಿಗಳಿಗೆ ಕಾಫಿ, ತಿಂಡಿ, ಊಟ ಸರಬರಾಯಿ ಮಾಡುವುದೇ ರಾಜಶೇಖರನ ಮನೆಯವರ ಉದ್ಯೋಗವಾಯಿತು."

"ಈಗ ?"

"ರಾಜಶೇಖರನೂ ಸಾಥಿಗಳ ಪಂಕ್ತಿಗೇ ಬರುತ್ತಿದ್ದಾನೆ. ಕೂಡಿಟ್ಟದ್ದ ಕುಡಿಕೆಯ ಹಣ ಕರಗಿತು. ಮನೆಯಲ್ಲಿದ್ದ ಕುರ್ಚಿ, ಬೆಂಚು, ಅಲ್ಮಿರಾಗಳನ್ನು ಸಾಲಗಾರರು ಹೊತ್ತುಕೊಂಡು ಹೋದರು."

"ಅವರ ಹೆಂಡತಿ ಮಕ್ಕಳ ಗತಿ."

"ಅಧೋಗತಿ !"

"ಶಿವಶಿವಾ—ಏನನ್ಯಾಯ—ಏನನ್ಯಾಯ !"

ಎಂದು ಮೂರ್ತಿ ಸ್ತಂಭೀಭೂತನಾದ.

"ಅನ್ಯಾಯ—ಅನ್ಯಾಯವೆಂದು ಉದ್ಗಾರವೆಳೆದು ತೆಪ್ಪಗೆ ಕುಳಿತರಾಗುವುದಿಲ್ಲ ಮೂರ್ತಿ."

"ಏನು ಮಾಡಬೇಕಪ್ಪಾ."

"ಈ ಪಾರ್ಟಿಯ ವಿರುದ್ಧ ಹೋರಾಡಲೇ ಬೇಕು."

"ನಿಜ—ಹೋರಾಟಕ್ಕೆ ನಾನು ನಿಂತರೆ ನನ್ನ ಸಾಹಿತ್ಯಸೃಷ್ಟಿ ಕೊನೆಗಾಣುತ್ತದೆ. ಸಾಹಿತಿ ದಂತದರಮನೆಯಲ್ಲಿ ವಾಸಮಾಡಬಾರದು—ನಿಜ; ಆದರೆ ಅವನ ಕೃತಿನಿರ್ಮಾಣಕ್ಕೆ ಅಗತ್ಯವಾದ ಮನೋಧರ್ಮ ಹೋರಾಟದಲ್ಲಿ ದೊರೆಯುವುದೇ ?"

"ಇದು ನಮ್ಮ ನಾಡಿನ ದೊಡ್ಡ ಸಮಸ್ಯೆಯಾಗಿದೆ. ಪರಿಹಾರ ಹೇಗೆಂಬುದೇ ನನಗಿನ್ನೂ ಬಗೆಹರಿದಿಲ್ಲ. ಆರ್ಥಿಕಾನುಕೂಲ ಪಡೆದಿರುವ ಸಾಹಿತಿಗಳಿಗೆ ಇತ್ತ ಲಕ್ಷ್ಯವಿಲ್ಲ. ಎಲ್ಲಿ ತಮ್ಮ ಸರ್ಕಾರಿ ನೌಕರಿ, ಕಾಲೇಜ್ ಉಪಾಧ್ಯಾಯವೃತ್ತಿಗೆ ಧಕ್ಕೆ ಬರುವುದೋ ಎಂದವರ ಚಿಂತೆ. ತಮ್ಮ ದೌರ್ಬಲ್ಯ ಮುಚ್ಚಿಕೊಳ್ಳುವುದಕ್ಕೆ 'ಸಾಹಿತ್ಯಕ್ಕೂ ರಾಜಕಾರಣಕ್ಕೂ ಸಂಬಂಧವಿಲ್ಲ—ಸಾಹಿತಿ ರಸಿಕನೇ ವಿನಾ ಪ್ರಚಾರಕನಲ್ಲ—ಸಾಹಿತ್ಯ ಪರಿಶುದ್ಧವಾಗಿರಬೇಕು' ಮೊದಲಾದ ಅಪಸಿದ್ಧಾಂತಗಳನ್ನು ಪ್ರಸಾರಮಾಡುತ್ತಾರೆ. ಸಾಹಿತ್ಯ, ಸಮಾಜ ಪರಿಜ್ಞಾನ (Social awareness) ಎರಡನ್ನೂ ಸಾಧಿಸಿರುವ ನಿನ್ನಂಥವರು ಉದರಂಭರಣಕ್ಕೆ ಹೋರಾಡಬೇಕಾಗಿದೆ–ಹುನಗುಂದನಂಥ ಪಿಶುಣರ ದುರ್ಭಾಷೆಯನ್ನು ಸಹಿಸಬೇಕಾಗಿದೆ. ಈ ಪರಿಸ್ಥಿತಿಯಲ್ಲಿ ನಮ್ಮ ಸಾಹಿತ್ಯ, ಸಮಾಜ, ರಾಷ್ಟ್ರ ಮುನ್ನಡೆಯುವುದು ಹೇಗೆ?"

"ನಮ್ಮ ಅಚಲನಂಬಿಕೆಯಿಂದ-ನಮ್ಮ ತ್ರಿಕರಣಪೂರ್ವಕ ಸೇವೆಯಿಂದ."

"ಈ ದೇಶಕ್ಕೆ ಯಾವತ್ತೂ ಮುಕ್ತಿಯಿಲ್ಲವೇನೋ ಎಂದು ನಾನು ಒಮ್ಮೊಮ್ಮೆ ನಿರಾಶನಾಗುತ್ತೇನೆ."

"'ನ್ಯಾಯಮಾತ್ಮಾ ಬಲಹೀನೇನ ಲಭ್ಯಃ'–ಉಪನಿಷತ್ತುಗಳಲ್ಲಿ ನಂಬಿಕೆ ಹೋಯಿತೇ ?"

"ಇಲ್ಲ—ಹೋಗಿಲ್ಲ-ಹೋಗಬಾರದು"

ಎಂದು ಗುಂಡಣ್ಣ ತನಗೇ ತಾನೇ ಮಾತನಾಡಿಕೊಳ್ಳುವಂತೆ ನುಡಿದ.

೧೧

ಬೆಂಗಳೂರಿಗೆ ಹಿಂದಿರುಗಿದ ಹುನಗುಂದ ತೆಪ್ಪಗೆ ಕೂಡಲಿಲ್ಲ. 'ಕುಸುಮಕುಂಜ' ಕಾಲಂ ನಡಸಿಕೊಂಡು ಹೋಗುವುದರ ಜತೆಗೆ 'ಜನಸಂದೇಶ–ಯುಗವಾಣಿ–ಶ್ರಮಜೀವಿ' ಪತ್ರಿಕೆಗಳಿಗೆ ಲೇಖನಗಳನ್ನೂ ಬರೆಯುತ್ತಿದ್ದ.

ಮೂರ್ತಿಯ 'ತಾಯಿದೇವಿ' ಕಾದಂಬರಿಯ ಮೇಲೆ ಹುನಗುಂದ, ಅವನ ಮಂಡಳಿಯವರ ಅವ್ಯಾಹತ ಆಕ್ರಮಣ ಆರಂಭವಾಯಿತು. ಗಾರ್ಕಿಯ 'ತಾಯಿ' (Mother) ಕಾದಂಬರಿಗೆ ಮೂರ್ತಿಯ 'ತಾಯಿದೇವಿ'ಯನ್ನು ಹೋಲಿಸುತ್ತಾ 'ಗಾರ್ಕಿ ಪುರೋಗಾಮಿ, ಮೂರ್ತಿ ಪ್ರತಿಗಾಮಿ. ಗಾರ್ಕಿಯ ತಾಯಿ ಮಾನವಿಯಾಗಿದ್ದಾಳೆ—ಮೂರ್ತಿಯವರ ತಾಯಿ ಸ್ವರ್ಗದಿಂದಿಳಿದು ಬಂದ ದೇವಿಯಾಗಿದ್ದಾಳೆ. ಮೂರ್ತಿಯವರು ದಿನದಿನಕ್ಕೆ ನಿತ್ಯಜೀವನದಿಂದ ದೂರವಾಗಿ ಅಧ್ಯಾತ್ಮದ ಗುಹೆ ಪ್ರವೇಶಿಸುತ್ತಿದ್ದಾರೆ. ಮೂರ್ತಿಯವರ ಕಲಾವಂತಿಕೆಯ ಅಪಗತಿಯನ್ನು ಕಾಣಲಿಚ್ಛಿಸುವವರು ಅವಶ್ಯಕವಾಗಿ ಅವರ 'ತಾಯಿದೇವಿ' ಓದಬೇಕು' ಎಂದು ಬರೆದ.

ಮರುವಾರವೇ ಸುತರಾಮಯ್ಯನ 'ಬಯಲು ಬಾಳು' ವಿಮರ್ಶಿಸುತ್ತಾ ಹುನಗುಂದ 'ಉದಯೋನ್ಮುಖ ಸಾಹಿತಿಗಳಾದ ಸುತರಾಮಯ್ಯನವರ ಮೊದಲನೆಯ ಕೃತಿ 'ಬಯಲು ಬಾಳ'ನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಅಲ್ಲಲ್ಲಿ ಇವರ ಮೇಲೆ ಅಮೆರಿಕಾದ ರೋಮಾಂಚಕಾರಿ ಸಾಹಿತ್ಯದ ಪ್ರಭಾವ ಮೂಡಿದ್ದರೂ ಸುತರಾಮಯ್ಯ ಸ್ವತಂತ್ರಕ್ಕಾಗಿ ವಿಚಾರ ಮಾಡಬಲ್ಲರೆಂಬುದೂ ವೇದ್ಯವಾಗುತ್ತದೆ. ಇವರು ಹಳ್ಳಿಗರಜೀವನ, ಕಷ್ಟಸುಖ ವರ್ಣಿಸುವಾಗ ಟರ್ಗಿನೀಫನ ಹಲವು ಸುಂದರ ಭಾಗಗಳ ನೆನಪಾಗುತ್ತದೆ. ಮೂರ್ತಿಯವರ ನೀರಸ ಕಾದಂಬರಿಯನ್ನು ಓದಿ ಬೇಸತ್ತಿದ್ದ ನಮಗೆ

ಸುತರಾಮಯ್ಯನವರ ಕಾದಂಬರಿ ಹಿತವನ್ನುಂಟುಮಾಡಿತು—ಸುತರಾಮಯ್ಯನವರು ಪ್ರತಿಗಾಮಿ ಸಾಹಿತಿಗಳಾದ ಮೂರ್ತಿಯವರ ಕೈಯಲ್ಲಿ ತಮ್ಮ ಗ್ರಂಥಕ್ಕೆ ಮುನ್ನುಡಿ ಏಕೆ ಬರೆಸಿದರೋ ನಾವು ಕಾಣೆವು. ಮುನ್ನುಡಿ ಅಸಂಬದ್ಧ ಪ್ರಲಾಪದ ಕಂತೆಯಾಗಿ ಸುತರಾಮಯ್ಯನವರ ಕೃತಿಗೆ ಕಳಂಕಪ್ರಾಯವಾಗಿದೆ' ಎಂದು ಅಭಿಪ್ರಾಯಪಟ್ಟ.

ಹುನಗುಂದನ ವಿಮರ್ಶೆ ವಿಶ್ವೇಶ್ವರಯ್ಯ, ಗುಂಡಣ್ಣನಿಗೆ ಜಿಗುಪ್ಸೆಯನ್ನುಂಟುಮಾಡಿದಂತೆ ಪುಟ್ಟಣ್ಣನಿಗೂ ಅಸಹ್ಯವಾಯಿತು. 'ಸುಖಜಗತ್ತಿ'ನಲ್ಲಿ ಸೇರಿದ ಪಾರ್ಟಿಯಲ್ಲಿ ಪುಟ್ಟಣ್ಣ ತನ್ನ ಅಭಿಪ್ರಾಯ ತಿಳಿಸಲು ಹಿಂಜರಿಯಲಿಲ್ಲ. ಹುನಗುಂದನನ್ನೇ ನೇರವಾಗಿ

"ಎರಡು ಪುಸ್ತಕಗಳನ್ನೂ ನೀನು ನಿಜವಾಗಿ ಓದಿರುವೆಯಾ ಹುನಗುಂದ" ಎಂದು ಕೇಳಿದ.

"ಓದದೆ ವಿಮರ್ಶೆ ಬರೆಯುತ್ತೇನೆಯೇ ಪುಟ್ಟಣ್ಣನವರೇ."

"ಮೂರ್ತಿಯವರ ಕಾದಂಬರಿ ತೆಗಳುವುದು ಒಂದು ಅಪರಾಧವಾದರೆ, ಸುತರಾಮಯ್ಯನ ಕಾದಂಬರಿಯನ್ನು ಅದಕ್ಕೆ ಹೋಲಿಸಿ, ಉತ್ತಮವೆಂದು ಸಾರುವುದು ಹೆಚ್ಚಿನ ಅಪರಾಧ. ಹೊಟ್ಟೆಯ ಪಾಡಿಗಾಗಿ ನಾನೂ ಹಲವು ಅನ್ಯಾಯಗಳನ್ನು ಮಾಡಿದ್ದೇನೆ—ಆದರೆ ಇಷ್ಟು ದೂರ ನಾನು ಹೋಗಲಿಲ್ಲ."

ಮಧ್ಯದ ಅಮಲಿನಲ್ಲಿ ಮೈಮರೆತಿದ್ದ ರಾಘವಯ್ಯ ಮುಖ ಕೆಂಪಗೆ ಮಾಡಿಕೊಂಡು

"ಬರಬರುತ್ತಾ ಪುಟ್ಟಣ ಮೂರ್ತಿಯ ಬಾಸ್ವೆಲ್ (Boswell) ಆಗುತ್ತಿದ್ದಾನೆ" ಎಂದ.

"ಕೇಳಿ ಸಾರ್. ಮನೆಯಲ್ಲಿ ನನ್ನ ಚಿಕ್ಕತಮ್ಮನಿಗೆ ಮೈಯಲ್ಲಿ ಆರೋಗ್ಯವಿಲ್ಲ. ರಾತ್ರಿಯೆಲ್ಲಾ ಎದ್ದೆದ್ದು ಚೀರುತ್ತಾನೆ. ನನ್ನ ತಾಯಿಯವರಿಗೆ ಜಾಗರಣೆಯಾಗುತ್ತಿದೆ. ಮೊನ್ನೆ ಅವರು ಯಾವದಾದರೂ ಕಥೆ ಪುಸ್ತಕಕೊಡು ಪುಟ್ಟಣ್ಣ–ಹೇಗೂ ನಿದ್ದೆಗೆಡುವುದಾಗುತ್ತಿದೆ. ಪುಸ್ತಕಗಳನ್ನಾದರೂ ಓದುತ್ತೇನೆ' ಎಂದರು. ನಾನು 'ತಾಯಿದೇವಿ'–'ಬಯಲು ಬಾಳು' ಎರಡು ಪುಸ್ತಕಗಳನ್ನೂ ಕೊಟ್ಟೆ. 'ಬಯಲು ಬಾಳು' ಮೊದಲು ಕೈಗೆತ್ತಿಕೊಂಡರಂತೆ. ನಲವತ್ತು ಪುಟ ಓದಿ ಬೇಸತ್ತು ಅದನ್ನು ಕೆಳಗಿಟ್ಟು 'ತಾಯಿದೇವಿ' ತೆಗೆದುಕೊಂಡರಂತೆ.

ಬೆಳಗಾಗುವ ವೇಳೆಗೆ ಪುಸ್ತಕ ಓದಿಮುಗಿಸಿದ್ದರು. 'ಹೇಗಿತ್ತಮ್ಮ' ಎಂದು ಕೇಳಿದೆ. 'ಬಯಲು ಬಾಳು' ಓದಲು ಸಾಧ್ಯವಿಲ್ಲಪ್ಪಾ-ಬಲುಬೇಸರವಾಗುತ್ತದೆ. 'ತಾಯಿದೇವಿ' ಮಾತ್ರ ಅಪರೂಪವಾದ ಪುಸ್ತಕ. ಬರೆದ ಪುಣ್ಯಾತ್ಮನ ಹೊಟ್ಟೆ ತಣ್ಣಗಿರಲಿ. ತಾಯಿಯನ್ನು ತಾಯಂದಿರಿಗಿಂತಲೂ ಚೆನ್ನಾಗಿ ಅರ್ಥಮಾಡಿ ಕೊಂಡಿದ್ದಾರೆ. ಅವರನ್ನೊಮ್ಮೆ ನಮ್ಮ ಮನೆಗೆ ಕರೆದುಕೊಂಡು ಬಾ ಪುಟ್ಟಾ' ಎಂದರು. 'ಜನಸಂದೇಶ'ದ ಸಂಪಾದಕರಾಗಿದ್ದಾಗ ಮೂರ್ತಿಯವರು ಕೆಲವು ಸಾರಿ ನಮ್ಮ ಮನೆಗೆ ಬಂದಿದ್ದರು. ಅವರೇ ಇವರು ಎಂದು ನಮ್ಮ ತಾಯಿ ಯವರಿಗೆ ಗೊತ್ತಿಲ್ಲ; ಮೂರ್ತಿಯವರ ಸ್ಥಾನಭ್ರಷ್ಟತ್ವಕ್ಕೆ ನಾನು ಕಾರಣ ನಾದೆನೆಂಬುದೂ ಗೊತ್ತಿಲ್ಲ."

ಪುಟ್ಟಣ್ಣನ ನಿರೂಪಣೆ ಕೇಳಿ ಚಕಿತನಾದ ವಶಿಷ್ಠ

"ನಿನಗೇನು ಬಂತೋ ಕೇಡು ಪುಟ್ಟಣ್ಣ—ಇದ್ದಕ್ಕಿದ್ದಂತೆ ಮೂರ್ತಿ ಡಂಗುರ ಸಾರುವುದಕ್ಕೆ ಆರಂಭಿಸಿದ್ದೀ."

"ಮೂರ್ತಿಯವರ 'ತಾಯಿದೇವಿ' ನನ್ನ ಮೇಲೆ ವಿಶೇಷ ಪರಿಣಾಮ ವನ್ನುಂಟುಮಾಡಿದೆ."

"ಬಿಡುಬಿಡೋ-ಹುನಗುಂದ ಮನಸ್ಸುಮಾಡಿದರೆ ಅಂಥ ಹತ್ತು ಕಾದಂಬರಿ ಎಳೆದುಹಾಕಿ ಬಿಡುತ್ತಾನೆ."

"ಎಳೆದು ಹಾಕಬಹುದು"

ಎಂದನ್ನುತ್ತಾ ಪುಟ್ಟಣ್ಣ ತಿರಸ್ಕಾರಪೂರ್ವಕವಾಗಿ ನಕ್ಕ.

ಪರಿಸ್ಥಿತಿ ಹದಗೆಟ್ಟು ತಮ್ಮ ಮೈತ್ರಿಗೆ ಭಂಗ ತರುತ್ತಿದ್ದುದನ್ನು ಗ್ರಹಿಸಿದ ರಾಘವಯ್ಯ

"ಸಂತೋಷವಾಗಿರುವ ಹೊತ್ತಿನಲ್ಲಿ ಇಲ್ಲದ ಮಾತು ತೆಗೆದು ಮನಸ್ಸು ಹುಳಿ ಮಾಡಿಕೊಳ್ಳುತ್ತೀರಪ್ಪಾ. ಕೈಮೇಲೆ ಕೆಲಸವಿರುವಾಗ ಸಾಹಿತ್ಯವಿಮರ್ಶೆಗೆ ಕೂಡುವುದು ವಿಹಿತವೇ ?"

" 'ಜನಪದ ಸಾಹಿತ್ಯ'ದ ಭವಿಷ್ಯ ನಿರ್ಧರಿಸಬೇಕು ಸರ್"

ಎಂದು ಹುನಗುಂದ ಸೂಚಿಸಿದ.

"ಈಗ ನಾವು ಪ್ರಕಟಿಸಿದ 'ರಕ್ತಧಾರೆ'—'ಮೋಹನಾಂಗಿ' ಎರಡೂ ಶುದ್ಧ ಫ್ಲಾಪ್ (flop) ಆಯಿತಲ್ಲ!"

"ಇದು ಕಾದಂಬರಿಯ ಯುಗ ವಶಿಷ್ಠರೇ—ಸಣ್ಣಕಥಾಸಂಗ್ರಹಗಳು ಮಾರಾಟವಾಗುವುದು ಕಷ್ಟ."

"ಹುನಗುಂದನ 'ಪೇಜಿನಪೇದೆ' ಕಾದಂಬರಿ ಕೈಯಲ್ಲಿದೆಯಲ್ಲ—ಅದನ್ನು ಪ್ರಕಟಿಸು."

"ನನ್ನ ಕಾದಂಬರಿ ಹೊರಬಿದ್ದ ಕೂಡಲೆ ಮನೋರಮಾದೇವಿಯವರ ಹೊಸಕಾದಂಬರಿ 'ಕಣ್ಣಲ್ಲಿ ಕಣ್ಣು' ಪ್ರಕಟಿಸಬಹುದು ಸಾರ್."

"ಚೆನ್ನಾಗಿದೆಯೇನಯ್ಯಾ ?"

"ಸೊಗಸಾಗಿದೆ. ಆಸ್ಪತ್ರೆಯ ಒಬ್ಬ ನರ್ಸಿನ ಜೀವನವನ್ನು ಬಹಳ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ."

"ಅವರಿಗೆ ಅಲ್ಪಪ್ರಾಣ, ಮಹಾಪ್ರಾಣ ಜ್ಞಾನವೇ ಇಲ್ಲವಲ್ಲಾ ಹುನಗುಂದ"

ಎಂದು ಪುಟ್ಟಣ್ಣ ಅಪೇಕ್ಷಿಸಿದ.

"ಹೊಸ ಲೇಖಕರು ತಪ್ಪುಮಾಡುವುದು ಸ್ವಾಭಾವಿಕ ಪುಟ್ಟಣ್ಣನವರೇ. ಹಸ್ತಪ್ರತಿ ನಾನೇ ಓದಿನೋಡಿ ತಿದ್ದಿದ್ದೇನೆ."

"ಪ್ರಕಟನೆಯ ಹೊರೆ ನನ್ನ ಮೇಲೆ ಹಾಕಿದ್ದೀರಿ. 'ರಕ್ತಧಾರೆ—ಮೋಹನಾಂಗಿ' ಯಿಂದ ಬರುವ ಹಣವನ್ನೇ ಮುಂದಿನ ಪ್ರಕಟನೆಗಳಿಗೆ ಬಳಸಿಕೊಳ್ಳುವುದೆಂದು ನಾವು ನಿರ್ಧರಿಸಿದ್ದೆವು. ಅವುಗಳಿಗೆ ಹಾಕಿದ್ದ ಬಂಡವಾಳ ಮುಳುಗಿ ಹೋಯಿತು. ಈಗ ನಾವು 'ಪೇಜಿನಪೇದೆ' — 'ಕಣ್ಣಲ್ಲಿ ಕಣ್ಣು' ಪ್ರಕಟಿಸಬೇಕಾದರೆ ಮತ್ತೆ ಹಣ ಹೊಂದಿಸಿಕೊಳ್ಳಬೇಕು. 'ಹುನಗುಂದ ಸಹಾಯನಿಧಿ'ಯಿಂದ ರಾಘು ಹಣ ಕೊಡುವುದಾದರೆ ಮುಂದೆ ಪ್ರಕಟಿಸಬಹುದು."

"ನಿಧಿಯಲ್ಲಿ ಎಷ್ಟು ಹಣ ಉಳಿದಿದೆ"

ಎಂದು ಪುಟ್ಟಣ್ಣ ಕೇಳಿದ.

"ಒಟ್ಟು ಎರಡುಸಾವಿರ ರೂಪಾಯಿ ಸಂಗ್ರಹವಾಯಿತು. ಈವರೆಗೆ ಐದುನೂರು ರೂಪಾಯಿ ಚಿಲ್ಲರೆ ಖರ್ಚಿಗೆ ವಿನಿಯೋಗವಾಯಿತು. ನನ್ನಲ್ಲಿ ಹಾಲಿ ಒಂದೂವರೆ ಸಾವಿರ ರೂಪಾಯಿಯಿದೆ."

"ಅದನ್ನೇ ಬಂಡವಾಳ ಮಾಡಿಕೊಂಡು ನಾವು 'ಜನಪದ ಸಾಹಿತ್ಯ' ಆರಂಭಿಸಬಹುದು."

ಎಂದು ಪುಟ್ಟಣ್ಣ ಸೂಚಿಸಿದ.

"ಉಳಿದಿರುವ ಹಣವನ್ನೆಲ್ಲಾ ನಾವು ಉಪಯೋಗಿಸಿಕೊಂಡರೆ ಹುನಗುಂದನ ಗತಿ? ಅವನಿಗೆ ರೂಮಾಗಬೇಕು, ಬಟ್ಟೆಬರೆಯಾಗಬೇಕು, ಊಟ ತಿಂಡೀಗೆ ಹಣಬೇಕು,"

"ಐದುನೂರು ರೂಪಾಯಿ ಅದಕ್ಕಾಗಿ ಇಟ್ಟುಬಿಡು ವಶಿಷ್ಠ—ಉಳಿದ ಹಣ 'ಜನಪದ ಸಾಹಿತ್ಯ'ಕ್ಕೆ ಉಪಯೋಗಿಸಿಕೋ"

ಎಂದು ರಾಘವಯ್ಯ ಸಲಹೆಯಿತ್ತ.

"'ಜನಪದ ಸಾಹಿತ್ಯ'ಕ್ಕೆ ಒಂದು ಕಛೇರಿಯೂ ಬೇಕು. ಒಂದು ಮನೆಯನ್ನೇ ಗೊತ್ತು ಮಾಡೋಣ. ಹುನಗುಂದನ ವಾಸಕ್ಕೂ ಆಗುತ್ತದೆ, ನಮ್ಮ ಕಛೇರಿಗೂ ಆಗುತ್ತದೆ. ನಮ್ಮ ಕೈಯಲ್ಲಿರುವ ಒಂದು ಸಾವಿರ ರೂಪಾಯಿಯಲ್ಲಿ ಹಾಗೂ ಹೀಗೂ ಒಂದು ಪ್ರಕಟನೆ ತರಬಹುದು. ಸದ್ಯ ಕಾಗದ ಕೊಂಡು, ಪ್ರಿಂಟರಿಗೆ ಸಾಲಹೇಳಬಹುದು. ಮುಂದಕ್ಕೆ ಬಂಡವಾಳ ಹುಡುಕಲೇಬೇಕು."

"ಹೇಗೆ?—ಅದನ್ನೂ ನೀನೇ ಹೇಳಿಬಿಡು."

"ನಾನೂ, ನೀನೂ, ಪುಟ್ಟಣ್ಣ ತಲಾ ಐದು ನೂರು ರೂಪಾಯಿ ಬಂಡವಾಳ ಹಾಕಿದರೆ ಮುಂದಿನ ಕೆಲಸ ಸುಗಮವಾಗುತ್ತದೆ."

ಪುಟ್ಟಣ್ಣ ಯೋಚಿಸಲಾರಂಭಿಸಿದ. ವಶಿಷ್ಠ, ರಾಘವಯ್ಯ, ಹುನಗುಂದನನ್ನು ಹೆಚ್ಚುಹೆಚ್ಚಾಗಿ ಕಟ್ಟಿಕೊಳ್ಳಲೂ ಅವನಿಗೆ ಮನಸ್ಸಿಲ್ಲ. ಬಿಡಲೂ ಸಾಧ್ಯವಿಲ್ಲ. ಈ ಗುಂಪನ್ನು ಬಿಟ್ಟು ತಾನು ಸಿಡಿದು ನಿಂತರೆ ತನ್ನ ಭವಿಷ್ಯ ಅಭದ್ರವಾಗುವುದೆಂಬುದನ್ನು ಅವನು ಚೆನ್ನಾಗಿ ಬಲ್ಲ.

ಮೌನವೇಷ ಎಣಿಸುತ್ತಿದ್ದ ಪುಟ್ಟಣ್ಣನ ಕಡೆ ತಿರುಗಿ ವಶಿಷ್ಠ

"ಏನು ಯೋಚಿಸುತ್ತಿದ್ದೀ ಪುಟ್ಟಣ್ಣ" ಎಂದು ಕೇಳಿದ.

"ಏನೂ ಇಲ್ಲ—ನಾನು ಐದುನೂರು ಒಟ್ಟಿಗೆ ಕೊಡಲು ಸಾಧ್ಯವಿಲ್ಲ. ನೀವು ಒಪ್ಪುವುದಾದರೆ ತಿಂಗಳಿಗೆ ನೂರರಂತೆ ಕೊಟ್ಟುಕೊಂಡು ಬರುತ್ತೇನೆ."

"ಹಾಗೇ ಮಾಡು. ಅದಕ್ಕೇಕೆ ಇಷ್ಟು ಯೋಚನೆ. 'ಜನಪದ ಸಾಹಿತ್ಯ

ಸಮಿತಿ'ಗೆ ನಾನು ಖಜಾಂಚಿ, ಹುನಗುಂದ ಸಾಹಿತ್ಯ ಸಂಪಾದಕ, ರಾಘವಯ್ಯ ಅಧ್ಯಕ್ಷ-ಆಗಬಹುದೋ?"

"ಆ ವಿಷಯ ಎಂದೋ ಇತ್ಯರ್ಥವಾಗಿದೆಯಲ್ಲ."

"ವ್ಯವಸ್ಥೆ ಸರಿಯಾಗಿ ಮಾಡಬೇಕಪ್ಪಾ. ತಿಂಗಳಿಗೊಂದು ಪುಸ್ತಕ ನಾವು ಪ್ರಕಟಿಸದಿದ್ದರೆ ನಾವು ಪ್ರಕಟನೆ ಮಾಡಿಯೂ ಪ್ರಯೋಜನವಿಲ್ಲ."

"ತಿಂಗಳಿಗೊಂದು ಒಳ್ಳೆಯ ಪುಸ್ತಕ ಎಲ್ಲಿ ಸಿಕ್ಕುತ್ತದೆ ವಶಿಷ್ಠ"

"ಏನಯ್ಯಾ ಸಾಹಿತ್ಯ ಸಂಪಾದಕ, ಏನು ಹೇಳುವೆ?"

"ನೋಡಿ ಸಾರ್—ಈ ತಿಂಗಳು ನನ್ನ **'ಪೇಜಿನ ಪೇದೆ'**—ಮಾರ್ಚಿ ತಿಂಗಳಲ್ಲಿ ಮನೋರಮಾದೇವಿಯ **'ಕಣ್ಣಲ್ಲಿ ಕಣ್ಣು'**—ಎಪ್ರಿಲ್ ತಿಂಗಳಲ್ಲಿ ಧೃವರಾಯನ **'ಹರಕು ಚಪ್ಪರ'**—ಮೇ ತಿಂಗಳಲ್ಲಿ ಶಿವರಾಮಯ್ಯನವರ **'ಒಲಿದ ನಾರಿ'**,—ಜೂನ್ ತಿಂಗಳಲ್ಲಿ ಸುತರಾಮಯ್ಯನ **'ತಾರಾಪಥ'** ಜುಲೈ ತಿಂಗಳಲ್ಲಿ ಗಾರ್ಕಿಯ **'ಫೋಮಾ ಗಾರ್ಡಿಫ್'** ಕಾದಂಬರಿಯ ಅನುವಾದ, ನಾಗಪ್ಪನವರಿಂದ—ಆರು ತಿಂಗಳು ಪ್ರೊಗ್ರ್ಯಾಂ ಆಯಿತಲ್ಲಾ ಸಾರ್."

"ಧೃವರಾಯ ಯಾರು ಹುನಗುಂದ"

ಎಂದು ಪುಟ್ಟಣ್ಣ ಕೇಳಿದ.

"ಇಂಡಿಯನ್ ಕಾಫಿ ಬೋರ್ಡಿನಲ್ಲಿ ಕೆಲಸದಲ್ಲಿದ್ದಾರೆ ಸಾರ್. ಇಂಗ್ಲಿಷ್, ಕನ್ನಡ ಸಾಹಿತ್ಯ ಚೆನ್ನಾಗಿ ಓದಿಕೊಂಡಿದ್ದಾರೆ."

"ಸುತರಾಮಯ್ಯ ಮೂರ್ತಿಯವರ ಭಕ್ತ—ನಿನಗವನು ಕಾದಂಬರಿ ಕೊಡುತ್ತಾನೇನಯ್ಯಾ?"

ಹುನಗುಂದ ವಿಜಯೋತ್ಸಾಹದಿಂದ ನಕ್ಕು

"ನಾನೆಲ್ಲಾ ಸರಿಮಾಡಿದ್ದೇನೆ ಸಾರ್. ಅವನ 'ಬಯಲು ಬಾಳು' ಕಾದಂಬರಿಯ ಮೇಲೆ ನಾನು ಬರೆದ ವಿಮರ್ಶೆ ಪ್ರಕಟವಾದ ದಿನವೇ ಅವನೇ ನನ್ನನ್ನು ಹುಡುಕಿಕೊಂಡು ಬಂದ. 'ಜನಪದ ಸಾಹಿತ್ಯ'ದಲ್ಲಿ ಪ್ರಕಟಿಸುವುದಾದರೆ ತನ್ನೆಲ್ಲಾ ಕೃತಿಗಳನ್ನೂ ನಮಗೆ ಕೊಡುವುದಾಗಿ ಹೇಳಿದ."

"ನೀನು ಅಸಾಧ್ಯದವನು ಕಣಯ್ಯಾ ಹುನಗುಂದ"

ಎಂದು ರಾಘವಯ್ಯ ಮೆಚ್ಚುಗೆ ಸೂಚಿಸಿದ.

"ಇವತ್ತಿನ ಕಾರ್ಯಕ್ರಮ ಯಶಸ್ವಿಯಾಗಿ ನಡಸಿಕೊಟ್ಟುದಕ್ಕೆ ಸಮಿತಿಯ ಪರವಾಗಿ ಅಧ್ಯಕ್ಷರ ಆಭಾರಮನ್ನಿಸುತ್ತೇನೆ."

ಎನ್ನುತ್ತಾ ವಶಿಷ್ಠ 'ಸುಖಜಗತ್ತಿ'ನ ಬಿಲ್ಲನ್ನು ರಾಘವಯ್ಯನ ಕೈಯಲ್ಲಿಟ್ಟ.

"ಇದಕ್ಕೋ ನನ್ನ ಅಧ್ಯಕ್ಷನನ್ನಾಗಿ ನೀವು ಮಾಡಿರುವುದು."

"ಸದ್ಯಕ್ಕೆ ನೀನೇ ಖಜಾಂಚಿಯೂ ಆಗಿರುವೆಯಲ್ಲಾ—ಬಿಲ್ ಕೊಡು."

"ಖಜಾಂಚಿ ? !"

"ಹೌದು 'ಹುನಗುಂದ ಸಹಾಯ ಸಮಿತಿ' !"

"ಸಮಿತಿಯ ಹಣ ಸದ್ವಿನಿಯೋಗವಾಗುತ್ತಿದೆಯಲ್ಲಾ ಅದೇ ಒಂದು ಸಂತೋಷ"

ಎಂದು ಪುಟ್ಟಣ್ಣ ನಸುನಗುತ್ತಲೇ ನುಡಿದ.

## ೧೨

ಒಂದು ದಿನ ಹೊರಗೆ ಹೋಗಿ ಮನೆಯೊಳಗೆ ಬಂದು ಮೂರ್ತಿ ಜನ ಶೂನ್ಯವಾಗಿದ್ದ ಮನೆ ಕಂಡು ಆಶ್ಚರ್ಯಚಕಿತನಾದ. 'ಲಲಿತಾ ಎಲ್ಲಿಗೆ ಹೋದಳು—ಗೌರಮ್ಮನವರೆಲ್ಲಿ ?' ಎಂದುಕೊಂಡೇ ಅಡಿಗೆಯ ಮನೆಯ ಬಳಿಗೆ ಬಂದ. ಗೌರಮ್ಮನವರು ಅಡಿಗೆ ಮಾಡುತ್ತ ಕುಳಿತಿದ್ದರು. ಲಲಿತ ಶುಭ್ರಸ್ನಾತಳಾಗಿ ಪೂಜಾಮಗ್ನಳಾಗಿದ್ದಳು. ಮೂರ್ತಿ ದೇವರ ಮನೆಯ ಹೊರಬಾಗಿಲಿನಲ್ಲಿ ನಿಂತು ಲಲಿತ ಪಠಿಸುತ್ತಿದ್ದ ಮಂತ್ರಗಳನ್ನು ಕೇಳಿಸಿಕೊಂಡ.

"ಚಿದಗ್ನಿಕುಣ್ಡ ಸಂಭೂತಾಯೈನಮಃ
ರಾಗಸ್ವರೂಪ ಪಾಶಾಢ್ಯಾಯೈನಮಃ
ನಿಜಾರುಣ ಪ್ರಭಾಪೂರ ಮಜ್ಜದ್ಬ್ರಹ್ಮಾಣ್ಡ ಮಣ್ಡಲಾಯೈ ನಮಃ
ಚಮ್ಪಕಾಶೋಕ ಪುನ್ನಾಗ ಸೌಗನ್ಧಿಕಲಸತ್ಕಚಾಯೈನಮಃ
ಕುರುವಿನ್ದ ಮಣಿಶ್ರೇಣಿ ಕನಕತ್ಕೋಟೀರ ಮಣ್ಡಿತಾಯೈನಮಃ
ವಕ್ತ್ರಲಕ್ಷ್ಮೀ ಪರೀವಾಹ ಚಲನ್ಮೀನಾಭ ಲೋಚನಾಯೈನಮಃ
ನಿಜಸಲ್ಲಾಪ ಮಾಧುರ್ಯ ವಿನಿರ್ಭರ್ತ್ಸಿತ ಕಚ್ಛಪ್ಯೈನಮಃ
ಮನ್ದಸ್ಮಿತ ಪ್ರಭಾಪೂರ ಮಜ್ಜತ್ಕಾಮೇಶ ಮಾನಸಾಯೈನಮಃ
ಕಾಮೇಶ್ವರಪ್ರೇಮರತ್ನಮಣಿ ಪ್ರತಿಪಣಸ್ತನ್ಯೈನಮಃ
ನಾಭ್ಯಾಲವಾಲರೋಮಾಳಿ ಲತಾಫಲಕುಚದ್ವಯ್ಯೈನಮಃ
ಲಕ್ಷ್ಯರೋಮಲತಾಧಾರತಾ ಸಮುನ್ನೇಯ ಮಧ್ಯಮಾಯೈ ನಮಃ
ಮಹಾಲಾವಣ್ಯ ಶೇವಧಯೇನಮಃ

ಸರ್ವಾರುಣಾಯ್ಯೈನಮಃ
ಅನವದ್ಯಾಂಗ್ಯೈನಮಃ
ಶಿವಾಯ್ಯೈನಮಃ
ಸ್ವಾಧೀನವಲ್ಲಭಾಯ್ಯೈನಮಃ
ಮಹಾಪದ್ಮಾಟವೀ ಸಂಸ್ಥಾಯ್ಯೈನಮಃ
ಕುಳಾಮೃತೈಕ ರಸಿಕಾಯ್ಯೈನಮಃ
ಅಕುಳಾಯ್ಯೈನಮಃ
ಸಮಯಾನ್ತಸ್ಥಾಯ್ಯೈನಮಃ
ಭಕ್ತಿಗಮ್ಯಾಯ್ಯೈನಮಃ
ಭಯಾಪಹಾಯ್ಯೈನಮಃ
ಶಾರದಾಧ್ಯಾಯ್ಯೈನಮಃ
ಶಾನ್ತಿಮತ್ಯೈನಮಃ
ನಿರಾಧಾರಾಯ್ಯೈನಮಃ
ನಿರ್ಲೇಪಾಯ್ಯೈನಮಃ
ನಿರ್ಮಲಾಯ್ಯೈನಮಃ
ನಿತ್ಯಾಯ್ಯೈನಮಃ
ನಿರಾಕಾರಾಯ್ಯೈನಮಃ
ನಿಷ್ಕಳಾಯ್ಯೈನಮಃ
ನಿಷ್ಕಾಮಾಯ್ಯೈನಮಃ
ನಿತ್ಯಮುಕ್ತಾಯ್ಯೈನಮಃ
ನಿರೀಶ್ವರಾಯ್ಯೈನಮಃ
ನಿರ್ಭೇದಾಯ್ಯೈನಮಃ
ನಿಸ್ತುಲಾಯ್ಯೈನಮಃ
ಸರ್ವಜ್ಞಾಯ್ಯೈನಮಃ
ಸಾನ್ದ್ರಕರುಣಾಯ್ಯೈನಮಃ
ರಸ್ಯಾಯ್ಯೈನಮಃ
ಕಲಾವತ್ಯೈನಮಃ

ಕಲಾಲಾಪಾಯೈ ನಮಃ
ಕಾನ್ತಾಯೈ ನಮಃ
ಶೃಂಗಾರರಸ ಸಂಪೂರ್ಣಾಯೈ ನಮಃ
ವಿಶ್ವಸಾಕ್ಷಿಣ್ಯೈ ನಮಃ
ಅಚಿನ್ತ್ಯರೂಪಾಯೈ ನಮಃ
ಕಲಾತ್ಮಿಕಾಯೈ ನಮಃ
ಕಲಾನಾಥಾಯೈ ನಮಃ
ಕಾವ್ಯಾಲಾಪವಿನೋದಿನ್ಯೈ ನಮಃ
ಆತ್ಮನೇ ನಮಃ
ಸರ್ವವೇದಾನ್ತಸಂವೇದ್ಯಾಯೈ ನಮಃ
ಸತ್ಯಾನನ್ದಸ್ವರೂಪಿಣ್ಯೈ ನಮಃ
ಸರ್ವಾಧಾರಾಯೈ ನಮಃ
ಭಾಷಾರೂಪಾಯೈ ನಮಃ
ವೀರಾರಾಧ್ಯಾಯೈ ನಮಃ
ರಸಜ್ಞಾಯೈ ನಮಃ
ಲೀಲಾವಿನೋದಿನ್ಯೈ ನಮಃ
ಲಲಿತಾಮ್ಬಿಕಾಯೈ ನಮಃ" *

* * *

ಮೂರ್ತಿ ನಿಂತು ಕೇಳುತ್ತಲೇ ಇದ್ದ.

ಲಲಿತಮ್ಮನ ಪೂಜೆ ಅಬಾಧಿತವಾಗಿ ಸಾಗಿತ್ತು.

ಪೂಜೆ ಮುಗಿಯುತ್ತ ಬರಲು ಮೂರ್ತಿ ಮೆಲ್ಲಗೆ ತನ್ನ ಕೋಣೆಗೆ ಬಂದು ಕುಳಿತ.

ಹರಿದ್ರಾಕುಂಕುಮ ತೀರ್ಥಪ್ರಸಾದದ ತಟ್ಟೆ ಹೊತ್ತು ಬಂದ ಲಲಿತಮ್ಮ ಪತಿಯ ಹಣೆಗೆ ಕುಂಕುಮವಿಟ್ಟು, ಅವನಿಗೆ ತೀರ್ಥೋದಕವಿತ್ತಳು.

"ನೀನು ಪೂಜೆ ಆರಂಭಿಸಿದುದು ಇಂದೇ ನನಗೆ ಗೊತ್ತಾದುದು."

"ಇಂದೇ ನಾನು ಆರಂಭಿಸಿದುದು."

* ಶ್ರೀ ಲಲಿತಾಸಹಸ್ರನಾಮದಿಂದ ಆಯ್ದ ಐವತ್ತಾರು ಅನರ್ಘ್ಯರತ್ನಗಳಿವು.

"ಮಂತ್ರಪಠನ ಹೊರಗೇ ಹೊಂಚಿಕೇಳುತ್ತ ನಿಂತಿದ್ದೆ."

"ಉಚ್ಚಾರ ಸರಿಯಾಗಿತ್ತೇ ?"

"ಲಲಿತೆಯೇ ತನ್ನ ಸಹಸ್ರನಾಮ ಹೇಳುತ್ತಿದ್ದಳಲ್ಲಾ !"

"ಅಂಥ ಗೌರವಕ್ಕೆ ನಾನು ಅರ್ಹಳಲ್ಲ."

"ಪ್ರತಿ ಸ್ತ್ರೀಯೂ ಅರ್ಹಳು—ಪೂಜೆಯಿಂದ ಸ್ವಲ್ಪವಾದರೂ ಮನಃ ಶಾಂತಿ ದೊರಕಿತೇ ?"

"ಶಬ್ದಗಳಿಂದ ಅದನ್ನು ಹೇಗೆ ವರ್ಣಿಸಲಿ. ಮಂತ್ರೋಚ್ಚಾರಣೆಯಿಂದ ಹೊಸ ಜೀವ ಬಂದಂತಾಗಿದೆ."

"ವಿದ್ಯಾವತಿಯಾದ ನೀನು 'ಪೂರ್ವಕಾಲದ ಪುಟ್ಟಿ' ಆದೆಯೆಂದು ಜನ ಹಾಸ್ಯಮಾಡಿಕೊಳ್ಳುತ್ತಾರೆ."

"ಹಾಗಾದರೂ ಅವರ ಮನಸ್ಸು ಕ್ಷಣಕಾಲ ಪ್ರಫುಲ್ಲವಾಗಲಿ. ನನ್ನ ಪೂಜೆ ಯಿಂದ ನಿಮ್ಮ ಚಿತ್ತೈಕಾಗ್ರತೆಗೆ ಭಂಗ ಬರುತ್ತದೆಯೇ ?"

"ಚಿತ್ತೈಕಾಗ್ರತೆ ಹೆಚ್ಚುತ್ತದೆ. ಕಾವ್ಯಲಾಪವಿನೋದಿಯ ಅನುಗ್ರಹ ದಿಂದ ಇಂದು 'ಸೇವಾಮಂದಿರ' ಮುಗಿಸುತ್ತೇನೆ."

"ನಿಜವೇ ?"

"ನೋಡುತ್ತಿರು—ನಿನ್ನ ಪೂಜೆ ನಿಷ್ಫಲವಾಗುವುದಿಲ್ಲ."

"ಫಲಪ್ರಾಪ್ತಿಗಾಗಿ ನಾನು ಪೂಜೆ ಮಾಡುತ್ತಿಲ್ಲ."

"ನಿನಗೆ ಶಾಂತಿ ಬೇಕಿಲ್ಲವೇ ?"

"ಬೇಕು."

"ಅದೂ ಫಲವೇ ಅಲ್ಲವೇ ?"

"ಫಲವೆನ್ನುವುದನ್ನು ನಾನು ಕೀಳುಕಾಮನೆಗಳಿಗೆ ಅನ್ವಯಿಸುವುದು."

"ಅದು ತಾಮಸ—ಇದು ಸಾತ್ತ್ವಿಕ."

"'ಸೇವಾಮಂದಿರ'ದ ಹಸ್ತಪ್ರತಿಯನ್ನು ವಿಶ್ವೇಶ್ವರಯ್ಯನವರ ಕೈಗೆ ಎಂದು ಕೊಡುತ್ತೀರಿ ?"

"ನಾಡಿದ್ದು. ಮುನ್ನುಡಿ ಮುಗಿಸಿಯೇ ಕೊಡುತ್ತೇನೆ."

"ನಿಮ್ಮ ಮುನ್ನುಡಿಗಳ ಬಗ್ಗೆ ಬಹಳ ಆಕ್ಷೇಪ ಬಂದಿದೆ."

"ನನಗೆ ಸಂಬಂಧಿಸಿದ ಎಲ್ಲ ವಿಷಯವೂ ಆಕ್ಷೇಪಾರ್ಹವಾಗಿವೆ. ಹೀಗೆಂದು ಆಕ್ಷೇಪಿಸುವವರ ಅಳತೆಗೆ ನನ್ನ ಮನಸ್ಸನ್ನು ಕತ್ತರಿಸಿಕೊಳ್ಳಲೇ ?"

"ನಾಡಿದ್ದಿನಿಂದ ನೀವು ನಾಲ್ಕೈದು ದಿನ ನನ್ನ ಬಂದಿಗಳಾಗಿರಬೇಕು."

"ಸಾಕೇ ?"

"ಸದ್ಯ ಇಷ್ಟು ಸಾಧಿಸಲಿ."

"ನಾನು ಯಾವಜ್ಜೀವವೂ ನಿನ್ನ ಬಂದಿ."

"ನಿಜ—ಈಗ ದೈಹಿಕಬಂಧನ ವಿಧಿಸುತ್ತೇನೆ."

"ಕಾರಣವೇನೆಂದು ಅಪರಾಧಿ ಕೇಳಬಹುದೇ ?"

"ಬ್ರಹ್ಮಶ್ರೀ ಗುಂಡಾಭಟ್ಟರವರಿಗೆ ಅಪರಾಧಿಯಿತ್ತ ಪ್ರಮಾಣ ವಚನ ಕೂಡಲೆ ಪೂರೈಸಬೇಕೆಂದು ಕೋರ್ಟು ವಿಧಾಯಕಮಾಡಿದೆ."

"ಶೃಂಗೇರಿಗೆ ಪ್ರಯಾಣವೇ ?"

"ಹೌದು."

"ಎಂದು ?"

"ಇವತ್ತು ಶುಕ್ರವಾರ—ಸೋಮವಾರ ಹೊರಡೋಣ."

"ಸೋಮವಾರ ಹೊಸಕೃತಿ ಆರಂಭಿಸಬೇಕೆಂದಿದ್ದೇನೆ."

"ಈ ಸೋಮವಾರ ಸಾಧ್ಯವಿಲ್ಲ—ಬರುವ ಸೋಮವಾರ ಆರಂಭಿಸಿ."

"ದೇವಿ ತನ್ನ ನಿರ್ಧಾರ ಪುನರ್ವಿಮರ್ಶಿಸುವ ಸಂಭವವಿಲ್ಲವೇ ?"

"ಸಾಧ್ಯವಿಲ್ಲ—ದೇವಿ ಸ್ಥಿತಪ್ರಜ್ಞೆ."

"ತಥಾಸ್ತು"

ಎಂದು ಗಂಭೀರವಾಗಿ ನುಡಿದು ಗೊಳ್ಳನೆ ನಕ್ಕುಬಿಟ್ಟ. ಲಲಿತಮ್ಮನೂ ಆ ನಗೆಗಡಲಿನಲ್ಲಿ ಸಾಗಿದಳು.

"ದೊರೆ. ಈ ಆಟ ಎಷ್ಟು ಚೆನ್ನು."

"ಕಾಯಕಲ್ಪ ಚಿಕಿತ್ಸೆಯಿಂದ ವೃದ್ಧರು ತರುಣರಾಗುತ್ತಾರಂತೆ !—ಅಷ್ಟು ಕಷ್ಟಪಡಬೇಕಾದ ಅಗತ್ಯವೇ ಇಲ್ಲ. ಅವರು ಮಕ್ಕಳಾಟ ಕಲಿತರೆ ಸಾಕು—ಜರಾಮರಣವನ್ನು ಗೆದ್ದು ನಿಲ್ಲಬಹುದು. ನಿತ್ಯಾನಂದದಿಂದ ಚಿರಂಜೀವಿತ್ವ ಲಭಿಸುತ್ತದೆ."

"ನಿತ್ಯಾನಂದ ಲಭಿಸುವುದು....?"

"ಸೌಂದರ್ಯಧ್ಯಾನದಿಂದ—ಶುಭ್ರಸ್ನಾತಳಾಗಿ, ತಲೆತುಂಬ ಮಲ್ಲಿಗೆ ಮುಡಿದು, ಕುಂಕುಮರಾಗದಿಂದ ಲಲಾಟವನ್ನಲಂಕರಿಸಿ, ನವದುಕೂಲ ಧರಿಸಿ,

ನಗೆಯ ಚೆಲುವನ್ನು ಚಿಮ್ಮುತ್ತ ಬಂದಿರುವ ನೀನು ನನ್ನ ಕಣ್ಣಿಗೆ ಹೇಗೆ ಕಾಣು ತ್ತಿರುವೆ ಬಲ್ಲೆಯಾ?"

"ಹೇಗೆ ?"

"ಸಾಕ್ಷಾತ್ ದೇವಿಯಂತೆ! ನೀನು ಸಹಸ್ರನಾಮ ಪಠಿಸಿ ದೇವಿಯನ್ನು ಒಲಿಸಿಕೊಳ್ಳಬೇಕು—ಶ್ರಮಪಡದೆ ನಾನವಳನ್ನು ಒಲಿಸಿಕೊಂಡಿರುವೆನು."

"ಸ್ವಾಮಿ—ನಿಮ್ಮ ಹೃದಯ ಹಂಸದ ಗಮನವೇಗವೇ ನನಗರ್ಥ ವಾಗುವುದಿಲ್ಲ !"

"ಅಗತ್ಯವಿಲ್ಲ-ಅದು ಎಷ್ಟು ಹಾರಾಡಿದರೂ ಕೊನೆಗೆ ಅಮೃತಸಾಗರ ದಲ್ಲಿಯೇ ನೆಲಸಬೇಕು."

"ಅಮೃತಸಾಗರ...."

"ಹೌದು—ನಿನ್ನ ಒಲವು."

"ಆ ಒಲವಿನ ಒರತೆ ಬತ್ತದಂತೆ ದೇವಿ ಅನುಗ್ರಹಿಸಲಿ."

"ಆ ಅನುಗ್ರಹವೆಂದೋ ಆಗಿ ಹೋಗಿದೆ ಲಲಿತಾ"

ಎಂದು ಮೂರ್ತಿ ಅಭಿಮಾನಪೂರ್ವಕವಾಗಿ ನುಡಿದ.

## ೧೩

ಬಸ್ಸಿನಿಂದಿಳಿದು ಅತಿಥಿಗೃಹ ಪ್ರವೇಶಿಸಿದ ಮೂರ್ತಿ ಲಲಿತಮ್ಮನನ್ನು ಮಠದ ಪ್ರಧಾನ ಕಾರ್ಯದರ್ಶಿಗಳೇ ಸ್ವಾಗತಿಸಿ

"ತಮ್ಮ ಹೆಸರು" ಎಂದು ಕೇಳಿದರು.

ಲಲಿತಮ್ಮ ಥಟ್ಟನೆ

"ಶ್ರೀ ಮೂರ್ತಿಗಳು" ಎಂದರು.

ಕಾರ್ಯದರ್ಶಿಗಳು ಕಣ್ಣು ಅರಳಿಸಿ

"ಉಪನಿಷತ್ ಪ್ರವೇಶ–ತಾಯಿದೇವಿ ಕರ್ತೃಗಳೇ !"

ಮೂರ್ತಿ ಒಪ್ಪಿಕೊಳ್ಳದೆ ನಿರ್ವಾಹವಿರಲಿಲ್ಲ.

ಕಾರ್ಯದರ್ಶಿಗಳು ಅತಿಥಿಗೃಹದ ಮಹಡಿಯ ಮೇಲಿದ್ದ 'ಸ್ಪೆಷಲ್ ರೂಮು' ಗೆ ಮೂರ್ತಿ, ಲಲಿತಮ್ಮನನ್ನು ಕರೆದೊಯ್ದು

"ಈ ರೂಮು ನಿಮಗೆ ಅನುಕೂಲವಾಗಿರುತ್ತದೆ. ಇಲ್ಲಿ ಬಿಡಾರ ಮಾಡಿ. ನಿಮ್ಮ ಊಟ, ಉಪಚಾರ ಶಂಕರಶಾಸ್ತ್ರಿ ನೋಡಿಕೊಳ್ಳುತ್ತಾನೆ. ನೀವು ಬಂದುದು ಬಹಳ ಸಂತೋಷ. ಗುಂಡಾಭಟ್ಟರು ಹಲವು ಸಲ ನಿಮ್ಮ ವಿಷಯ ಪ್ರಸ್ತಾಪಿಸಿದ್ದಾರೆ."

"ತಮ್ಮ ಆದರೋಪಚಾರಕ್ಕೆ ನಾವು ಋಣಿಗಳಾಗಿದ್ದೇವೆ. ಗುಂಡಾಭಟ್ಟರ ಮನೆ ತೋರಿಸಿದರೆ ನಾವು ಅಲ್ಲಿಗೇ ಹೋಗಿ ತಂಗುತ್ತೇವೆ."

"ಭಟ್ಟರಿಗೆ ಮನೆಯೆಲ್ಲಿಂದ ಬಂತು ಸಾರ್. ಎರಡಂಕಣ ಗುಡಿಸಿಲಿನಲ್ಲಿ ವಾಸ ಮಾಡುತ್ತಿದ್ದಾರೆ—ಸ್ವಯಂಪಾಕ. ನಿಮಗಲ್ಲಿ ಬಹಳ ತೊಂದರೆ ಯಾಗುತ್ತದೆ. ಇಲ್ಲಿಯೇ ಇದ್ದುಕೊಂಡು ಭಟ್ಟರನ್ನು ನೋಡಿಕೊಂಡು ಬನ್ನಿ."

"ದಯೆಯಿಟ್ಟು ಕ್ಷಮಿಸಿ–ಭಟ್ಟರ ಜತೆಯಲ್ಲಿ ಇರುವುದಕ್ಕಾಗಿಯೇ ನಾವು ಶೃಂಗೇರಿಗೆ ಬಂದುದು."

ಎಂದು ಮೂರ್ತಿ ಖಂಡಿತವಾಗಿ ತಿಳಿಸಿದ.

ಕಾರ್ಯದರ್ಶಿಗಳು ಒಬ್ಬ ವಿದ್ಯಾರ್ಥಿಯ ಜತೆ ಮೂರ್ತಿ, ಲಲಿತಮ್ಮನನ್ನು ಕಳಿಸಿಕೊಟ್ಟರು.

ಮೂರ್ತಿ, ಲಲಿತಮ್ಮನನ್ನು ಕಂಡ ಭಟ್ಟರ ಆನಂದಕ್ಕೆ ಪಾರವೇ ಇರಲಿಲ್ಲ.

"ಬನ್ನಿ ಬನ್ನಿ—ಬಸ್ ಈಗ ಬಂತೆ ?" ಎಂದು ಕೇಳಿದರು.

ಲಲಿತಮ್ಮ ಭಟ್ಟರ ಪಾದಮುಟ್ಟಿ ನಮಸ್ಕರಿಸಿ ಕಾರ್ಯದರ್ಶಿಗಳಿಗೂ, ಮೂರ್ತಿಗೂ ಆದ ಸಂಭಾಷಣೆ ವಿವರಿಸಿದಳು.

"ಅವರು ಹೇಳಿದ್ದು ನ್ಯಾಯವಾಗಿತ್ತು. ಈ ಜೋಗೀಮಠದಲ್ಲಿ ನಿಮಗೆ ತುಂಬ ತೊಂದರೆಯಾಗುತ್ತದೆ."

"ನಾವು ಇಲ್ಲಿ ಇಳಿದುಕೊಂಡರೆ ತಮಗೆ ತೊಂದರೆಯಾಗುತ್ತದೆಯೋ ?"

"ನನಗೇನು ತೊಂದರೆ. ನಿಮ್ಮ ಊಟೋಪಚಾರಕ್ಕೆ ಅನಾನುಕೂಲವಾಗುತ್ತದಲ್ಲಾ ಎಂದು ಚಿಂತೆಯಾಯಿತು. ನನ್ನ ಶಿಷ್ಯ ಸೀತಾರಾಮನೂ ಹೊರಟುಹೋದ."

"ಚಿಂತೆಯಿಲ್ಲ—ನಾನು ಅಡಿಗೆ ಮಾಡುತ್ತೇನೆ—ನೀವೂ ಊಟ ಮಾಡುವುದಾದರೆ !"

"ಯಾಕಾಗಬಾರದು ತಾಯಿ—ಅನ್ನಪೂರ್ಣೇಶ್ವರಿ ಬಂದು ಅನ್ನ ಹಾಕುತ್ತೇನೆಂದರೆ ಬೇಡವೆನ್ನುವಷ್ಟು ಮೂರ್ಖನೇ ನಾನು. ಲಲಿತಮ್ಮ, ನನ್ನ ಮಾತು ಕೇಳುತ್ತೀಯಾ ತಾಯಿ."

"ಹೇಳಿ ಭಟ್ಟರೇ."

"ಈಗಲೇ ಒಂದು ಗಂಟೆಯಾಯಿತು. ನೀನು ಸ್ನಾನ ಮಾಡಿ, ಅಡಿಗೆ ಮಾಡಿ ಊಟ ಮುಗಿಸಬೇಕಾದರೆ ನಾಲ್ಕು ಗಂಟೆಯಾಗುತ್ತದೆ. ನೀನೂ, ನಿನ್ನ ಯಜಮಾನರೂ ಬಸ್‌ನಲ್ಲಿ ಪ್ರಯಾಣ ಮಾಡಿ ದಣಿದು ಬಂದಿದ್ದೀರಿ—ಈ ಹೊತ್ತು ಹೋಗಿ ಮಠದಲ್ಲಿ ಊಟ ಮಾಡಿಕೊಂಡು ಬನ್ನಿ—ರಾತ್ರಿಗೆ ಬೇಕಾದರೆ ನೀನೇ ಅಡಿಗೆ ಮಾಡುವೆಯಂತೆ !"

ಮೂರ್ತಿ, ಲಲಿತಮ್ಮ ಇಬ್ಬರೂ ಭಟ್ಟರ ಸಲಹೆ ಅಂಗೀಕರಿಸಿ, ಸ್ನಾನ ಮಾಡಿ ಊಟಕ್ಕೆ ಹೊರಟರು.

ದಾರಿಯಲ್ಲಿ ಸಿಕ್ಕಿದವರನ್ನು ಮೂರ್ತಿ

"ಇಲ್ಲಿ ಒಳ್ಳೆಯ ಊಟದ ಹೊಟೇಲ್ ಎಲ್ಲಿದೆ ?" ಎಂದು ಕೇಳಿದ.

"ಮಠಕ್ಕೆ ಹೋಗಿ ಊಟ ಮಾಡಬಹುದಲ್ಲಾ ಸ್ವಾಮಿ."

"ಹೊಟೇಲಿನಲ್ಲಿ ಊಟ ಮಾಡಲು ನಿಶ್ಚಯಿಸಿದ್ದೇವೆ. ದಯೆಯಿಟ್ಟು ಊಟದ ಹೋಟೆಲ್ ತೋರಿಸಿ."

ದಾರಿಗ ತೋರಿದ ಹೊಟೇಲೊಂದರಲ್ಲಿ ಮೂರ್ತಿ, ಲಲಿತಮ್ಮ ಊಟ ತೀರಿಸಿಕೊಂಡು ಭಟ್ಟರ 'ಪರ್ಣಕುಟಿ' ಗೆ ಹಿಂದಿರುಗಿದರು.

"ಊಟವಾಯಿತೇ ?" ಎಂದು ಭಟ್ಟರು ಕೇಳಿದರು.

"ಆಯಿತು. ಮಠಕ್ಕೆ ಹೋಗಲಿಲ್ಲ, ಹೊಟೇಲಿಗೆ ಹೋಗಿದ್ದೆವು— ಕ್ಷಮಿಸಬೇಕು."

"ಏಕೆ ಹಾಗೆ ಮಾಡಿದಿರಿ ?"

"ಮಠ, ಛತ್ರ, ದೇವಸ್ಥಾನದ ಊಟ ನನ್ನ ಮೈಗಂಟುವುದಿಲ್ಲ ಭಟ್ಟರೇ."

ಮೂರ್ತಿಯ ಪೂರ್ಣಾರ್ಥಗ್ರಹಿಸಿದ ಭಟ್ಟರು ನಸುನಕ್ಕು

"ಕೆಲವರ ಜಾಯಮಾನ ಹಾಗೆ—ಕೆಲವರಿಗೆ ದುಡಿದು ಸಂಪಾದಿಸಿದ ಅನ್ನ ಮೈಗಂಟುವುದಿಲ್ಲ—ಹೋಗಲಿ, ಊಟ ಚೆನ್ನಾಗಿತ್ತೇ ?"

"ತಕ್ಕಮಟ್ಟಿಗಿತ್ತು. ಪರವಾಯಿಲ್ಲ."

"ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳಿ"

"ನಮಗೆ ಆಯಾಸವಾಗಿಲ್ಲ. ಶ್ರೀ ಜಗದ್ಗುರುಗಳ ಸಂದರ್ಶನ ಯಾವಾಗ ಮಾಡಿಸುವಿರಿ"

ಎಂದು ಲಲಿತಮ್ಮ ಸವಿನಯದಿಂದ ಕೇಳಿದಳು.

"ಏಕೆ ತಾಯಿ—ಶ್ರೀಗುರುಗಳ ಸಂದರ್ಶನ ಪಡೆದು ಊರಿಗೆ ಹೋಗಲು ಆತುರವೇ ?"

"ಶ್ರೀಗುರುಗಳ ದರ್ಶನಪಡೆಯಲು ಆತುರರಾಗಿದ್ದೇವೆ."

"ಬಿಸಿಲು ಸ್ವಲ್ಪ ತಂಪಲಿ—ನರಸಿಂಹವನಕ್ಕೆ ಕರೆದುಕೊಂಡು ಹೋಗುತ್ತೇನೆ" ಎಂದರು.

ಶೃಂಗೇರಿಯ ಉರಿಬಿಸಿಲು ಸ್ವಲ್ಪ ಇಳಿಮುಖವಾಗುವವರೆಗೆ ಮೂರ್ತಿ, ಲಲಿತಮ್ಮ ಭಟ್ಟರ ಜತೆಯಲ್ಲಿ ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತರು.

"ನೀವು ಶೃಂಗೇರಿಗೆ ಬಂದದ್ದು ನಿಜವಾಗಿ ನನಗೆ ಆಶ್ಚರ್ಯವನ್ನುಂಟು ಮಾಡಿದೆ" ಎಂದರು ಭಟ್ಟರು.

"ಏಕೆ ?"

"ನಾನು ಶೃಂಗೇರಿಗೆ ಬನ್ನಿ ಎಂದಾಗ ನೀವು ಆಗಲಿ ಎಂದು ಒಪ್ಪಿಕೊಂಡದ್ದು ಕೇವಲ ಸೌಜನ್ಯದ ಮಾತು ಎಂದು ಭಾವಿಸಿಕೊಂಡೆ."

"ಶೃಂಗೇರಿಗೆ ಬರುವ ವಿಷಯ ನಿಜವಾಗಿ ನಾನು ಮರೆತಿದ್ದೆ-ನೆನಪು ಕೊಟ್ಟು ನನ್ನನ್ನಿಲ್ಲಿ ಕರೆದುಕೊಂಡು ಬಂದವಳು ಲಲಿತಾ."

"ತಾಯೀ, ನಾಯಕನಪಾಳ್ಯದಲ್ಲಿ ನಾನು ನಿನಗೊಂದು ಮಾತು ಹೇಳಿದ್ದೆ ಜ್ಞಾಪಕವಿದೆಯೇ ?"

"ನೀವು ಹೇಳಿದ ಯಾವ ಮಾತನ್ನೂ ಮರೆತಿಲ್ಲ ಭಟ್ಟರೇ."

"ಪಾರಾಯಣ ಆರಂಭಿಸಿದೆಯಾ ?"

"ಮೂರು ದಿವಸಗಳ ಕೆಳಗೆ ಆರಂಭಿಸಿದೆ."

"ಸಂತೋಷ—ಬಹಳ ಸಂತೋಷ."

"ನನಗೊಂದು ಸಂದೇಹ ಬಂದಿದೆ—ಕೇಳಲೇ ?"

"ಆದಷ್ಟು ಬೇಗ ಸಂದೇಹ ನಿವೃತ್ತಿಮಾಡಿಕೊಳ್ಳಬೇಕು."

"ಲಲಿತಾ ಸಹಸ್ರನಾಮ ಪಾರಾಯಣ ಕ್ರಮವಾಗಿ ಮಡಿಯಲ್ಲಿ ಮಾಡಬೇಕೆ ? ಅದಕ್ಕೆ ಯಾವದಾದರೂ ಪೂಜಾಕ್ರಮವಿದೆಯೇ ?"

"ಮಗುವಿಗೆ ಹಸಿವಾದಾಗ ತಾಯಿಯನ್ನು ಕ್ರಮಬದ್ಧವಾಗಿ ಕರೆಯುತ್ತದೆಯೇ ?—'ಅಮ್ಮ-ಅಮ್ಮ' ಎಂದು ಚೀರುತ್ತದೆ. ಮಗುವಿದ್ದಲ್ಲಿ ತಾಯಿ ಓಡಿಹೋಗಿ ಹಾಲೂಡಿಸುತ್ತಾಳೆ. ಲಲಿತಾಗೌರಿಯನ್ನು ನೀನು ಎಲ್ಲಿ ಹೇಗೆ ಕರೆದರೂ ಆಯಿತು—ಜಗದ್ಧಾತ್ರಿ ನಿನ್ನ ಬಳಿಗೆ ಓಡಿಬರುತ್ತಾಳಮ್ಮ. ವಿಧ್ಯುಕ್ತವಾಗಿ ಪೂಜೆ ಮಾಡುವ ಕ್ರಮವೂ ಒಂದಿದೆ-ವಾಮಮಾರ್ಗದಲ್ಲಿ ಮಾಡುವ ಪೂಜೆಯೂ ಇದೆ. ಗೃಹಸ್ಥರಿಗೆ ಈ ವಿಧಿ ನಿಷೇಧಗಳ ಅಗತ್ಯವಿಲ್ಲ. ಪೂಜೆಯ ಉದ್ದೇಶವೇನು ಮನಃಶುದ್ಧಿ ; ಮನಃಶುದ್ಧಿಯಾಗಬೇಕಾದರೆ ಹೊತ್ತು ಗೊತ್ತು ನೋಡಬೇಕೇಕೆ ? ಪೂಜೆಗೆ ಮುಖ್ಯವಾದುದು ಭಕ್ತಿ, ಶ್ರದ್ಧೆಯೇ ವಿನಾ ಕಟ್ಟು ಕಟ್ಟಳೆಯಲ್ಲ. ಬಸವಣ್ಣ ಹೇಳಿದಂತೆ 'ನಂಬಿ ಕರೆದಡೆ ಓ ಎನ್ನನೇ ಶಿವನು'"

"ನನ್ನ ಮನಸ್ಸಿನ ಭಯ ನಿವಾರಣೆಯಾಯಿತು ?"

"ಭಯವೇಕೆ ತಾಯಿ."

"ಲಲಿತಾ ಪೂಜೆಯಲ್ಲಿ ಹೆಚ್ಚು ಕಡಿಮೆಯಾದರೆ ಅಮಂಗಳವಾಗುತ್ತ ದೆಂದು ಯಾರೋ ಹೆದರಿಸಿದ್ದರು."

"ದೇವರನ್ನು ತಾಯಿ ಎಂದು ನಮ್ಮವರು ಚಿತ್ರಿಸಿದ ಉದ್ದೇಶವೇ ಈ ಹೆದರಿಕೆ ಹೋಗಲಾಡಿಸಬೇಕೆಂದು. ಅಜ್ಞಾನಪರವಶತೆಯಿಂದ ಭಕ್ತ ಒಂದು ತಪ್ಪುಮಾಡಿದರೆ, ಅದಕ್ಕೆ ಮುನಿಯುವ ದೇವರೂ ಅಜ್ಞಾನಿಯಲ್ಲವೇ? ತಪ್ಪು ಮಾಡದೆ ನಾವು ದೊಡ್ಡದನ್ನು ಸಾಧಿಸಲು ಸಾಧ್ಯವೇ? ನಮ್ಮ ತಪ್ಪು ತಿದ್ದುವುದು ಭಗವಂತನ ಕರ್ತವ್ಯ."

"ಇದೇ ಮಾತನ್ನು ಪರ್ಶಿಯನ್ ಕವಿ ಉಮರ್‌ಖಯ್ಯಂ ಹೇಳಿದ್ದಾನೆ ಭಟ್ಟರೇ"

ಎಂದು ಮೂರ್ತಿ ಸೂಚಿಸಿದ.

"ಆತ ಏನು ಹೇಳಿದ್ದಾನೆ ತಿಳಿಸು ಅಣ್ಣಾ."

"ಉಮರ್‌ಖಯ್ಯಂ ಹನ್ನೊಂದನೆಯ ಶತಮಾನದ ಪರ್ಶಿಯಾದಲ್ಲಿದ್ದ ಮಹಾಕವಿ. ಅವನು ನಾಲ್ಕು ಸಾಲಿನ ಪದ್ಯಗಳನ್ನು–ಅವುಗಳಿಗೆ ರುಬಾಯಿ ಯಾತ್ ಎಂದು ಹೆಸರು—ಹೆಚ್ಚಾಗಿ ಬರೆದಿದ್ದಾನೆ. ಜೀವ-ಆತ್ಮ ಇವರ ಸಂಬಂಧವನ್ನು ಹಲವು ಪದ್ಯಗಳಲ್ಲಿ ವಿವೇಚಿಸಿದ್ದಾನೆ. ವೇದಾಂತ ಘಂಟಾಘೋಷವಾಗಿ ಸಾರುವ ಸರ್ವಧರ್ಮಸಮನ್ವಯವನ್ನು ಉಮರ್ ಪ್ರತಿಪಾದಿಸುತ್ತಾನೆ. ಉಪನಿಷತ್ತುಗಳು ಬೋಧಿಸುವ 'ಮಧುವಿದ್ಯೆ'ಯನ್ನೇ ಈ ಮಹಾಕವಿ ಬೋಧಿಸುತ್ತಾನೆ. ಭಕ್ತ–ಭಗವಂತ ಇವರ ಪರಸ್ಪರ ಕರ್ತವ್ಯ ಕುರಿತು ಉಮರ್

"ಪಾಪಗೈಯದ ಮನುಜನಾರು ಜಗದಲ್ಲಿಹನು
ಪಾಪಗೈಯದೆ ನರನು ಬದುಕುವನು ಹೇಗೆ!
ನೀನೆನ್ನ ಪಾಪಕ್ಕೆ ಮುನಿದು ದಂಡಿಸಲಿನ್ನು
ನಿನಗೆಮಗೆ ಭೇದವೇನಿಹುದು ಹೇಳೆನಗೆ."

"ಪಾಪಿ ಈ ದಾಸ, ನಿನ್ನ ಅನಂತ ಕೃಪೆಯದೆಲ್ಲಿ ?
ನಿನ್ನ ತೇಜದಿ ಬೆಳಗು, ಎನ್ನ ಹೃದಯವನು
ಎನ್ನ ಸದ್ಗುಣಕೆ ಸಗ್ಗವನಿತ್ತೆಯಾದೊಡೆ
ಅದುವೆ ಏನಿವುಯ, ನಿನ್ನ ಕೃಪೆಯದೆಲ್ಲಿ ?"

"ಹಿರಿದೊ ನಿನ್ನ ಕರುಣೆ, ನನ್ನ ಪಾಪ ಹಿರಿದೋ ಅರಿಯೆ
ನಾ ಪಾಪಕರ್ಮದಲ್ಲಿ ಶತಮಾನ ಉಳಿದೆ
ಓ ದೇವ, ನೀ ಸೃಜಿಸಿದಂತೆ ಇಹೆ, ಬಾಳೆನ್ನ
ನಿನ್ನ ಕರುಣೆ ಕಾದುಕೊಂಡಿಹುದು."

ಆನಂದಾಮೃತವರ್ಷದಿಂದ ಭಟ್ಟರ ಹೃದಯ ತಣಿಯಿತು. ಅವರ ಮುಖಮಂಡಲ ಕಾಂತಿಯುಕ್ತವಾಯಿತು. ಹೃದಯದ ಹಿರಿಹಿಗ್ಗು ಅವರ ಮುಖದ ಮೇಲೆ ವಿರಾಜಿಸತೊಡಗಿತು. ಕಣ್ಣುಗಳಿಂದ ದ್ರವಿಸಿದ ಆನಂದ ಭಾಷ್ಪಗಳನ್ನು ಒರಸಿಕೊಳ್ಳುತ್ತಾ

"ದಿವ್ಯವಾದ ಮಾತು ಹೇಳಿದ್ದಾನಪ್ಪಾ ಮಹಾನುಭಾವ. 'ಬಾಳೆನ್ನ ನಿನ್ನ ಕರುಣೆ ಕಾದುಕೊಂಡಿಹುದು'—ಸತ್ಯ—ಸತ್ಯ—ನಮ್ಮ ಕಡೆ ಅವನು ನೋಡುವ ಸದವಕಾಶ ಕಳೆದುಕೊಳ್ಳದಂತೆ ನಾವು ಸದಾಕಾಲ ಅವನತ್ತಲೇ ನೋಡಬೇಕು—ಮೂರ್ತಿಗಳೇ, ನನಗೊಂದು ಉಪಕಾರ ಮಾಡುವಿರಾ ?"

"ನಿಮಗೆ ನಾನು ಉಪಕಾರಮಾಡುವುದೇ ?"

"ಹೌದು ಹೌದು—ನಿಜಕ್ಕೂ ನಾನು ಪರಮ ಅಜ್ಞಾನಿ-ಹೆಚ್ಚು ಓದಿದವನಲ್ಲ-ಅಲ್ಪಸ್ವಲ್ಪ ಸಂಸ್ಕೃತ ಕಲಿತೆ ಅಷ್ಟೆ-ಇಂಗ್ಲಿಷಿನ ಗಂಧವೇ ಇಲ್ಲ. ನಿಮಗೆ ಬಿಡುವಾದಾಗ ಈ ಉಮರನಂಥ ಮಹಾಪುರುಷರ ವಿಚಾರ ತಿಳಿಸುತ್ತ ಬನ್ನಿ. ಭಗವನ್ನಾಮ ಸಂಕೀರ್ತನವನ್ನು ಯಾವ ವಾದ್ಯಮಾಡಿದರೂ ಅದು ಪವಿತ್ರವಲ್ಲವೇ ?"

"ತಮ್ಮ ವಿನಯ ತನ್ನನ್ನು ಮೂಕನನ್ನಾಗಿ ಮಾಡಿದೆ ಭಟ್ಟರೇ."

"ನನ್ನಲ್ಲಿ ಏನಿದೆಯೆಂದು ಅಹಂಕಾರ ಪಡಬೇಕಣ್ಣಾ-ವಿದ್ಯೆಯೇ, ಅಧ್ಯಾತ್ಮವೇ, ತಪಃಶಕ್ತಿಯೇ ಏನೂ ಇಲ್ಲ. ಸಗಣಿಯಲ್ಲಿ ಬೆನಕನನ್ನು ಮಾಡಿ ಅದಕ್ಕೆ ನಾವು ಪ್ರಾಣಪ್ರತಿಷ್ಠೆಮಾಡಿ ಪೂಜಿಸುವಂತೆ, ಶ್ರೀ ಗುರುಗಳು ನನಗೆ ಶಕ್ತಿ ಪ್ರಸಾದವಿತ್ತು ತಮ್ಮ ಶಿಷ್ಯನಿಗೆ ಪಾಠ ಹೇಳಿಸಿದರು."

ಭಟ್ಟರ ಒಳಕೊರಗು ಮರುಕಳಿಸಿದುದನ್ನು ಕಂಡ ಮೂರ್ತಿ ಅವರ ಜತೆ ವಾದ ಬೆಳಸಲಿಲ್ಲ.

"ನಾನು ಸ್ನಾನಮಾಡಿ ಬರುತ್ತೇನೆ—ನೀವೂ ಸಿದ್ಧರಾಗಿ"

ಎಂದು ಭಟ್ಟರು ಹೇಳಿಹೋದರು.

ಲಲಿತ, ಮೂರ್ತಿ ಟವಲು, ಸೋಪ್‌ಬಾಕ್ಸ್ ತೆಗೆದುಕೊಂಡು ತುಂಗಾ ತೀರಕ್ಕೆ ತೆರಳಿದರು.

ಅವರು ಸ್ನಾನ ಮುಗಿಸಿಕೊಂಡು ಬರುವಲ್ಲಿ ಭಟ್ಟರು ಸಿದ್ಧವಾಗಿದ್ದರು.

ನರಸಿಂಹವನಕ್ಕೆ ಅತಿಥಿಗಳನ್ನು ಕರೆದುಕೊಂಡು ಬರುತ್ತಾ ಭಟ್ಟರು ದಾರಿಯಲ್ಲಿ ಕಂಡುಬಂದ ನೋಟಗಳನ್ನು ವಿವರಿಸಿದರು.

ನರಸಿಂಹವನದಲ್ಲಿದ್ದ ಗುರುಮಂದಿರದ ಬಳಿಗೆ ಬಂದಾಗ

"ಇದೇ ಗುರುಗಳಿರುವ ಪುಣ್ಯಸ್ಥಾನ" ಎಂದು

ಬಾಗಿಲಿನಲ್ಲಿ ನಿಂತಿದ್ದ ವಟುವನ್ನು ಹತ್ತಿರ ಕರೆದು

"ಶ್ರೀಗುರುಗಳ ಸಮಯ ಹೇಗಿದೆ"

ಎಂದು ಕೇಳಿದರು.

"ದಯಮಾಡಿಸಬಹುದು. ದೊಡ್ಡ ಗುರುಗಳು ಸಣ್ಣಗುರುಗಳ ಸಂಗಡ ಮಾತನಾಡುತ್ತಿದ್ದಾರೆ."

"ಒಳಗೆ ಹೋಗಿ ಕೇಳಿ ಬಾ ಮಗೂ"

ಎಂದು ಭಟ್ಟರು ನಿಂತರು. ವಟು ಕೂಡಲೆ ಬಂದು

"ಅಪ್ಪಣೆಯಾಗಿದೆ" ಎಂದ.

ಭಟ್ಟರೂ, ಮೂರ್ತಿ, ಲಲಿತಮ್ಮ ಗುರುದ್ವಯರಿಗೆ ಉದ್ದಂಡ ಪ್ರಣಾಮ ಮಾಡಿ ಕುಳಿತರು.

ಭಟ್ಟರು ಮೂರ್ತಿ ಲಲಿತಮ್ಮನ ಪರಿಚಯ ಮಾಡಿಕೊಟ್ಟು

"ಶಾರದಾ ಮಂದಿರಕ್ಕೆ ಬನ್ನಿರೆಂದು ನಾನೇ ಆಹ್ವಾನಿಸಿದ್ದೆ" ಎಂದರು.

"ಒಳ್ಳೆಯದನ್ನೇ ಮಾಡಿದಿರಿ. ತಾಯಿ ಸುಪ್ರಸನ್ನಳಾಗುತ್ತಾಳೆ"

ಎಂದು ಮೂರ್ತಿಯ ಕಡೆ ತಿರುಗಿ

"ಶೃಂಗೇರಿಗೆ ನೀವು ಬರುತ್ತಿರುವುದು ಇದೇ ಮೊದಲೇ?" ಎಂದು ಕೇಳಿದರು.

"ಹೌದು–ಮಹಾಸ್ವಾಮಿ."

"ಶೃಂಗೇರಿ ನೋಡಿದಿರಾ?"

"ಅಲ್ಪಸ್ವಲ್ಪ ನೋಡಿದೆವು. ನಾಳೆ ಎಲ್ಲಕಡೆಗೂ ಹೋಗಿ ಬರುತ್ತೇವೆ."

"ಒಂದೆರಡು ದಿನ ನಿಲ್ಲುವಿರಷ್ಟೆ."

"ನಿಲ್ಲಬೇಕೆಂದಿದ್ದೇವೆ."

"ನಮಗೆ ನಿಮ್ಮ ಸಾಹಿತ್ಯದ ವಿಶೇಷ ಪರಿಚಯವಿಲ್ಲ. 'ಉಪನಿಷತ್—ಪ್ರವೇಶ' ಮಾತ್ರ ನೋಡಿದ್ದೇವೆ."

"ಬಾಲಪ್ರಯತ್ನ. ಅದು ತಮ್ಮವರೆಗೂ ಬರಲು ಅರ್ಹವಾಗಿಲ್ಲ."

"ಹಾಗನ್ನಬೇಡಿ. ಪ್ರತಿಯೊಬ್ಬರ ನೋಟದಲ್ಲಿಯೂ ಒಂದು ವೈಶಿಷ್ಟ್ಯವಿದೆ-ತೀಕ್ಷ್ಣತೆಯಿದೆ. ಸತ್ಯವನ್ನು ಹಲವು ಕಡೆಗಳಿಂದ, ಹಲವು ಮುಖದಿಂದಲೇ ನೋಡಬೇಕು."

"ನಮ್ಮ ಜೀವನದಲ್ಲಿ ಅಶಾಂತಿ ಹೆಚ್ಚುತ್ತಿರುವುದರ ಕಾರಣವೇನು?"

"ಆಸೆ ಹೆಚ್ಚುತ್ತಿರುವುದರಿಂದ."

"ನೂತನ ನಾಗರಿಕತೆಯ ಪ್ರಭಾವದಿಂದ ನಮ್ಮ ಆವಶ್ಯಕತೆಗಳು ಹೆಚ್ಚಿಲ್ಲವೇ—ಅದೂ ಒಂದು ಕಾರಣವಾಗಿರಬಹುದು."

"ಹೊರಗಿನ ಕಾರಣಗಳೇನೇಇದ್ದರೂ ಒಳಗಿನ ಸಂಯಮ ರಕ್ಷಿಸಿಕೊಳ್ಳುವ ರಹಸ್ಯ ನಮ್ಮ ಕೈಬಿಟ್ಟು ಹೋಗುತ್ತಿದೆ. ಇದೇ ಅಶಾಂತಿಯ ಮೂಲ."

"ಸಂಯಮ ರಕ್ಷಿಸಿಕೊಳ್ಳುವುದು ಹೇಗೆ?"

"ಶುಭ್ರ ಜೀವನ ಹಾಗೂ ಧ್ಯಾನದಿಂದ."

"ಜೀವನದ ರೂಪ ಪ್ರತ್ಯಗ್ರೂಪ, ಧ್ಯಾನದ ರೂಪ ಪರಾಗ್ರೂಪ."

"ಇವುಗಳ ಸಮನ್ವಯವೇ ಸಾಧನೆ."

"ಸಾಧಕ ಲೋಕಾತೀತರಾಗಿರಬೇಕಲ್ಲವೇ?"

"ಲೋಕಾಯತನಾಗಿಯೂ ಇರಬಹುದು. ಶ್ರೀ ರಾಮಕೃಷ್ಣ ಪರಮಹಂಸರು ಗೃಹಸ್ಥರಾಗಿರಲಿಲ್ಲವೇ?"

"ಸಾಹಿತ್ಯವೂ ಸಾಧನೆಯ ಮಾರ್ಗವೆಂದು ಭಾವಿಸಬಹುದೇ?"

"ಅತ್ಯವಶ್ಯಕವಾಗಿ. ಭಗವತಿ ಕಲಾತ್ಮಿಕೆ, ಕಾವ್ಯಾಲಾಪವಿನೋದಿ, ಭಾಷಾರೂಪಿಣಿ, ರಸಜ್ಞೆಯಲ್ಲವೇ?"

"ಕಾವ್ಯಾನಂದ ಭಗವದ್ಭಕ್ತನನ್ನು ಅಡ್ಡದಾರಿಗೆಳೆಯುತ್ತದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ."

"ಕಾವ್ಯಾನಂದದ ಪರಿಸ್ಫುಟ ಪರಾಕಾಷ್ಠದೆಸೆಯೇ ! ಭಗವದಾನಂದ. ಚೈತನ್ಯ, ತುಕಾರಾಮ, ಹೆಳವನಕಟ್ಟೆ ಗಿರಿಯಮ್ಮ ಮೊದಲಾದ ಭಕ್ತಭಕ್ತೆಯರು ಕವಿಗಳಾಗಿರಲಿಲ್ಲವೇ? ಉಪನಿಷತ್ತಿನಮಹರ್ಷಿಗಳು ಮಹಾಕವಿಗಳಾಗಿರಲಿಲ್ಲವೆ?"

"ಕವಿ ಸತ್ಯವನ್ನರಸಬೇಕೋ, ಆನಂದವನ್ನು ಸಾಧಿಸಬೇಕೋ?"

"ಎರಡನ್ನೂ ಅವಿನಾಭಾವದಿಂದಲೇ ನೋಡಬೇಕು. ಸತ್ಯವಿವರ್ಜಿತ ವಾದುದು ಆನಂದವಾಗುವುದಿಲ್ಲ–ಕ್ಷಣಿಕ ಸುಖವಾಗಬಹುದು; ಆನಂದರಹಿತ ವಾದ ಸತ್ಯ ಕಠೋರವೂ ಅಗ್ರಾಹ್ಯವೂ ಆಗುತ್ತದೆ."

"ಸತ್ಯದ ಕಸೋಟಿ ಯಾವದು ?"

"ಚೈತನ್ಯ-ಉತ್ಕ್ರಾಂತಿ-ನಿತ್ಯತೆ. ಸತ್ಯ ನವನವೋನ್ಮೇಷಶಾಲಿನಿ— ಅನಂತ ಚೈತನ್ಯದಾಯಿ. ಸೂರ್ಯನ ಪ್ರಖರಕಿರಣ ಸರ್ವಜೀವರುಗಳ ಹಿತಕ್ಕೆ ನೆರವಾಗುವುದಿಲ್ಲವೇ-ಹಾಗೇ ಸತ್ಯ. ಅದರ ವ್ಯಾಪ್ತಿ ಅವ್ಯಾಹತ– ಅದರ ರೂಪ ಅನಂತ."

"ಸೌಂದರ್ಯವನ್ನು ಇದೇ ಮಾನದಂಡದಿಂದಲೇ ನೋಡಬಹುದೇ ?"

"ಇದೇ ಮಾನದಂಡದಿಂದಲೇ ನೋಡಬೇಕು."

ಶ್ರೀಗುರುಗಳ ದಿವ್ಯನುಡಿಗಳ ಅಂತರಾರ್ಥವನ್ನು ಮನನಮಾಡಿಕೊಳ್ಳುತ್ತ ಮೂರ್ತಿ ಕುಳಿತ. ಗುರುಸ್ವಾಮಿ ಲಲಿತಮ್ಮನ ಕಡೆ ತಿರುಗಿ

"ನೀವು ಏನಾದರೂ ಬರೆದಿರುವಿರಾ?" ಎಂದು ಕೇಳಿದರು.

"ಇಲ್ಲ-ಕಾವ್ಯಸೃಷ್ಟಿಯನ್ನು ಯಜಮಾನರಿಗೆ ಒಪ್ಪಿಸಿ ಬಿಟ್ಟಿದ್ದೇನೆ."

"ನಿಮ್ಮಿಬ್ಬರನ್ನೂ ನೋಡಿ ತುಂಬ ಸಂತೋಷವಾಯಿತು"

ಎಂದು ಶ್ರೀಶ್ರೀಗಳವರು ಮೇಲಕ್ಕೆದ್ದರು.

ಭಟ್ಟರು, ಮೂರ್ತಿ, ಲಲಿತಮ್ಮ ಗುರುದ್ವಯರಿಗೆ ಮತ್ತೊಮ್ಮೆ ಅಭಿವಂದಿಸಿ ಹೊರಟರು.

ಮೂರ್ತಿ ಮೌನವ್ರತ ತಾಳಿಬಿಟ್ಟ.

ಲಲಿತಮ್ಮ ಒಮ್ಮೆ ಪರಿಹಾಸ್ಯಕ್ಕೆ 'ಶ್ರೀಗುರುಗಳಿಗೆ ನಾಲಗೆ ಒಪ್ಪಿಸಿದಿರಾ' ಎಂದಳು.

ಮೂರ್ತಿ ಮಾರುತ್ತರ ಕೊಡಲಿಲ್ಲ.

ಭಟ್ಟರು ಲಲಿತಮ್ಮನಿಗೆ ಮೆಲ್ಲನೆ

"ತಾಯೀ, ಸ್ವಲ್ಪಹೊತ್ತು ಅವರನ್ನು ಮಾತನಾಡಿಸಬೇಡ. ನಿನ್ನ ಪತಿಯ ಹೃದಯಾಂತರಾಳದಲ್ಲಿ ಮಹಾಯುದ್ಧವಾಗುತ್ತಿದೆ" ಎಂದರು.

ರಾತ್ರಿ ಶಾರದಾಪೂಜೆ ಮುಗಿಸಿಕೊಂಡು ಎಲ್ಲರೂ ಮನೆಗೆ ಹಿಂದಿರುಗಿದ ಮೇಲೆ ಭಟ್ಟರು

"ತಾಯೀ, ನಿಮ್ಮ ಊಟದ ಯೋಚನೆಯನ್ನೇ ನಾನು ಮರೆತೆನಲ್ಲಾ-ಎಂಥಾ ಅಭ್ಯೇತ್ರ ನಾನು."

"ಅವರಿಗೂ ಹಸಿವಿಲ್ಲವಂತೆ–ನನಗೂ ಹಸಿವಿಲ್ಲ ಭಟ್ಟರೇ—ಬೆಳಿಗ್ಗೆ ನಾವು ತಡವಾಗಿ ಊಟಮಾಡಿದುದೇ ಕಾರಣವಾಗಿರಬಹುದು."

"ಉಂಟೇ–ಉಂಟೇ?"

ಎನ್ನುತ್ತಾ ಭಟ್ಟರು ಎಲ್ಲಿಗೋ ಹೋಗಿ ಬಂದು ಚಿಪ್ಪು ಬಾಳೆಯಹಣ್ಣು ತಂಬಿಗೆಯ ತುಂಬ ಹಾಲು ತಂದು

"ಅಮ್ಮ, ನೀನೂ, ನಿನ್ನ ಯಜಮಾನರೂ ತೆಗೆದುಕೊಳ್ಳಿ" ಎಂದರು.

"ಇಷ್ಟು ಹೊತ್ತಿನಲ್ಲಿ ನೀವೇಕೆ ಹೋಗಿಬಂದಿರಿ ಸ್ವಾಮಿ. ನಿಜವಾಗಿಯೂ ನಮಗೆ ಹಸಿವಿರಲಿಲ್ಲ" ಎಂದು ಮೂರ್ತಿ ಹೇಳಿದ.

ಲಲಿತಮ್ಮನ ಬಲವಂತಕ್ಕೆ ಭಟ್ಟರೂ ಸ್ವಲ್ಪ ಹಾಲು ಸೇವಿಸಬೇಕಾಯಿತು. ಮೂರ್ತಿ ಲಲಿತಮ್ಮ ಉಳಿದ ಹಾಲೂ ಹಣ್ಣನ್ನು ಸ್ವೀಕರಿಸಿ, ಭಟ್ಟರ ಪರ್ಣಕುಟಿಯ ಹಜಾರದಲ್ಲಿ ಮಲಗಿದರು.

ಮಲಗಿದ ಅರೆಕ್ಷಣದಲ್ಲಿ ಲಲಿತಮ್ಮನಿಗೆ ಸೊಗಸಾದ ನಿದ್ರೆ ಹತ್ತಿತು.

ಮೂರ್ತಿ ಕಣ್ಣುಬಿಟ್ಟುಕೊಂಡೇ ಮಲಗಿದ್ದ. ಹೊರಗೆ ವಿರಾಜಿಸುತ್ತಿದ್ದ ಚಂದ್ರಕಾಂತಿ ಪರ್ಣಕುಟಿಯ ತಡಿಕೆಗಳ ಮಧ್ಯೆ ತೂರಿಬರುತ್ತಿತ್ತು.

ಮೂರ್ತಿಯ ಕಣ್ಣುಮುಂದೆ ಎರಡು ದಿವ್ಯದೃಶ್ಯಗಳು ನಿಂತಿದ್ದವು.

ದಿವ್ಯಕಾಂತಿಯಿಂದ ಬೆಳಗುತ್ತಾ, ನಗೆಮುಖದಿಂದ ಕುಳಿತಿದ್ದ ಗುರುದೇವ-ಶ್ರೀಶ್ರೀ ಚಂದ್ರಶೇಖರ ಭಾರತಿ ಜಗದ್ಗುರುಗಳು.

ಸರ್ವಾಲಂಕಾರಭೂಷಿತೆಯಾಗಿ ಅನೂನ ಪ್ರಭೆಯಿಂದ ವಿರಾಜಿಸುತ್ತಿದ್ದ ಶ್ರೀ ಶಾರದಾ ಅಮ್ಮನವರು.

ತಾಯಿ–ಮಗ

ತಾಯಿ, ಮಗನ ಧ್ಯಾನದಲ್ಲಿ ಮೂರ್ತಿಯ ಜಡನಿದ್ರೆ ಜಾರಿ ಯೋಗನಿದ್ರೆ ಆರಂಭವಾಗಿತ್ತು.

ಅವ್ಯಕ್ತಾನಂದ ಅವನ ಹೃದಯ ತುಂಬಿ ತುಳುಕುತ್ತಿತ್ತು.

ಒಮ್ಮೆ ಲಲಿತನ ಕಡೆನೋಡಿ

'ಅವಳನ್ನೂ ಎಬ್ಬಿಸಲೇ' ಎಂದುಕೊಂಡ.

ಮರುಕ್ಷಣವೇ, ಮಗುವಿನಂತೆ ಮಲಗಿ ನಿದ್ರಿಸುತ್ತಿದ್ದ ಅವಳ ಮುಖ ನೋಡಿ 'ಮಲಗಿ ನಿದ್ರಿಸಲಿ-ಪಾಪ! ಜೀವ ಬಹಳ ದಣಿದಿದೆ' ಎಂದುಕೊಂಡ.

ಮೂರ್ತಿ, ಲಲಿತಮ್ಮನಿಗೆ ಶೃಂಗೇರಿಯಲ್ಲಿ ಮೂರು ದಿನ ಮೂರು ಕ್ಷಣಗಳಂತೆ ಕಳೆದು ಹೋದವು.

ಭಟ್ಟರ ಜತೆಯಲ್ಲಿ ಮೂರ್ತಿ ವಿವಿಧ ವಿಷಯಗಳನ್ನು ಚರ್ಚಿಸಿದ್ದಲ್ಲದೆ ಅವರಿಗೆ ಡೇವಿಡ್, ಥಾಮಸ್ ಅಕೆಂಪಿಸ್, ಸೇಂಟ್ ಫ್ರಾನ್ಸಿಸ್, ಪ್ಯಾಸ್ಕಲ್, ಮನಸೂರ್, ಖಲೀಲ್ ಗಿಬ್ರಾನ್ ಮೊದಲಾದ ಕವಿಸಂತರ ಜೀವನ, ಸಂದೇಶದ ಪರಿಚಯಮಾಡಿಕೊಟ್ಟ. ಮೂರ್ತಿಯ ಅಗಾಧ ಪಾಂಡಿತ್ಯ, ಬಹುಶ್ರುತತ್ವ ಕಂಡು ಭಟ್ಟರು ತಲೆದೂಗಿದರು.

ನಾಲ್ಕನೆಯ ದಿನ ಅವರು ಹೊರಡಲನುವಾದರು. ತಮ್ಮ ಅಪ್ಪಣೆ ಪಡೆಯಲು ಬಂದ ದಂಪತಿಗಳನ್ನು ಆಶೀರ್ವದಿಸಿ ಶ್ರೀಶ್ರೀಗುರುಗಳು ಫಲಮಂತ್ರಾಕ್ಷತೆ, ಉಡುಗೆರೆಯಿತ್ತರು.

ಬಸ್‌ಸ್ಟ್ಯಾಂಡಿನವರೆಗೆ ಭಟ್ಟರು ದಂಪತಿಗಳನ್ನು ಹಿಂಬಾಲಿಸಿದರು. ಬಸ್ ಬಂದು ನಿಲ್ಲಲು ಲಲಿತಮ್ಮ ಅಳುವುದಕ್ಕುಪಕ್ರಮಿಸಿದಳು. ಭಟ್ಟರು ಅವಳನ್ನು ಸಂತೈಸುತ್ತಾ

"ಅಳಬೇಡ ಮಗಳೇ-ಜೀವನವೇ ಹೀಗೆ!" ಎಂದರು.

"ಬೆಂಗಳೂರಿಗೆ ಬಂದಾಗ ಖಂಡಿತ ನಮ್ಮ ಮನೆಗೆ ಬರುವಿರಷ್ಟೆ."

"ಬರುತ್ತೇನಮ್ಮ-ಬರುತ್ತೇನೆ."

ನಮಸ್ಕರಿಸಿದ ಲಲಿತಮ್ಮನನ್ನು ಆಶೀರ್ವದಿಸುವಾಗ ಭಟ್ಟರ ಕಣ್ಣು ಗಳಿಂದಲೂ ಹನಿಗಳುದುರಿದವು.

ಮೂರ್ತಿ, ಲಲಿತಮ್ಮ ಬಸ್ಸಿನಲ್ಲಿ ಕುಳಿತಮೇಲೂ ಭಟ್ಟರು ತಮ್ಮ ಸ್ಥಳಬಿಟ್ಟು ಕದಲಲಿಲ್ಲ.

ಬಸ್ ಮುಂದಡಿಯಿಟ್ಟಿತು-ಭಟ್ಟರು ನಿಂತೇ ಇದ್ದರು.

ಬಸ್ ಹೊರಟ ಸ್ವಲ್ಪ ಹೊತ್ತಿನಮೇಲೆ ಭಟ್ಟರು ಮೆಲ್ಲನೆ ಕಾಲೆಳೆದುಕೊಂಡು ಪರ್ಣಕುಟಿ ಸೇರಿದರು.

೧೪

ಊರಿಗೆ ಹಿಂದಿರುಗಿದ ಮೂರ್ತಿ ಕೆಲವುದಿನ ಯಾವ ಕೆಲಸಕ್ಕೂ ಕೈಹಾಕಲಿಲ್ಲ.

ವಿವಿಧ ವಿಚಾರಗಳ ಸುಳಿಗೆ ಸಿಕ್ಕಿ ಅವನ ಮನಸ್ಸು ಅಸ್ತವ್ಯಸ್ತವಾಗಿತ್ತು.

ಮೌನತಳೆದಿದ್ದ ಅವನ ಮನಸ್ಸಿನಲ್ಲಿ ಯಾವದೋ ಶೂನ್ಯತೆ ವ್ಯಾಪಿಸಿತ್ತು.

ಶುದ್ಧ ಸೋಮಾರಿಯಂತೆ ಕಾಣುತ್ತಿದ್ದ ಮೂರ್ತಿಯ ಮನಸ್ಸಿನಲ್ಲಿ-ಹೊಗೆಯಾಡದೆಯೇ ಒಳಗೇ ಜ್ವಾಲಾಮುಖಿ ಕವರುತ್ತಿತ್ತು.

ಕಾವ್ಯದರ್ಶನವನ್ನು ಕುರಿತು ಶ್ರೀಗುರುಗಳು ಅಪ್ಪಣೆಕೊಡಿಸಿದ್ದ ಮಾತುಗಳು ಮೂರ್ತಿಯ ಅನೇಕ ವಿಚಾರಗಳು, ನಂಬಿಕೆಗಳು, ಸಿದ್ಧಾಂತಗಳನ್ನು ಪುನರ್ವಿಮರ್ಶೆಗೊಳಗಾಗಿಸಿದ್ದವು.

ಲಲಿತಮ್ಮನೂ ಅವನ ಮೌನಮುದ್ರೆಯನ್ನೊಡೆಯಲೆತ್ನಿಸಲಿಲ್ಲ.

ಟಪಾಲಿನಲ್ಲಿ ಬಂದಿದ್ದ ಕಾಗದಗಳನ್ನು ನೋಡುತ್ತಾ ಮೂರ್ತಿ ಒಂದು ಆಹ್ವಾನಪತ್ರಿಕೆ ಆಯ್ದು ಲಲಿತಮ್ಮನ ಕೈಯಲ್ಲಿಟ್ಟು

"ಇದನ್ನು ನೋಡು" ಎಂದ.

ಲಲಿತಮ್ಮ ಆಹ್ವಾನಪತ್ರಿಕೆ ಓದಿಕೊಂಡು

"ಹೋಗಿ ಬನ್ನಿ" ಎಂದಳು.

"ಪರಿಷತ್ತಿನವರಿಗೆ ಈಗ ನನ್ನ ನೆನಪಾದುದು ಅಚ್ಚರಿಯಲ್ಲವೇ ?"

"ಪರಿಷತ್ತಿನ ಕಾರ್ಯಕ್ಷೇತ್ರ ವಿಶಾಲವಾದಂತಿದೆ."

"ಸತ್ಕಾರಕೂಟ ಎಂದು ನೋಡು"

"ಇಂದೇ–ಸಂಜೆ ಆರು ಗಂಟೆಗೆ"

"ಸಂಜೆಗೆ ಗುಂಡ ಬರುತ್ತಾನೋ ಏನೋ?"

"ಅವರನ್ನೂ ಪರಿಷತ್ತಿಗೆ ಕಳಿಸಲೀ ?"

"ಅವನಿಗೆ ಆಹ್ವಾನವಿದೆಯೋ ಇಲ್ಲವೊ ?"

"ನೀವು ಹಿಂದಿರುಗುವವರೆಗೆ ಇಲ್ಲೇ ಇರಿ ಎಂದು ಹೇಳುತ್ತೇನೆ."

"ಯಾವನೋ ಅಮೇರಿಕಾದವನ ಉಪದೇಶ ಕೇಳುವುದಕ್ಕೆ ನಾನೇತಕ್ಕೆ ಹೋಗಲಿ."

"ಹಾಗಲ್ಲ. ಹೋಗಿ ಬನ್ನಿ. ಹೊರಗಿನಿಂದ ಬರುವವರ ಪರಿಚಯವಾದಲ್ಲಿ ತಪ್ಪೇನು ? ಈ ಡಾ. ಸ್ಕಿನ್ನರ್ (Dr. Skinner) ಯಾರು ?"

"ನಿನಗೆಷ್ಟು ಗೊತ್ತೋ ನನಗೂ ಅಷ್ಟೇ ಗೊತ್ತು. ಈತ ರಾಕ್‌ಫೆಲ್ಲರ್ ಇನ್‌ಸ್ಟಿಟ್ಯೂಟಿನ ಸಾಹಿತ್ಯಶಾಖೆಯ ಮುಖ್ಯಾಧಿಕಾರಿಯಂತೆ !"

"ಹೋಗಿ ಬನ್ನಿ-ಆದರೆ ಒಂದು ಮಾತು!"

"ಏನು ?"

"ಡಾ. ಸ್ಕಿನ್ನರ್ ಜತೆ ಜಗಳವಾಡಿ ಬರಬೇಡಿ."

"ನಾನಷ್ಟು ಜಗಳಕಂಟಕನೇ ?"

"ಅಲ್ಲ-ಅಮೇರಿಕಾದ ರಾಜಕಾರಣದಿಂದ ನಿಮ್ಮ ಮನಸ್ಸು ಈಗ ಬೇಸರಗೊಂಡಿದೆ-ಅದಕ್ಕಾಗಿಯೇ ಎಚ್ಚರಕೊಟ್ಟೆ."

"ಆಗಬಹುದು ಗುರುಗಳೇ-ಮಹದಾಜ್ಞೆ" ಎಂದ.

ಸೌಮ್ಯವಾಗಿ ಅಲಂಕೃತವಾಗಿದ್ದ ಪರಿಷತ್ತಿನ ಸಭಾಮಂದಿರದಲ್ಲಿ ಊರಿನ ಹಿರಿಯ, ಕಿರಿಯ ಸಾಹಿತಿಗಳು, ಪತ್ರಿಕಾ ಸಂಪಾದಕರು ನೆರೆದಿದ್ದರು. ಅಲ್ಪೋಪಹಾರವಾದ ಮೇಲೆ ಪರಿಷತ್ತಿನ ಅಧ್ಯಕ್ಷರು ಮುಖ್ಯ ಅತಿಥಿಗಳ ಪರಿಚಯಮಾಡಿಕೊಟ್ಟರು.

"ಡಾ. ಸ್ಕಿನ್ನರ್ ಅವರು ಭಾರತಕ್ಕೆ ಅಪರಿಚಿತರಾದವರೂ ಅಮೇರಿಕಾಕ್ಕೆ ಸುಪರಿಚಿತರು. ಇವರ ತ್ರೈಮಾಸಿಕ ಸಂಕಲನ 'ವಿಶ್ವಸಾಹಿತ್ಯ' ವಿದ್ವನ್ಮಂಡಲಿಯ ಗೌರವಾದರಕ್ಕೆ ಪಾತ್ರವಾಗಿದೆ. ಪ್ರಾಚ್ಯ ಪಾಶ್ಚಾತ್ಯ ಸಾಹಿತಿಗಳಲ್ಲಿ ನಿಕಟಬಾಂಧವ್ಯ ಹುಟ್ಟಿಸುವ ಪ್ರಯತ್ನದಲ್ಲಿ ಡಾ. ಸ್ಕಿನ್ನರ್ ಉದ್ಯುಕ್ತರಾಗಿದ್ದಾರೆ. ಅವರ 'ವಿಶ್ವಸಾಹಿತ್ಯ' ಈಗಾಗಲೇ ಚೀಣ, ಜಪಾನ್, ಇರಾನ್ ದೇಶಗಳ ಸಾಹಿತ್ಯಪರಿಚಯಮಾಡಿಕೊಟ್ಟಿದೆ.

ಡಾ. ಸ್ಕಿನ್ನರ್ ಆರು ತಿಂಗಳು ಭಾರತ ಪ್ರವಾಸಮಾಡಿ ಬೆಂಗಳೂರಿಗೆ ಬಂದಿದ್ದಾರೆ. ಬಂಗಾಳಿ, ಗುಜರಾತಿ, ಹಿಂದಿ, ಮರಾಠಿ, ಉರ್ದು ಸಾಹಿತ್ಯಗಳ ಪ್ರಗತಿಯನ್ನು ಈಕ್ಷಿಸಿ ದಕ್ಷಿಣಭಾರತದ ಭಾಷಾಸಾಹಿತ್ಯಗಳ ಪರಿಚಯ ಮಾಡಿಕೊಳ್ಳಲು ಆರಂಭಿಸಿದ್ದಾರೆ.

ದಕ್ಷಿಣಭಾರತದ ಭಾಷಾಸಾಹಿತ್ಯಗಳ ಪರಿಚಯವನ್ನು ತಮ್ಮ 'ವಿಶ್ವಸಾಹಿತ್ಯ'ದಲ್ಲಿ ಮಾಡಿಕೊಡಬೇಕೆಂಬ ಉದ್ದೇಶವಲ್ಲದೆ, ಭಾರತೀಯ ಸಾಹಿತ್ಯ ಅಮೇರಿಕಾದಲ್ಲಿ ಪ್ರಸಾರವಾಗುವ ಕ್ರಮವನ್ನು ವಿಚಾರಮಾಡುವುದೂ ಡಾ. ಸ್ಕಿನ್ನರ್ ಅವರ ಉದ್ದೇಶವಾಗಿದೆ. ಸುಪ್ರಸಿದ್ಧ ರಾಕ್‌ಫೆಲ್ಲರ್ ಸಂಸ್ಥೆಯಿಂದ ಸಂಯೋಜಿತರಾಗಿ ಬಂದಿರುವ ಈ ಮಾನ್ಯ ಅತಿಥಿಗಳು ಭಾರತ-ಅಮೇರಿಕಾಗಳ ಸಾಂಸ್ಕೃತಿಕ ಬಾಂಧವ್ಯ ಬೆಸೆದು, ಉಭಯ ಮಹಾರಾಷ್ಟ್ರಗಳ ಸಂಪರ್ಕ ಮತ್ತಷ್ಟು ಬೆಳೆಯಲು ಸಹಾಯವಾಗುವ ಮಾರ್ಗಗಳನ್ನು ತಮ್ಮೊಂದಿಗೆ ಚರ್ಚಿಸಲು ಬಯಸುತ್ತಾರೆ. ಭಾರತೀಯ ಲೇಖಕರ ಕಷ್ಟಸುಖಗಳೇನು-ಭಾರತೀಯ ಸಾಹಿತ್ಯ ಬೆಳೆಯಲು ಅಮೆರಿಕಾ ಯಾವ ಬಗೆಯ ಸಹಾಯ ಮಾಡಬಹುದು–ಅಮೇರಿಕಾದಿಂದ ಭಾರತೀಯರು ಬಯಸುವುದೇನು–ಅಮೇರಿಕಾಕ್ಕೆ ಭಾರತೀಯರು ಪ್ರತಿಯಾಗಿ ನೀಡುವ ಸಹಕಾರ ಯಾವದು ಎಂಬ ವಿಷಯಗಳನ್ನು ನಾವೀಗ ಚರ್ಚಿಸಬೇಕು.

ಭಾರತದ ಹಿತೈಷಿಗಳಾಗಿ, ಸಾಹಿತಿಗಳ ಗೆಳೆಯರಾಗಿ ನಮ್ಮಲ್ಲಿ ಆಗಮಿಸಿರುವ ಈ ಮಾನ್ಯ ಅತಿಥಿಗಳಿಗೆ ಪರಿಷತ್ತಿನ ಪರವಾಗಿ ಮತ್ತು ತಮ್ಮ ಪರವಾಗಿ ಹೃತ್ಪೂರ್ವಕ ಸ್ವಾಗತ ಬಯಸುತ್ತೇನೆ"

ಎಂದು ಹೇಳಿ ಹಾರ, ತುರಾಯಿ ಅರ್ಪಿಸಿದರು.

ಸೆಂಟ್ರಲ್ ಕಾಲೇಜಿನ ಆಂಗ್ಲಭಾಷಾಧ್ಯಾಪಕರಾದ ಶಿವರಾಮಯ್ಯನವರು ಮುಖ್ಯ ಅಥಿತಿಗಳಿಗೆ, ಅಲ್ಲಿ ಸೇರಿದ್ದ ಕನ್ನಡ ಸಾಹಿತಿಗಳ ಮತ್ತು ಅವರ ಕೃತಿಗಳ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು.

ಚರ್ಚೆ ಆರಂಭವಾಗುವ ಮುನ್ನ ಡಾ. ಸ್ಕಿನ್ನರ್ ಎದ್ದು ನಿಂತು ಪ್ರಾಸ್ತಾವಿಕವಾಗಿ ನಾಲ್ಕು ಮಾತುಗಳನ್ನಾಡಿದರು.

"ಕನ್ನಡ ಲಿಟರರಿ ಅಕೆಡಮಿಯ (ಕನ್ನಡ ಸಾಹಿತ್ಯ ಪರಿಷತ್ತು) ಸದಸ್ಯರು ಮತ್ತು ತಾವು ನನಗೆ ನೀಡಿರುವ ಹೃತ್ಪೂರ್ವಕ ಸ್ವಾಗತಕ್ಕೆ ನಾನು ಋಣಿಯಾಗಿದ್ದೇನೆ.

ನಿಮ್ಮ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು ಕೆಲವೇ ವರ್ಷಗಳಾದವು. ಈ ಅಲ್ಪಾವಧಿಯಲ್ಲಿ ನೀವು ವಿಶ್ವದ ಮಹಾರಾಷ್ಟ್ರಗಳ ಪಂಕ್ತಿಗೆ ಸೇರಿರುವುದಲ್ಲದೆ ನಿಮ್ಮ ಶಾಂತಿಯುತ ರಾಜಕಾರಣದಿಂದ ವಿಶ್ವದ ಹಲವು ಸಮಸ್ಯೆಗಳಿಗೆ ಪರಿಹಾರವನ್ನೂ ಒದಗಿಸಿರುವಿರಿ.

ಭಾರತದ ಪ್ರಾಚೀನ, ಅರ್ವಾಚೀನ ಸಂಸ್ಕೃತಿ, ಭಾರತೀಯರ ಜೀವನ–ಅವರ ಹಲವು ಸಮಸ್ಯೆಗಳು ಈ ಬಗ್ಗೆ ಅಮೇರಿಕಾದಲ್ಲಿ ವಿಶೇಷ ಆಸಕ್ತಿಯುಂಟಾಗಿದೆ. ಗಾಂಧಿ, ನೆಹ್ರೂ, ಠಾಕೂರರನ್ನು ಅರಿಯದ ಅಮೇರಿಕನ್ನರೇ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಈಚೆಗೆ ಇಂಗ್ಲಿಷಿನಲ್ಲಿ ಬರೆಯುತ್ತಿರುವ ಮುಲ್ಕರಾಜ್ ಆನಂದ್, ರಾಜಾರಾವ್, ನಾರಾಯಣ್, ಕಾರಕಾ, ಭವಾನಿ ಭಟ್ಟಾಚಾರ್ಯ ಮೊದಲಾದವರ ಸಾಹಿತ್ಯಕ್ಕೂ ಅಮೇರಿಕಾ ಸ್ವಾಗತ ನೀಡಿದೆ. ಈಚೆಗೆ ನಮ್ಮ ಫೌಂಡೇಷನ್ನಿನವರು (Foundation) ಸಂಗ್ರಹಿಸಿದ ವರದಿಯಿಂದ ಭಾರತದ ಹನ್ನೊಂದು ಪ್ರಧಾನ ಭಾಷೆಗಳಲ್ಲಿ ವಿಪುಲಸಾಹಿತ್ಯ ಸೃಷ್ಟಿಯಾಗಿದೆಯೆಂಬುದೂ, ಆ ಸಾಹಿತ್ಯ ಭಾರತೀಯರಿಂದ ಇಂಗ್ಲಿಷಿನಲ್ಲಿ ನಿರ್ಮಾಣವಾಗುತ್ತಿರುವ ಸಾಹಿತ್ಯಕ್ಕಿಂತ ಮಿಗಿಲಾಗಿದೆಯೆಂಬುದೂ ತಿಳಿದು ಬಂತು.

೧. ಭಾರತೀಯ ದೇಶಭಾಷೆಗಳ ಸಾಹಿತ್ಯ, ವ್ಯಾಪ್ತಿ, ಯೋಗ್ಯತೆಯ ಬಗ್ಗೆ ವರದಿ ಸಿದ್ಧಗೊಳಿಸುವುದು.

೨. ಭಾರತೀಯ ಭಾಷೆಗಳಿಗೆ ಅಮೇರಿಕಾದ ಉತ್ತಮ ಸಾಹಿತ್ಯವನ್ನು ಅನುವಾದಿಸಲು ವ್ಯವಸ್ಥೆ ಮಾಡುವುದು.

೩. ಪ್ರಾತಿನಿಧಿಕ ಭಾರತೀಯ ಸಾಹಿತ್ಯವನ್ನು ಇಂಗ್ಲಿಷಿಗೆ ಅನುವಾದ ಮಾಡಿಸಿ ಅಮೇರಿಕಾದಲ್ಲಿ ಪ್ರಕಟಿಸುವುದು.

೪. ಭಾರತೀಯ ಲೇಖಕರು ತಮ್ಮ ಬರವಣಿಗೆ, ಸಂಶೋಧನೆ, ಅಭ್ಯಾಸ ಮುಂದುವರಿಸಲು ನೆರವು ನೀಡುವುದು.

ಈ ಬಗ್ಗೆ ವ್ಯವಸ್ಥೆ ಮಾಡಲು ನಾನು ರಾಕ್‌ಫೆಲ್ಲರ್ ಫೌಂಡೇಷನ್ನಿನಿಂದ ನಿಯೋಜಿತನಾಗಿ ಇಲ್ಲಿಗೆ ಬಂದಿದ್ದೇನೆ. ಉತ್ತಮ ಸಾಹಿತ್ಯದ ವಿನಿಮಯದಿಂದ ಉಭಯ ರಾಷ್ಟ್ರಗಳ ಮೈತ್ರಿಯನ್ನು ಬೆಳಸಬೇಕೆಂಬುದೇ ನಮ್ಮ ಉದ್ದೇಶ.

ಈ ಕಾರ್ಯ ಸಾಧಿಸುವುದಕ್ಕೆ ಅನುಕೂಲವಾದ ಸಲಹೆಗಳನ್ನಿತ್ತು ತಾವು ಸಹಕರಿಸಬೇಕಾಗಿ ಕೋರುತ್ತೇನೆ."

ಕನ್ನಡ ಸಾಹಿತ್ಯಾಚಾರ್ಯರೊಬ್ಬರು ಡಾ. ಸ್ಕಿನ್ನರ್ ಅವರನ್ನುದ್ದೇಶಿಸಿ "ಅಮೇರಿಕಾದಲ್ಲಿ ನೀವು ಪುಸ್ತಕಗಳನ್ನು ಎಷ್ಟು ಅಚ್ಚು ಹಾಕಿಸುವಿರಿ" ಎಂದು ಕೇಳಿದರು.

"ಹೆಚ್ಚು ಬೆಲೆಯ ಪುಸ್ತಕಗಳಾದರೆ ಹತ್ತು, ಹದಿನೈದು ಸಾವಿರ ಪ್ರತಿಗಳು; ಸುಲಭ ಬೆಲೆಯ ಪಾಕೆಟ್ ಪುಸ್ತಕಗಳಾದರೆ ಒಂದು ಲಕ್ಷ ಪ್ರತಿಗಳು."

"ಲೇಖಕನಿಗೆ ಗೌರವಧನ ಎಷ್ಟು ಕೊಡುವಿರಿ?"

"ಅದು ಲೇಖಕನನ್ನು ಅವಲಂಬಿಸುತ್ತದೆ. ಫಾಕ್ನರ್, ಹೆಮಿಂಗ್‌ವೇ, ಪರ್ಲ್‌ಬಕ್, ಎರ್‌ಸ್ಕಿನ್ ಕಾಲ್ಡ್‌ವೆಲ್ ಮೊದಲಾದ ಲೇಖಕರಿಗೆ ಮೊತ್ತವಾಗಿ ಹಣ ಕೊಡುತ್ತಾರೆ. ಉಳಿದವರಿಗೆ ಪುಸ್ತಕ ಮಾರಾಟವಾದಂತೆ ಶೇಕಡ ಏಳೂವರೆ, ಹತ್ತು ಗೌರವಧನ (Royalty)ಸಲ್ಲುತ್ತದೆ."

"ಅಮೇರಿಕಾಕ್ಕೂ ಇಲ್ಲಿಗೂ ಅಜಗಜಾಂತರ ವ್ಯತ್ಯಾಸ. ಇಲ್ಲಿ ನಾವೇ ಗ್ರಂಥಕರ್ತರು—ನಾವೇ ಪ್ರಕಾಶಕರು."

"ನೀವು ಒಂದು ಗ್ರಂಥದ ಮೊದಲನೆಯ ಮುದ್ರಣ ಎಷ್ಟು ಪ್ರತಿ ಅಚ್ಚು ಹಾಕುವಿರಿ?"

"ಸಾವಿರ ಹಾಕಿದರೆ ಹೆಚ್ಚು. ಅದೂ ಮಾರಾಟವಾಗಿ ಪ್ರಿಂಟಿಗ್ ಬಿಲ್ ಹಣ ನಮ್ಮ ಕೈಸೇರಬೇಕಾದರೆ ೩, ೪, ೫ ವರ್ಷಗಳಾಗುತ್ತವೆ."

"ಪರಿಸ್ಥಿತಿ ಈಗ ಸ್ವಲ್ಪ ಸುಧಾರಿಸಿದೆ ಸಾರ್"

ಎಂದೊಬ್ಬರು ನುಡಿದರು.

"ಹಾಗೆಂದು ನಾನೂ ಕೇಳಿದ್ದೇನೆ. ನಮ್ಮ ಮೂರ್ತಿಯವರ ಗ್ರಂಥಗಳು ಬಹಳ ಚೆನ್ನಾಗಿ ಮಾರಾಟವಾಗುತ್ತಿವೆಯಂತೆ!"

"ಅವರ ಈಚಿನ ಕಾದಂಬರಿ 'ತಾಯಿದೇವಿ' ಎಂಟು ಸಾವಿರ ಪ್ರತಿಗಳು ಮಾರಾಟವಾದವು ಸಾರ್"

ಎಂದು ಮೊದಲು ನುಡಿದವರೇ ಹೇಳಿದರು.

ಆಚಾರ್ಯಪುರುಷರು ಬೆಕ್ಕಸ ಬೆರಗಾಗಿ "ಹಾಗೇನು?" ಎಂದರು.

ಆಜಾನುಬಾಹು ಶಾಸ್ತ್ರಿಗಳು ಎದ್ದು ನಿಂತು

"ಭಾರತೀಯ ಲೇಖಕರಿಗೆ ನೀವು ಸಹಾಯ ಮಾಡುವುದಾಗಿ ಹೇಳಿದಿರಿ. ಯಾವ ರೀತಿ ಸಹಾಯ ಮಾಡುವಿರಿ ?"

"ನಿಮ್ಮ ಗ್ರಂಥಗಳನ್ನು ಇಂಗ್ಲಿಷಿಗೆ ಅನುವಾದಮಾಡಿಕೊಟ್ಟರೆ ಪ್ರಕಟಿಸಲು ಏರ್ಪಾಟು ಮಾಡುತ್ತೇವೆ."

"ವಿದ್ವತ್ಪೂರ್ಣ ಸಾಹಿತ್ಯರಚನೆಗೆ ಪೂರ್ವ ಸಹಾಯಬೇಕು—ನಾವು ಹಲವು ಗ್ರಂಥಗಳನ್ನು ಕೊಳ್ಳಬೇಕು–ದೊಡ್ಡ ದೊಡ್ಡ ಪುಸ್ತಕಭಂಡಾರಗಳಿರುವ ಊರುಗಳಿಗೆ ಹೋಗಿ ಬರಬೇಕು—ಬೇರೆ ಬೇರೆ ಊರುಗಳಲ್ಲಿರುವ ವಿದ್ವಾಂಸರನ್ನು ಕಂಡು ಅವರೊಂದಿಗೆ ವಿಚಾರ ವಿನಿಮಯಮಾಡಬೇಕು. ಇದಕ್ಕನುಕೂಲಿಸುವಂತೆ ನೀವು ಸ್ಕಾಲರ್‌ಷಿಪ್ ಅಥವಾ ಡೊನೇಷನ್ ಕೊಡಲು ಸಾಧ್ಯವೇ ?"

"ಈ ಬಗ್ಗೆ ನೀವೊಂದು ನಿಯೋಜನೆ ಸಿದ್ಧಗೊಳಿಸಿ ನನಗೆ ಕಳಿಸಿಕೊಟ್ಟರೆ ವಿಚಾರಮಾಡಬಹುದು—ನಿಮ್ಮಲ್ಲಿ ಈಗ ಸಾಹಿತ್ಯದ ಯಾವ ಪ್ರಕಾರ ಹೆಚ್ಚು ಬೆಳೆಯುತ್ತಿದೆ ?"

ಇತರರು ಬಾಯಿಬಿಡುವುದಕ್ಕೆ ಮುಂಚೆಯೇ ಆಚಾರ್ಯಪುರುಷರು ಆರಂಭಿಸಿದರು

"೧೯೧೫ ರಿಂದ ೧೯೪೦ರ ವರೆಗೆ ಆಧುನಿಕ ಕನ್ನಡ ಸಾಹಿತ್ಯದ ಸ್ವರ್ಣಯುಗ ಎಂದು ಭಾವಿಸಬಹುದು. ಈ ಕಾಲದಲ್ಲಿ ಕನ್ನಡದ ಮೊದಲನೆಯ ಕಾದಂಬರಿ ಶ್ರೀ ಎಂ. ಎಸ್. ಪುಟ್ಟಣ್ಣನವರ 'ಮಾಡಿದುಣ್ಣೋ ಮಾರಾಯ' ಪ್ರಕಟವಾದುದಲ್ಲದೆ, ಶ್ರೇಷ್ಠವರ್ಗದ ಸಣ್ಣ ಕಥೆಗಳು, ಪದ್ಯಕಾವ್ಯ, ಜೀವನ ಚರಿತ್ರೆ ಪ್ರಕಟವಾದವು. ೧೯೪೦ ರಿಂದ ೧೯೪೭ ರ ವರೆಗೆ ಅಶಾಂತಸ್ಥಿತಿಗೆ ನಮ್ಮ ದೇಶ ಸಿಕ್ಕಿದುದರಿಂದ ಸಾಹಿತ್ಯ ಹೆಚ್ಚು ಬೆಳೆಯಲಿಲ್ಲ. ಇಲ್ಲಿಂದ ಮುಂದೆ ತೂಕವಾದ ಬರವಣಿಗೆ ಬಹುಮಟ್ಟಿಗೆ ಕಡಿಮೆಯಾಗುತ್ತ ಬಂದು, ಅಗ್ಗದ ಕಾದಂಬರಿಗಳ ಕಾಲ ಆರಂಭವಾಯಿತು. ಸದ್ಯ ಈ ಅಗ್ಗದ ಕಾದಂಬರಿಗಳೇ ಹೆಚ್ಚು ಪ್ರಕಟವಾಗುತ್ತಿವೆ. ಇವುಗಳನ್ನು ಬರೆಯುವವರಿಗೇ ಪ್ರಕಾಶಕರ ಪ್ರೋತ್ಸಾಹ. ಗೋವಿಂದಸ್ವಾಮಿಯಂಥ ಒಳ್ಳೆಯಕವಿ ಹೊಟ್ಟೆಗಿಲ್ಲದೆ ಅವಸ್ಥೆಪಡುತ್ತಿದ್ದರೆ ಕೇಳುವವರಿಲ್ಲ—ಈ ಕವಿಗೆ ಡಾ. ಸ್ಕಿನ್ನರ್, ನೀವು ಫೌಂಡೇಷನ್ ಕಡೆಯಿಂದ ಮಾಸಾಶನ ಕೊಡಿಸಿ ಉಪಕಾರಮಾಡಬೇಕು.

ಹೊಟ್ಟೆಗಿಲ್ಲದೆ ಸಾಯುತ್ತಿರುವ ನಮ್ಮ ಕವಿಗಳಿಗೆ ನೀವು ಅನ್ನವಿಟ್ಟು ಕಾಪಾಡಿದರೆ ಮಹೋಪಕಾರವಾಗುತ್ತದೆ."

ಆಚಾರ್ಯಪುರುಷರ ಸಾಹಿತ್ಯ ಸಮಾವಲೋಕನ ಕೇಳಿ ಪರಿಷನ್ಮಂದಿರ ದಲ್ಲಿದ್ದ ಸಾಹಿತಿಗಳು ದಿಗ್ಭ್ರಾಂತರಾದರು. ಒಬ್ಬರ ಮುಖ ಒಬ್ಬರು ನೋಡಿ ಕೊಂಡರೂ ಆಚಾರ್ಯಪುರುಷರನ್ನು ಪ್ರತಿಭಟಿಸುವ ಧೈರ್ಯ ಯಾರಿಗೂ ಇಲ್ಲ. ಮೂರ್ತಿಯ ಸುತ್ತ ಕುಳಿತಿದ್ದ ನಾಲ್ಕಾರು ಸಾಹಿತಿಗಳು ಅವನನ್ನೇ ಎವೆಯಿಕ್ಕದೆ ನೋಡಿದರು.

ಮೂರ್ತಿಗೂ ಆಚಾರ್ಯಪುರುಷರ ಭಾಷಣ ಅಸಮಾಧಾನವನ್ನುಂಟು ಮಾಡಿತ್ತು. ಅವನು ಎದ್ದು ನಿಂತು

"ನಾನು ನಾಲ್ಕು ಮಾತು ಹೇಳಬಯಸುತ್ತೇನೆ" ಎಂದ.

ಗೋಷ್ಠಿಯ ಗಮನವೆಲ್ಲಾ ಮೂರ್ತಿಯ ಕಡೆಗೆ ಮೂಡಿತು.

"೧೯೫೧ರಿಂದ ಈವರೆಗಿನ ನಮ್ಮ ಸಾಹಿತ್ಯದ ಸ್ಥಿತಿಗತಿಗಳನ್ನು ವಿವರಿಸಿದ ಹಿರಿಯರು ನಮ್ಮೆಲ್ಲರಿಗೂ ಪೂಜ್ಯರು. ನವೋದಯ ಕಾಲದ ಸಾಹಿತ್ಯ ನಿರ್ಮಾಣಕ್ಕೆ ಅವರಿಂದಾಗಿರುವ ಸೇವೆ ಅಪಾರ. ಕನ್ನಡ ಸಾಹಿತ್ಯಕ್ಕೆ ಹೆಸರು ತಂದಿರುವ 'ಸಣ್ಣಕಥೆ' ಕಲಾರೂಪ ತಳೆದು, ವಿಶ್ವಸಾಹಿತ್ಯದ ಪಂಕ್ತಿಯಲ್ಲಿ ನಿಲ್ಲಲು ಅವಶ್ಯಕವಾದ ಕೃಷಿಮಾಡಿದವರೇ ಈ ಹಿರಿಯರು. ೧೯೦೫ ರಿಂದ ೧೯೪೦ರ ವರೆಗೆ ಬೆಳೆದ ನಮ್ಮ ಸಾಹಿತ್ಯದ ಬಗ್ಗೆ ಅವರು ವ್ಯಕ್ತಮಾಡಿರುವ ಅಭಿಪ್ರಾಯದ ಬಗ್ಗೆ ಯಾರದ್ದೂ ಆಕ್ಷೇಪವಿಲ್ಲ. ೧೯೪೭ರ ತರುವಾಯದ ಕಾಲವನ್ನವರು 'ಅಗ್ಗದ ಕಾದಂಬರಿಗಳ ಯುಗ'ವೆಂದು ಕರೆದುದು ನ್ಯಾಯವಲ್ಲ. ಈ ಕಾಲದಲ್ಲಿ ಪ್ರಕಟವಾಗಿರುವ ಕಾದಂಬರಿಗಳ ಬೆಲೆ ಕಡಿಮೆಯಾದುದರಿಂದ ಅವುಗಳ ಗುಣವೂ ಕೀಳೆಂದು ಭಾವಿಸುವುದು ತಪ್ಪು. ನಮ್ಮ ಜನಕ್ಕೆ ಜ್ಞಾನದಾಹವಿದೆ—ಓದುವ ಹವ್ಯಾಸವಿದೆ. ಪುಸ್ತಕ ಕೊಂಡು ಓದುವ ಸಾಮರ್ಥ್ಯವಿಲ್ಲ. ನೂರುಪುಟದ ಪುಸ್ತಕಕ್ಕೆ ಒಂದೂವರೆ ರೂಪಾಯಿಯಿಂದ ಮೂರರವರೆಗೆ ಬೆಲೆ ಹಾಕಿದರೆ ನಮ್ಮ ಜನ ಕೊಳ್ಳುವುದೂ ಇಲ್ಲ, ಓದುವುದೂ ಇಲ್ಲ. ಈ ಪರಿಸ್ಥಿತಿ ಸುಧಾರಿಸಬೇಕೆಂದೇ ಅಗ್ಗದ ಪುಸ್ತಕಗಳನ್ನು ಪ್ರಕಟಿಸುವ ಪ್ರಯತ್ನ ಆರಂಭವಾದುದು.

ಅಗ್ಗದ ಬೆಲೆಯ ಪುಸ್ತಕಗಳ ಪ್ರಕಟನೆ ಆರಂಭವಾದ ಮೇಲೆ ಹಲವು

ಅಗ್ಗದ ಪುಸ್ತಕಗಳು ಪ್ರಕಟವಾಗಿರುವುದು ನಿಜ. ತುಟ್ಟಿ ಬೆಲೆಯ ಪುಸ್ತಕಗಳು ಪ್ರಕಟವಾಗುತ್ತಿದ್ದ ಕಾಲದಲ್ಲಿ ಹೊರಬಿದ್ದ ಪುಸ್ತಕಗಳೆಲ್ಲಾ ಮಹಾಕಾವ್ಯಗಳೇ? ಯಾವಕಾಲದಲ್ಲಿಯಾದರೂ ಹತ್ತು ಒಳ್ಳೆಯ ಪುಸ್ತಕ ಬರಬೇಕಾದರೆ ನೂರು ಒಳ್ಳಿತಲ್ಲದ ಪುಸ್ತಕಗಳೂ ಬರಲೇಬೇಕು. ೧೯೪೦ರ ತರುವಾಯ ಪ್ರಕಟವಾದ ಕನ್ನಡಸಾಹಿತ್ಯದ ನಿಕಟಪರಿಚಯ ನಮ್ಮ ಆಚಾರ್ಯಪುರುಷರಿಗಿಲ್ಲವೆಂದು ನಾನು ವಿಷಾದದಿಂದ ಹೇಳಬೇಕಾಗಿದೆ. ೧೯೪೦ರ ತರುವಾಯ, ಅಗ್ಗದ ಬೆಲೆಯ ಪುಸ್ತಕಗಳ ಪ್ರಕಟನೆ ಆರಂಭವಾದಮೇಲೆ ಅ. ನ. ಕೃ, ದೇವುಡು ಅವರ ಹಲವು ಗ್ರಂಥಗಳೂ, ತ. ರಾ. ಸು, ಕಟ್ಟೀಮನಿ, ಮಿರ್ಜಿ, ಕೃಷ್ಣಮೂರ್ತಿ ಪುರಾಣಿಕ ಅವರ ಕಾದಂಬರಿಗಳೂ ಪ್ರಕಟವಾದವು. ತ್ರಿವೇಣಿ, ಕುಲಕರ್ಣಿ ಬಿಂದುಮಾಧವ, ವ್ಯಾಸರಾಯ ಬಲ್ಲಾಳ, ಬೆಳ್ಳಿ ರಾಮಚಂದ್ರರಾಯ, ನಾಡಿಗೇರ, ಬಿ. ಪುಟ್ಟಸ್ವಾಮಯ್ಯ, ಸುತರಾಮಯ್ಯ, ಜನಾರ್ಧನ ಗುರಿಕಾರ, ಮೊದಲಾದ ಲೇಖಕರು ಪ್ರಕಾಶಕ್ಕೆ ಬರುವುದಕ್ಕೆ 'ಅಗ್ಗದ ಬೆಲೆಯ ಪುಸ್ತಕ'ಗಳೇ ಸಾಧನವಾದವು. ಅಗ್ಗದ ಬೆಲೆಯ ಪುಸ್ತಕಗಳ ಪ್ರಕಟನೆಯಾರಂಭವಾದ ಮೇಲೆ ಬಂದಿರುವ ಸಾಹಿತ್ಯವೆಲ್ಲಾ ಕೀಳು ಎಂದು ತಪ್ಪು ತಿಳಿದಿರುವವರು ಗೃಹಲಕ್ಷ್ಮಿ, ರುಕ್ಮಿಣಿ, ಆಶೀರ್ವಾದ, ಅನುಗ್ರಹ, ಗಾಜಿನಮನೆ, ಕನ್ನಡಮ್ಮನಗುಡಿಯಲ್ಲಿ, ಹಂಸಗೀತೆ, ರಾಯರು ಕಂಡ ರಂಗು, ಮುತ್ತೈದೆ, ಮಣ್ಣು ಮತ್ತು ಹೆಣ್ಣು, ಖಾನಾವಳಿಯ ನೀಲಾ, ಬೆಕ್ಕಿನ ಕಣ್ಣು, ಬಯಲ ಬಾಳು, ತಾಯಿದೇವಿ, ಕೆಸರಿನ ಕಮಲ ಇತ್ಯಾದಿ ಕಾದಂಬರಿಗಳನ್ನು ಓದಿನೋಡಬೇಕು. ಒಂದು ಕಾಲದಲ್ಲಿ ಸಣ್ಣಕಥೆಗಳ ಬೆಳವಣಿಗೆಗೆ ಕನ್ನಡದಲ್ಲಿ ಆದ ಕೃಷಿಯೇ ಇಂದು ಕಾದಂಬರಿಯ ಬೆಳವಣಿಗೆಯ ಬಗ್ಗೆ ಆಗುತ್ತಿದೆ. ಕನ್ನಡದಲ್ಲಿ ಈಗ ಪ್ರಕಟವಾಗಿರುವ ಕೆಲವು ಕಾದಂಬರಿಗಳು ಇಂಗ್ಲೆಂಡ್, ಅಮೇರಿಕಾ, ರಷ್ಯಾ ಕಾದಂಬರಿಸಾಹಿತ್ಯದ ಸರಿದೊರೆಯಾಗಿ ನಿಲ್ಲಬಲ್ಲವೆಂಬ ಧೈರ್ಯ ನನಗಿದೆ.

ಕನ್ನಡ ಸಾಹಿತ್ಯದ ಪ್ರಗತಿಗೆ ಪೋಷಕವಾಗಿ ಸಾಹಿತಿಗಳಿಗೆ ನೆರವು ನೀಡುವ ವಿಷಯ ಡಾ. ಸ್ಕಿನ್ನರ್ ಪ್ರಸ್ತಾಪಿಸಿದರು. ಶ್ರೀ ಶಾಸ್ತ್ರಿಗಳು ಅದು ವಿದ್ವತ್ಸಂಭಾವನಾರೂಪದಲ್ಲಿರಬೇಕೆಂದರು. ಆಚಾರ್ಯಪುರುಷರು ಅದು ದಾನರೂಪದಲ್ಲಿರಬೇಕೆಂದರು. ಸ್ವತಂತ್ರಭಾರತದ ಪ್ರಜೆಗಳಾದ ನಾವು ದಾನ

ಧರ್ಮಕ್ಕೆ ಕೈಯೊಡ್ಡುವುದು ನಮ್ಮ ರಾಷ್ಟ್ರಗೌರವಕ್ಕೇ ವಿಘಾತಕವೆಂದು ನನ್ನ ಅಭಿಪ್ರಾಯ. ಸಾಹಿತಿಗಳಿಗೂ ಬಡತನಕ್ಕೂ ಜನ್ಮಜನ್ಮಾಂತರಗಳಿಂದ ಋಣಾನುಬಂಧ ಕೂಡಿಬಂದಿದೆ. ಹೊರಗಿನವರಲ್ಲಿ ಕೈಯೊಡ್ಡಿ ಆ ಋಣಾನುಬಂಧ ನೀಗಿಕೊಳ್ಳುವುದಕ್ಕೆ ನಾನು ಸಮ್ಮತಿಸಲಾರೆ. ನಮ್ಮ ಬಡತನ ನಮ್ಮಿಂದಲೇ ನಿವಾರಣೆಯಾಗಬೇಕಲ್ಲದೆ ಅಮೇರಿಕಾ, ರಷ್ಯಾಗಳಿಂದ ನಿವಾರಣೆಯಾಗಲಾರದು.

ನಾನು ತಿಳಿದಿರುವ ಮಟ್ಟಿಗೆ ಅಮೇರಿಕಾದ ಜನ ವ್ಯವಹಾರಚತುರರು–ವ್ಯಾಪಾರಿಗಳು. ಅವರು ವಿನಾಕಾರಣ ನಮಗೆ ದಾನ ಧರ್ಮ ಕೊಡಲಾರರು. ರಾಜಕೀಯ ಶೃಂಖಲೆಯಿಂದ ಕಟ್ಟಲ್ಪಟ್ಟ ಹಣದ ಗಂಟೇ ನಮ್ಮ ಕೈಸೇರುವುದು. ನಾಲ್ಕುಕಾಸಿಗಾಗಿ ನಾವು ನಮ್ಮ ರಾಷ್ಟ್ರಗೌರವ, ಸ್ವಾತಂತ್ರ್ಯವನ್ನು ಬಲಿದಾನ ಮಾಡುವುದು ತಕ್ಕುದೇ ? ಶ್ರೀ ಶಾಸ್ತ್ರಿಗಳು ಕೊಟ್ಟ ಸೂಚನೆ ಸಮಂಜಸವಾಗಿದೆ. ನಮ್ಮ ವಿದ್ವತ್ತಿಗೆ ಅಮೇರಿಕಾ ಸಂಭಾವನೆ ಕೊಡಲಿ. ನಮ್ಮ ವಿದ್ವಾಂಸರು ನಾಲ್ಕುವರ್ಷ ದುಡಿದು ಒಂದು ಒಳ್ಳೆಯ ಗ್ರಂಥ ಬರೆದು ಕೊಡುತ್ತಾರೆ. ಅಮೇರಿಕಾದವರೇ ಅದನ್ನು ಪ್ರಕಟಿಸಲಿ. ಈ ಕೋಡುಕೊಳ್ಳುವ ವ್ಯವಹಾರದಿಂದ ನಮ್ಮ ಮೈತ್ರಿಯೂ ಸಾಧಿಸುತ್ತದೆ, ಆತ್ಮಗೌರವವೂ ಉಳಿಯುತ್ತದೆ.”

ಮೂರ್ತಿಯ ಸ್ಫೂರ್ತಿಯುತ ಭಾಷಣ ಕೇಳಿದ ಸಭಿಕರಿಗೆ ರೋಮಾಂಚನವಾಯಿತು.

ಕಾರ್ಯದರ್ಶಿಗಳ ವಂದನಾರ್ಪಣೆಯಾದ ಮೇಲೆ ಸಭೆ ಮುಕ್ತಾಯವಾಯಿತು.

ಮೂರ್ತಿಯ ಮೇಲೆ ಮುನಿದಿದ್ದ ಆಚಾರ್ಯಪುರುಷರೂ ಅವರ ವಂದಿಮಾಗಧರೂ ಯಾರಿಗೂ ಹೇಳದೆ ಹೊರಟುಹೋದರು.

ಡಾ. ಸ್ಕಿನ್ನರ್ ಮೂರ್ತಿ ನಿಂತಿದ್ದಲ್ಲಿಗೆ ಬಂದು ಅವನ ಕೈಕುಲುಕಿ

“ನಿಮ್ಮ ಪರಿಚಯವಾದುದು ತುಂಬ ಸಂತೋಷ. ಭಾರತ ನಿಮ್ಮನ್ನು ಕಂಡು ಹೆಮ್ಮೆಪಡಬೇಕು”

ಎಂದು ಮೂರ್ತಿಯ ವಿಳಾಸವನ್ನು ಗುರುತುಹಾಕಿಕೊಂಡು

“ನನ್ನ ‘ವಿಶ್ವಸಾಹಿತ್ಯ’ ಕಳಿಸುತ್ತೇನೆ. ನಿಮಗೆ ಅನುಕೂಲವಾದಾಗ ಲೇಖನ, ಕಥೆ ಕಳಿಸಿಕೊಡಿ” ಎಂದರು.

ಮೂರ್ತಿಯ ದಾರಿನೋಡುತ್ತಾ ಗುಂಡಣ್ಣ ಮನೆಯಲ್ಲಿ ಕುಳಿತೇ ಇದ್ದ.

"ಯಾವಾಗ ಬಂದೆ ಗುಂಡಾ."

"ನೀನೂ ಹೋದೆ—ನಾನೂ ಬಂದೆ."

"ಪರಿಷತ್ತಿಗೇ ಬರಬೇಕಾಗಿತ್ತು."

"ನನಗೆ ಆಮಂತ್ರಣವಿರಲಿಲ್ಲ. ಪರಿಷತ್ತಿನಲ್ಲಿ ಏನಾಯಿತು ?"

ಮೂರ್ತಿ ಎಲ್ಲವನ್ನೂ ಕೂಲಂಕಷವಾಗಿ ನಿರೂಪಿಸಲು ಗುಂಡಣ್ಣ ನಿಟ್ಟುಸಿರು ಬಿಟ್ಟು

"ಸರಿ !" ಎಂದ.

"ಏಕೆ ಗುಂಡಾ ?"

"ಇನ್ನು ಪರಿಷತ್ತಿನವರು ನಿನ್ನನ್ನು ಯಾವದಕ್ಕೂ ಕರೆಯುವುದಿಲ್ಲ."

"ನಾನೇನೂ ತಪ್ಪು ಆಡಲಿಲ್ಲವಲ್ಲಾ !"

"ತಪ್ಪೋ ಸರಿಯೋ-ಆಚಾರ್ಯಪುರುಷರನ್ನು ಪ್ರತಿಭಟಿಸುವ ಉದ್ಧಟತನ ತೋರಿದಿಯಲ್ಲಾ !"

"ಆಚಾರ್ಯಪುರುಷರಿಗಿಂತ ನನ್ನ ದೇಶದ ಗೌರವ ದೊಡ್ಡದು ಗುಂಡಾ."

"ನಿಜಾಪ್ಪ-ನಾನು ಒಪ್ಪುತ್ತೇನೆ-ಪರಿಷತ್ತಿನವರು ಒಪ್ಪಬೇಕಲ್ಲ."

ಎಂದು ಹೇಳಿದ.

ಗುಂಡಣ್ಣ ಹೋದ ಮೇಲೆ ಲಲಿತ ನಸುಮುನಿಸಿನಿಂದ

"ಪರಿಷತ್ತಿನವರ ಜತೆ ಜಗಳವಾಡಬೇಡಿ ಎಂದು ನಾನು ಹೇಳಿದ್ದೆ—ನನ್ನ ಮಾತು ನಿಮಗೆಲ್ಲಿ ಪಥ್ಯ ?"

"ಆ ಸಂದರ್ಭದಲ್ಲಿ ನಾನು ಆಚಾರ್ಯಪುರುಷರ ಮಾತು ಕೇಳಿ ಸುಮ್ಮನೆ ಕೂಡಬೇಕಾಗಿತ್ತೇ ?"

"ಇಲ್ಲ ದೊರೆ- ನೀವು ಹಾಗೆ ಮಾಡಿದ್ದರೆ ನಾನು ನಿಮ್ಮನ್ನು ಮಾತೇ ಆಡಿಸುತ್ತಿರಲಿಲ್ಲ"

ಎಂದು ಲಲಿತಮ್ಮ ಅಭಿಮಾನಪೂರ್ವಕವಾಗಿ ಹೇಳಿದಳು.

೧೫

**'ಸಾಹಿತ್ಯ ವಿಮರ್ಶೆ'** ಗ್ರಂಥವನ್ನಾರಂಭಿಸುವುದಕ್ಕೆ ಮೂರ್ತಿ ಸ್ವಲ್ಪ ಸಿದ್ಧತೆ ಮಾಡಿಕೊಳ್ಳಬೇಕಾಯಿತು. ಹಿಂದೆ ತಾನು ಓದಿದ್ದ ವಿಮರ್ಶಾ ಸಾಹಿತ್ಯವನ್ನು ಪುನರಾವಲೋಕನ ಮಾಡಬೇಕಾಯಿತಲ್ಲದೆ, ಈಚೆಗೆ ಬೆಳೆದ ವಿಮರ್ಶಾಶಾಸ್ತ್ರವನ್ನೂ ಪರಿಗಣಿಸಬೇಕಾಯಿತು. ಅರಿಸ್ಟಾಟಲನಿಂದ ಐ. ಎ. ರಿಚರ್ಡ್ಸ್‌ನವರೆಗೆ ವಿಮರ್ಶೆ ಕ್ರಮಬದ್ಧವಾಗಿ ಬೆಳೆದಿದ್ದಲ್ಲದೆ ಕಾಲೋಚಿತ ವಾಗಿ ಹಲವು ಮಾರ್ಪಾಟುಗಳನ್ನು ಹೊಂದಿತ್ತು. ಕಾವ್ಯದ ಕಟ್ಟಡಕ್ಕೇ ಲಕ್ಷ್ಯ ಕೊಡುವ ವಿಮರ್ಶೆ ಕಾಲಕ್ರಮೇಣ ರಸವಿಮರ್ಶೆಗೆ ಎಡೆಕೊಟ್ಟಿತು. ಸಮ ಕಾಲೀನ ಪಾಶ್ಚಾತ್ಯ ವಿಮರ್ಶಕರು ಅದರ ವ್ಯಾಪ್ತಿಯನ್ನು ಮತ್ತಷ್ಟು ವಿಸ್ತರಿಸಿ ದ್ದರು. ರಸಿಕನಾದ ಓದುಗನಲ್ಲಿ ಕಾವ್ಯ ಹುಟ್ಟಿಸುವ ಭಾವನೆ, ಸ್ಫೂರ್ತಿ, ರಸಾನುಪ್ರೇಕ್ಷೆಗಳನ್ನೇ ಅವರು ವಿಮರ್ಶೆಯೆನ್ನಲಾರಂಭಿಸಿದ್ದರು. ಛಿದ್ರಾ ನ್ವೇಷಣದ ವಿಮರ್ಶಕ ಕಾಲಕ್ರಮೇಣ ರಸಿಕಚಕ್ರಿಯಾಗುತ್ತ ಬಂದ.

ಪಾಶ್ಚಾತ್ಯರಲ್ಲಿ ವಿಮರ್ಶೆ ಬೆಳೆದಷ್ಟು ಹುಲುಸಾಗಿ ಸಂಸ್ಕೃತ ಸಾಹಿತ್ಯದಲ್ಲಿ ಬೆಳೆಯಲಿಲ್ಲ. ಆದರೆ ಸಂಸ್ಕೃತ ಲಾಕ್ಷಣಿಕರು ವಿಮರ್ಶಕನ ಕರ್ತವ್ಯ ಮೊದಲಿಗೇ ನಿರ್ದೇಶಿಸಿ ಅವನನ್ನು 'ಸುಹೃದಯ' ಎಂದು ಕರೆದರು. ಕಾವ್ಯ ಸುಹೃದಯಾ ಹ್ಲಾದಿನಿಯಾಗಬಲ್ಲುದೇ ವಿನಾ ಸೆಣಸುವುದಕ್ಕೆ ನಿಂತವನಿಗೆ ಪ್ರಿಯವಾಗ ಲಾರದು. ರಸಾನುಪೇಕ್ಷೆಗೇ ಸಂಸ್ಕೃತ ಲಾಕ್ಷಣಿಕರು ವಿಶೇಷ ಪ್ರಾಧಾನ್ಯ ಕೊಟ್ಟಿದ್ದರು.

ಕನ್ನಡಸಾಹಿತ್ಯದಲ್ಲಿ ಸ್ವತಂತ್ರವಾಗಿ ವಿಮರ್ಶನಶಾಸ್ತ್ರ ಬೆಳೆಯಲಿಲ್ಲ. ಮಧ್ಯಕಾಲದಲ್ಲಿ ಬಂದ ಕೆಲವು ಕೃತಿಗಳು ಸಂಸ್ಕೃತ ಲಾಕ್ಷಣಿಕರ ಜಾಡನ್ನೇ ಹಿಡಿದಿದ್ದವು. ಪಂಪ, ರನ್ನ, ರಾಘವಾಂಕ, ಷಡಕ್ಷರಿ ಮೊದಲಾದ ಮಹಾ

ಕವಿಗಳು ಮಾತ್ರ ಆಗಾಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಮಾಡಿ 'ರಸಜೀವ, ಭಾವ ಒಡಲು' ಎಂಬ ಸಿದ್ಧಾಂತವನ್ನು ಸ್ಥಾಪಿಸಿದ್ದರು.

ಕನ್ನಡದಲ್ಲಿ ನವೋದಯ ಆರಂಭವಾಗುವ ಮುನ್ನವೇ ವಿಮರ್ಶೆ ಆರಂಭವಾಯಿತು. 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ' ಯಲ್ಲಿ ಪ್ರಕಟವಾಗುತ್ತಿದ್ದ ಪುಸ್ತಕ ವಿಮರ್ಶೆ, ಲೇಖಕನ ವ್ಯಾಕರಣ ದೋಷಗಳು, ಮುದ್ರಕನ ಅಚ್ಚಿನ ತಪ್ಪುಗಳ ಪಟ್ಟಿ ಮಾಡಿ ಕೊಡುವುದರಲ್ಲಿ ತೃಪ್ತಿ ಪಟ್ಟುಕೊಂಡಿತು. ಕನ್ನಡದಲ್ಲಿ ರಸವಿಮರ್ಶೆ ಆರಂಭಿಸಿದ ಕೀರ್ತಿ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ಸಲ್ಲಬೇಕು. 'ಪ್ರಬುದ್ಧ ಕರ್ಣಾಟಕ' ದಲ್ಲಿ ಅವರು ಭಾವಿ ವಿಮರ್ಶಕನಿಗೆ ಹೆದ್ದಾರಿ ಹಾಕಿಕೊಟ್ಟುದಲ್ಲದೆ, ವಿಮರ್ಶಾಲೇಖನಕ್ಕುಚಿತವಾದ ಒಂದು ವಿಶಿಷ್ಟ ಶೈಲಿಯನ್ನು ರೂಪಿಸಿದರು.

ಈ ಹಿನ್ನೆಲೆಯನ್ನಿಟ್ಟುಕೊಂಡು ಮೂರ್ತಿ ಇಂದಿನ ವಿಮರ್ಶೆಗಳ ಸ್ಥಿತಿಗತಿಯನ್ನೂ, ನಾಡಿಗೆ ಹಾಗೂ ನಾಡಿನ ಸಾಹಿತ್ಯಪ್ರಗತಿಗೆ ಅವಶ್ಯಕವಾದ ವಿಮರ್ಶಾಲಕ್ಷಣಗಳನ್ನು ನಿರೂಪಿಸಿ ಅಹಂಕಾರ, ಪೂರ್ವಗ್ರಹ, ಪಕ್ಷೀಯ ಮನೋಭಾವ, ಅಪೂರ್ಣ ಪಾಂಡಿತ್ಯ, ಅರಸಿಕತೆಗಳಿಂದ ಪೀಡಿತರಾದ ವಿಮರ್ಶಕರಿಂದ ಸಾಹಿತ್ಯಕ್ಕೆ ಮತ್ತು ಸಾಹಿತಿಗಳಿಗೆ ಆಗಿರುವ—ಆಗುತ್ತಿರುವ ಅನ್ಯಾಯವನ್ನು ಕೂಲಂಕಷವಾಗಿ ವಿವರಿಸಲು ನಿಶ್ಚಯಿಸಿದ.

ತನ್ನ ಗ್ರಂಥದ ಉದ್ದೇಶವನ್ನು ವಿಶ್ವೇಶ್ವರಯ್ಯನಿಗೆ ವಿವರಿಸುತ್ತಾ

"ವಿಮರ್ಶಕನಾಗಬಯಸುವವನು ಇದೂ ಒಂದು ಶಾಸ್ತ್ರ—ಒಂದು ಕಲೆ ಎಂಬ ಗೌರವಭಾವನೆಯಿಂದ ದುಡಿಮೆ ಮಾಡಬೇಕು. ಕೇವಲ ಶಾಸ್ತ್ರಸೂತ್ರಗಳಿಂದಲೇ ವಿಮರ್ಶೆ ಬರೆಯಲು ಸಾಧ್ಯವಿಲ್ಲ. ವಿಮರ್ಶಕ ಸ್ವಯಂ ಕವಿ, ರಸಿಕ, ದೃಷ್ಟಾರನಾಗಿರಬೇಕು. ಒಂದು ಕಾವ್ಯವನ್ನು ತನ್ನ ಅನುಭವದ ಮೂಸೆಯಲ್ಲಿ ಹಾಕಿ, ಅದರ ಬಣ್ಣ ಪರೀಕ್ಷಿಸಲು ಸಮರ್ಥನಾಗಿರಬೇಕು.

ವಿಮರ್ಶಕನಲ್ಲದ ಸಾಮಾನ್ಯ ಓದುಗ ಈ ಶಾಸ್ತ್ರ—ಕಲೆಯ ಪರಿಚಯ ಮಾಡಿಕೊಳ್ಳುವುದರಿಂದ ಕಾವ್ಯವನ್ನು ಮತ್ತಷ್ಟು ಆಳವಾಗಿ ಅಭ್ಯಾಸ ಮಾಡಲು ಅನುಕೂಲವಾಗಬೇಕು. ಆಳವಾದ ಅನುಭವದಿಂದ ಪ್ರೇರಿತವಾದ ಕವಿಯ ಜಾಣ್ನುಡಿ ಅಳವಡುವುದು ಆಳವಾದ ಅನುಭವಕ್ಕೇ! ಮಹಾಸಾಗರದ

ಮೇಲೆ ಕೈಯಾಡಿಸಿದರೆ ಜೊಂಡು, ಹುಲ್ಲು, ಕಪ್ಪೆಯಚಿಪ್ಪು, ಗೆರಟೆ ಸಿಕ್ಕುತ್ತದೆ ; ಅಡಿ ತಡಕಿ ನೋಡಿದರೆ ಅನರ್ಘ್ಯ ಮುತ್ತುಗಳು ದೊರೆಯುತ್ತವೆ. ಮಹಾ ಸಾಗರದ ಒಳಕ್ಕಿಳಿದು ಮುತ್ತುಗಳನ್ನಾಯುವುದು ಹೇಗೆನ್ನುವುದನ್ನೇ ವಿಮರ್ಶಾ ಶಾಸ್ತ್ರ—ಕಲೆ ಹೇಳಿಕೊಡುವುದು.

ನನ್ನ ಗ್ರಂಥದಿಂದ ಪಂಡಿತ ಪಾಮರರಿಬ್ಬರಿಗೂ ಪ್ರಯೋಜನವಾಗ ಬೇಕೆಂಬುದೇ ನನ್ನ ಆಶಯ"

ಎಂದು ಹೇಳಿದ.

ಬೆಳಿಗ್ಗೆಯಿಂದ ಸಂಜೆಯವರೆಗೆ ಆಧಾರ ಗ್ರಂಥಗಳನ್ನವಲೋಕಿಸಿ, ಅವುಗಳಲ್ಲಿನ ಉತ್ತಮೋತ್ತಮ ಭಾಗಗಳನ್ನು ಆಯ್ದು ಅನುವಾದ ಮಾಡು ವುದು ; ರಾತ್ರಿ ಕುಳಿತು ತನ್ನ ವಸ್ತುಸಂಗ್ರಹವನ್ನು ಕ್ರೋಢೀಕರಿಸಿ, ತೂಗಿ ನೋಡಿ, ಸ್ವಂತ ವಿಚಾರದೊಂದಿಗೆ ಅವುಗಳನ್ನು ಹೋಲಿಸಿ ನೋಡಿ ಬರೆಯು ವುದು. ಪ್ರತಿನಿತ್ಯ ಹನ್ನೆರಡು—ಹದಿನಾರು ಗಂಟೆಗಳು ಒಂದೇ ಸಮನೆ ಮೂರ್ತಿ ದುಡಿಯಲಾರಂಭಿಸಿದ.

ಅತಿಶ್ರಮದಿಂದ ಕಂಗೆಟ್ಟು, ಆಯಾಸದಿಂದ ಸೋತು ಸೊರಗಿದ್ದ ಮೂರ್ತಿಯನ್ನು ಕಂಡ ಲಲಿತಮ್ಮನ ಕರುಳಿಗೆ ಅಪಾರ ವೇದನೆಯಾಯಿತು.

"ನೀವು ಮಾಡುತ್ತಿರುವುದು ಗ್ರಂಥ ರಚನೆಯಲ್ಲ—ಆತ್ಮಹತ್ಯೆ" ಎಂದಳು.

"ಆತ್ಮಕ್ಕೆ ಸಾವೇ ಇಲ್ಲ ಲಲಿತಾ."

"ವೇದಾಂತ ಹೇಳಿ ನನ್ನನ್ನು ಸಮಾಧಾನಗೊಳಿಸಲು ಸಾಧ್ಯವಿಲ್ಲ. ಸ್ವಲ್ಪ ಕನ್ನಡಿಯಲ್ಲಿ ನಿಮ್ಮ ಮುಖ ನೋಡಿಕೊಳ್ಳಿ."

"ಅಲ್ಪಾಯುವಾದ ಮಾನವ ತನ್ನ ಜೀವಿತದ ಪ್ರತಿ ಕ್ಷಣವನ್ನೂ ಸದ್ವಿನಿಯೋಗ ಮಾಡಬೇಕು."

"ಅನ್ನ, ನೀರು ತ್ಯಜಿಸಿಯಲ್ಲ !"

"ಸುಖಜೀವನದಿಂದ ಸಾಹಿತ್ಯ ಬೆಳೆಯುವುದಿಲ್ಲ. ಹಗಲಿರುಳೂ ದುಡಿದ ಹೊರತೂ ಈ ಕಲೆ ಸಿದ್ಧಿಸುವುದಿಲ್ಲ, ನಮ್ಮ ಕಮ್ಯುನಿಸ್ಟ್ ಮಿತ್ರರು, ಲೇಖಕರನ್ನು ಆಲಸಿಗಳು, ಸೋಮಾರಿಗಳು, ದುಡಿಯದೆ ತಿನ್ನುವವರು ಎಂದು ಕರೆಯುತ್ತಾರೆ. ಲೇಖಕನ ದುಡಿಮೆ ಶ್ರಮಜೀವಿಯ ದುಡಿಮೆಗಿಂತ ಮಿಗಿಲಾದುದೆಂಬುದನ್ನು ಈ ಕಾಮ್ರೇಡ್‌ಗಳರಿಯರು. ಶ್ರಮಜೀವಿ ಎಂಟು

ಗಂಟೆ ತನ್ನ ಫ್ಯಾಕ್ಟರಿಯಲ್ಲಿ ಕೆಲಸ ಮಾಡಿ ಬಂದರೆ ಸುಖವಾಗಿ ಉಂಡು ಮಲಗಬಲ್ಲ. ದುಡಿದ ಲೇಖಕನ ಹಸಿವು ಹಿಂಗಿಹೋಗಿರುತ್ತದೆ. ಅನ್ನ, ನೀರು ಅವನ ಗಂಟಲಲ್ಲಿ ಇಳಿಯುವುದಿಲ್ಲ. ದೇಹ ಶೋಷಿಸಿ ಶೋಷಿಸಿ ಅವನು ದುರ್ಬಲನಾಗುತ್ತಾನೆ."

"ದೇಹವನ್ನೂ ನಿರ್ಲಕ್ಷಿಸಿ ದುಡಿಯಲೇಬೇಕೆಂದು ಯಾರು ವಿಧಾಯಕ ಮಾಡಿದ್ದಾರೆ. ಅತ್ತ ಸ್ವಲ್ಪ ಲಕ್ಷ್ಯ ಕೊಟ್ಟರೆ ತಪ್ಪೇನು?"

"ಸಾಧ್ಯವಿಲ್ಲ ಲಲಿತಾ, ಸಾಧ್ಯವಿಲ್ಲ. ತಲೆಯಲ್ಲಿ ಹೊಳೆದ ಭಾವನೆ ರೂಪು ತಳೆದು ಕಾಗದಕ್ಕಿಳಿದಲ್ಲದೆ ಲೇಖಕ ತೃಪ್ತನಾಗುವುದಿಲ್ಲ. ಆಗಿನ ಅವನ ಸ್ಥಿತಿ ಅನುಭವಿಸಿದವರಿಗೆ ಮಾತ್ರ ಗೊತ್ತಾದೀತು. ಪ್ರತಿಭೆಯ ಆವೇಶಕ್ಕೆ ಸಿಲ್ಕಿದ ಕೆಲವು ಲೇಖಕರು ಬುದ್ಧಿಭ್ರಮಿಷ್ಠರಾಗಿರುವುದೂ ಇದಕ್ಕೇ ಇರಬಹುದು. ಹೈ ವೋಲ್ಟೇಜ್ ಕರೆಂಟ್ (High voltage current) ಇರುವ ಹೋಲ್ಡರಿಗೆ ಮನೆಯಲ್ಲಿ ಉಪಯೋಗಿಸುವ ಬಲ್ಬ್ ಹಾಕಿದರೆ, ಅದು ಸಿಡಿದು ಹೋಗುವುದಿಲ್ಲವೇ—ಹಾಗೆ."

ಮೂರ್ತಿಯೊಂದಿಗೆ ಈ ವಿಷಯ ವಾದಮಾಡಿ ಪ್ರಯೋಜನವಿಲ್ಲವೆಂಬುದನ್ನರ್ಥಮಾಡಿಕೊಂಡ ಲಲಿತ ಒಂದು ದಿನ ಗುಂಡಣ್ಣನಲ್ಲಿ ತನ್ನ ದುಃಖ ತೋಡಿಕೊಂಡಳು.

ಮೂರ್ತಿಯ ಗ್ರಂಥ ಒಂದು ಘಟ್ಟ ಮುಟ್ಟುವವರೆಗೆ ಗುಂಡಣ್ಣ ಉಸಿರೆತ್ತಲಿಲ್ಲ. ಒಂದು ದಿನ ಸಂಜೆ ವಿಶ್ವೇಶ್ವರಯ್ಯನ ಜತೆ ಬಂದು, ಬಲವಂತದಿಂದ ಮೂರ್ತಿಯನ್ನು ಲಾಲ್‌ಬಾಗಿಗೆ ಎಳೆದೊಯ್ದ.

ಲಾಲ್‌ಬಾಗ್ ರೆಸ್ಟುರಾದಲ್ಲಿ ಕಾಫಿ, ತಿಂಡಿ ಮುಗಿಸಿದ ಗೆಳೆಯರು 'ಕೆಂಪೇಗೌಡನ ಗೋಪುರ' ದ ಬಳಿಯಿದ್ದ ಬಂಡೆಯ ಮೇಲೆ ಕುಳಿತರು.

ಲೋಕಾಭಿರಾಮವಾಗಿ ಹೊರಟ ಮಾತು ಸುತ್ತಿ ಸುಳಿದು ಕೊನೆಗೆ ಪುಸ್ತಕಪ್ರಪಂಚಕ್ಕೆ ಬಂದು ನಿಂತಿತು. ವಿಶ್ವೇಶ್ವರಯ್ಯ ಸಣ್ಣದನಿಯಲ್ಲಿ

"ಹುನಗುಂದನ 'ಪೇಜಿನಪೇದೆ' ಪ್ರಕಟವಾಯಿತು, ನೋಡಿದಿರಾ ಸಾರ್" ಎಂದು ಕೇಳಿದ.

"ಹೊರಬಿತ್ತೇ? ಹೇಗಿದೆ?"

"ಅರ್ಥ ಓದಿದೆ—ಸಾಕಾಯ್ತು. ಅವನ ಭಾಷೆಯಲ್ಲೇ ಬನಿಯಿಲ್ಲ ಸಾರ್—ಏನೋ ತುಂಡು ತುಂಡು, ಹರಕುಮುರಕು."

"ಆ ವಸ್ತು ಹುನಗುಂದನಿಗೆ ಸುಪರಿಚಿತವಾದದ್ದು, ಅದರ ಬಗ್ಗೆ ಹುನಗುಂದ ಚೆನ್ನಾಗಿ ಬರೆಯಬಹುದೆಂದು ನಾನು ನಿರೀಕ್ಷಿಸಿದ್ದೆ."

"ವಸ್ತು ಚೆನ್ನಾಗಿಯೇ ಇರುತ್ತದೆ—ಬರೆಯುವ ಯೋಗ್ಯತೆ ಇರಬೇಕಲ್ಲ."

"ಈಚೆಗೆ ನಿನ್ನ ಶಿಷ್ಯ ಸುತರಾಮಯ್ಯ ಬರಲಿಲ್ಲವೇ ಮೂರ್ತಿ"

ಎಂದು ಗುಂಡಣ್ಣ ಕೇಳಿದ.

"ಇಲ್ಲಪ್ಪಾ—ನನ್ನ ಮೇಲೆ ಆತನಿಗೇನು ಅಸಮಾಧಾನವಾಯಿತೋ ?"

"ಹೇಳುವುದು ಮರೆತಿದ್ದೆ ಸಾರ್—'ಪೇಜಿನಪೇದೆ' ಯಲ್ಲಿ ಪ್ರಕಟಣೆ ಬಂದಿದೆ—'ಜನಪದ ಸಾಹಿತ್ಯ' ಸುತರಾಮಯ್ಯನ 'ತಾರಾಪಥ' ಪ್ರಕಟಿಸುವುದಂತೆ !"

"ಓಹೋ ! ಇವನೂ ಹುನಗುಂದನ ಗುಂಪು ಸೇರಿದನೋ ?"

ಎಂದು ವಿಶ್ವೇಶ್ವರಯ್ಯ ಟೀಕಿಸಿದ.

"ಸಮಾನ ಧರ್ಮ, ಸಮಾನ ಅಸೆ, ಸಮಾನ ಅಭಿರುಚಿ ಇರುವವರು ಒಂದೆಡೆ ಸೇರುವುದು ಸ್ವಾಭಾವಿಕವಷ್ಟೆ !"

ಎಂದು ಮೂರ್ತಿ ಖಾಜಿ ನ್ಯಾಯ ಮಾಡಲೆತ್ನಿಸಿದ.

"ನೀನು ಪುನಃ ಸುತರಾಮಯ್ಯನ್ನ ಮನೆಸೇರಿಸಿದರೆ ನಾನು ಸುಮ್ಮನಿರುವುದಿಲ್ಲ ಮೂರ್ತಿ."

"ಏಕೆ ಗುಂಡಾ, ಆತ ನನಗೇನೂ ದ್ರೋಹ ಮಾಡಿಲ್ಲವಲ್ಲಾ !"

"ಇದಕ್ಕಿಂತ ದ್ರೋಹ ಬೇಕೆ ? ಅವನನ್ನು ಒಬ್ಬ ಸಾಹಿತಿ ಮಾಡಿದವನು ನೀನು—ಜನಪದ ಸಾಹಿತ್ಯಕ್ಕೆ ಪುಸ್ತಕ ಕೊಡುವುದಕ್ಕೆ ಮುಂಚೆ ನಿನಗೊಂದು ಮಾತು ಹೇಳಿದನೇನಯ್ಯಾ ?"

"ನನಗೇಕೆ ಹೇಳಬೇಕು. ಯಾವಜ್ಜೀವವೂ ಆತ ನನ್ನನ್ನೇ ಅನುವರ್ತಿಸಿಕೊಂಡಿರಬೇಕೇ ?"

"ನೀನು ಬಲು ಮೊಂಡು ವಾದ ಮಾಡುತ್ತೀ ಮೂರ್ತಿ."

"ಹೋಗಲಿ ಬಿಡು—ಸುತರಾಮಯ್ಯನ ಮಾತಿಗೆ ನೀನೂ ನಾನೂ ಏಕೆ ಜಗಳ ಕಾಯಬೇಕು."

"ಮೂರ್ತಿ, ನಾನೂ ವಿಶ್ವೇಶ್ವರಯ್ಯ ನಿನ್ನನ್ನಿಲ್ಲಿ ಎಳೆದುಕೊಂಡು ಬಂದಿರುವ ಉದ್ದೇಶ ನಿನಗೆ ಗೊತ್ತೋ ?"

"ಇಲ್ಲ."

"ನಿನ್ನನ್ನು ಬಯ್ಯುವುದಕ್ಕೆ"

"ಆಗಬಹುದು—ಮನೆಯಲ್ಲಿಯೇ ಬಯ್ಯಬಹುದಾಗಿತ್ತು."

"ಲಲಿತಕ್ಕನೆದುರಿಗೆ ನಿನ್ನ ಮಾನ ಕಳೆಯಬಾರದೆಂದು ಹೀಗೆ ಮಾಡಿದೆವು."

"ನಿಮ್ಮ ದೂರಾಲೋಚನೆ ಅಭಿನಂದನೀಯವಾದದ್ದು."

"ಹಾಸ್ಯವಲ್ಲ ಮೂರ್ತಿ—ಮನಸ್ಸಿಟ್ಟು ಕೇಳು."

"ಸಿದ್ಧವಾಗಿದ್ದೇನೆ."

"ನಿನ್ನ ಆರೋಗ್ಯ ಸ್ವಲ್ಪವೂ ಚೆನ್ನಾಗಿಲ್ಲ—ದಿನದಿನಕ್ಕೆ ನಿನ್ನ ಮುಖ ಬಿಳಿಚಿಕೊಳ್ಳುತ್ತಿದೆ—ಮೈಯಲ್ಲಿನ ರಕ್ತ ಒಣಗುತ್ತಿದೆ."

"........................"

"ಹೀಗೆ ಆರೋಗ್ಯ ದುರ್ಲಕ್ಷಿಸಬಾರದು."

"........................"

"ಲಲಿತಕ್ಕ ಒಳಗೇ ಕೊರಗುತ್ತಿದ್ದಾರೆ."

ಮೂರ್ತಿ ಕ್ಷಣಕಾಲ ಗಂಭೀರವಾಗಿ ಕುಳಿತು

"ಗುಂಡಾ, ವಿಶ್ವೇಶ್ವರಯ್ಯ—ನೀವೇ ಇಬ್ಬರು ನನ್ನ ಆತ್ಮೀಯರು. ಲೋಕ ನನ್ನನ್ನು ನೋಡುವುದು ಸಾಹಿತಿಯಂತೆ—ಅದಕ್ಕೆ ನನ್ನ ಆರೋಗ್ಯ, ಹಸಿವು, ದುಃಖದ ಚಿಂತೆಯಿಲ್ಲ. ಆ ಚಿಂತೆಗಳನ್ನೆಲ್ಲಾ ಹಚ್ಚಿಕೊಂಡು, ನಾನು ಸುಖವಾಗಿರಲೆಂದು ಹಾರೈಸುವವರು ನೀವಿಬ್ಬರೇ—ನಿಮ್ಮಲ್ಲಿ ಈಗ ನಾನು ಹೇಳುವ ರಹಸ್ಯವನ್ನು ದಯೆಯಿಟ್ಟು ಲಲಿತನ ಕಿವಿಗಳ ಮೇಲೆ ಹಾಕಬೇಡಿ—ನೀವು ಮಾತು ಕೊಡುವುದಾದರೆ ಹೇಳುತ್ತೇನೆ."

"ಹಾಗೇ ಆಗಲಿ—ಹೇಳಯ್ಯಾ."

"ನೀನು ಹೇಳಿದಂತೆ ನನ್ನ ಆರೋಗ್ಯ ಚೆನ್ನಾಗಿಲ್ಲ, ಈಚೆಗಂತೂ ಅನ್ನ ಸೇರುವುದಿಲ್ಲ—ನಿದ್ರೆ ಬರುವುದಿಲ್ಲ. ಎದೆ ಸಹಾ ನೋಯುತ್ತಿರುತ್ತದೆ. ರಾತ್ರಿ

ನೋವು ಉಲ್ಬಣವಾಗುತ್ತದೆ. ಗಟ್ಟಿಯಾಗಿ ನರಳಿದರೆ ಎಲ್ಲಿ ಲಲಿತನಿಗೆ ಎಚ್ಚರವಾಗುವುದೋ ಎಂದು ಉಸಿರು ಹಿಡಿಯುತ್ತೇನೆ—ನನ್ನ ಆಯುಷ್ಯ...."

ಮೂರ್ತಿ ಮಾತು ಮುಗಿಸಲು ಅವಕಾಶಕೊಡದೆ ಗುಂಡಣ್ಣ

"ದಯೆಯಿಟ್ಟು ಕೆಟ್ಟ ಮಾತಾಡಬೇಡ" ಎಂದ.

"ಇನ್ನು ನೀವು ಆರೋಗ್ಯ ಅಲಕ್ಷಿಸಲು ಸಾಧ್ಯವಿಲ್ಲ ಸಾರ್"

ಎಂದು ವಿಶ್ವೇಶ್ವರಯ್ಯ ದನಿಗೂಡಿಸಿದ.

"ನಿನ್ನ ಕರಾರಿಗೆ ನಾನು ಒಪ್ಪಿದಂತೆ ನನ್ನ ಕರಾರಿಗೂ ನೀನು ಒಪ್ಪಬೇಕು ಮೂರ್ತಿ."

"ಏನು ನಿನ್ನ ಕರಾರು ?"

"ನಾಳೆಯೇ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಿನ್ನ ಹೃದಯ ಪರೀಕ್ಷೆ ಮಾಡಿಸಬೇಕು. ಡಾಕ್ಟರು ವಿಧಿಸುವ ಚಿಕಿತ್ಸೆ ಕ್ರಮವಾಗಿ ಕೈಗೊಳ್ಳಬೇಕು. ಇದಕ್ಕೆ ನೀನು ಒಪ್ಪುವುದಾದರೆ ಲಲಿತಕ್ಕನ ಹತ್ತಿರ ನಾನು ಬಾಯಿಬಿಡುವುದಿಲ್ಲ."

"ಚಿಕಿತ್ಸೆ ಆರಂಭಿಸಿದರೆ ಅವಳಿಗೆ ಗೊತ್ತಾಗಿಯೇ ಆಗುತ್ತದೆ."

"ಅವರಿಗೆ ಗೊತ್ತಾಗದಂತೆ ಸುಳ್ಳಿನಮಾಲೆ ನೇಯಲು ನಾನು ಸಿದ್ಧನಾಗಿದ್ದೇನೆ."

"ನಿಮಗೆ ಬೇಕಾಗಿರುವುದು ಚಿಕಿತ್ಸೆಯಲ್ಲ ಸಾರ್ ವಿಶ್ರಾಂತಿ. ಈ ವಾತಾವರಣ ಬಿಟ್ಟು ನೀವು ಕೆಲಕಾಲ ಹೊರಗೆಹೋಗಿ ಬರಬೇಕು. ಸಮುದ್ರ ತೀರದ ಹವ ನಿಮಗೆ ತುಂಬ ಅನುಕೂಲಮಾಡುತ್ತದೆಂದು ನನ್ನ ಅಭಿಪ್ರಾಯ."

"ಡಾಕ್ಟರ್ ಪರೀಕ್ಷೆಯಾಗಿಬಿಟ್ಟರೆ ನಮ್ಮ ಮನಸ್ಸೂ ಹಗುರವಾಗುತ್ತದೆ–ಮುಂದೇನು ಮಾಡುವುದೆಂಬುದನ್ನು ಸಾವಕಾಶವಾಗಿ ಆಲೋಚಿಸೋಣ"

ಎಂದು ಗುಂಡಣ್ಣ ಸೂಚಿಸಿದ.

ಮೂರ್ತಿಯನ್ನು ಮನೆಯಲ್ಲಿ ಬಿಟ್ಟು ಗುಂಡಣ್ಣ, ವಿಶ್ವೇಶ್ವರಯ್ಯ ತಮ್ಮ ಮನೆಗಳಿಗೆ ತೆರಳಿದರು.

ಬೆಳಗಾಗುವುದನ್ನೇ ಕಾಯುತ್ತಿದ್ದ ಗುಂಡಣ್ಣ, ವಿಶ್ವೇಶ್ವರಯ್ಯನನ್ನು ಕರೆದುಕೊಂಡು ಎಂಟುಗಂಟೆಗೇ ಮೂರ್ತಿಯಮನೆಗೆ ಬಂದ. ಸುಖನಿದ್ರೆಯಲ್ಲಿ ಪವಡಿಸಿದ್ದ ಮೂರ್ತಿಯನ್ನು ಗುಂಡಣ್ಣನೇ ಎಬ್ಬಿಸಿ, ಹೊರಗೆ ಹೊರಡಿಸಿದ

ಹೃದ್ರೋಗಚಿಕಿತ್ಸಾ ಪ್ರವೀಣರೂ, ಹೃದಯಜೀವಿಗಳೂ ಆದ ಡಾ. ವೆಂಕಟಸುಬ್ಬರಾಯರು ಮೂರ್ತಿಯ ಹೃದಯದ ಚಲನವಲನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. 'ತಾಯಿದೇವಿ—ಹೆಣ್ಣಿನ ಹೋರಾಟ—ಕೆಸರಿನ ಕಮಲ' ಇತ್ಯಾದಿ ಕಾದಂಬರಿಗಳ ಕರ್ತೃವೇ ತಮ್ಮ ರೋಗಿಯೆಂದು ಡಾಕ್ಟರು ಅರಿತಮೇಲೆ ಕಳಕಳಿಯಿಂದ

"ನಮ್ಮ ಹೃದಯ ಕರಗಿಸಿ ಕರಗಿಸಿ ನಿಮ್ಮ ಹೃದಯ ದುರ್ಬಲವಾಗಿದೆ ಸರ್—ತಾಯಿದೇವಿಯಂಥ ನೂರಾರು ಕೃತಿಗಳು ನಿಮ್ಮಿಂದ ಬರಬೇಕು. ಆರೋಗ್ಯದ ಕಡೆ ಸ್ವಲ್ಪ ಲಕ್ಷ್ಯವಿಡಿ."

"ಭಯಕ್ಕೆ ಕಾರಣವಿದೆಯೇ ಡಾಕ್ಟರೇ"

ಎಂದು ಅಂಜುತ್ತಂಜುತ್ತ ಗುಂಡಣ್ಣ ಕೇಳಿದ.

"ಈಗಲೇ ಚಿಕಿತ್ಸೆ ಆರಂಭಿಸಿದರೆ ಸ್ವಲ್ಪವೂ ಭಯವಿಲ್ಲ. ಕಾಡ್‌ಲಿವರ್ ಆಯಿಲ್ ತೆಗೆದುಕೊಳ್ಳಿ—ನಾನು ಕೆಲವು ಇಂಜಕ್ಷನ್‌ಗಳನ್ನು ಕೊಡುತ್ತೇನೆ-ನಿಮಗೆ ಪೌಷ್ಠಿಕ ಆಹಾರ ಬೇಕು, ವಿಶ್ರಾಂತಿ ಬೇಕು. ಬೆಳಿಗ್ಗೆ ಹಾಲಿನಲ್ಲಿ ಮೊಟ್ಟೆ ತೆಗೆದುಕೊಳ್ಳಿ."

"ನಾನು ಶುದ್ಧ ಶಾಕಾಹಾರಿ--ಮೊಟ್ಟೆಯೂ ನನಗೆ ಸೇರುವುದಿಲ್ಲ."

"ಬೆಳಿಗ್ಗೆ-ರಾತ್ರಿ ತಪ್ಪದೆ ಹಾಲುಕುಡಿಯಿರಿ. ಎರಡು ವಾರ ಕಳೆದ ಮೇಲೆ ಮತ್ತೆ ಪರೀಕ್ಷಿಸಿ ನೋಡುತ್ತೇನೆ. ಇಂಜಕ್ಷನ್‌ಗಳು ಮುಗಿದ ಮೇಲೆ ಹವಾಬದಲಾವಣೆಗೆ ಎಲ್ಲಿಗಾದರೂ ಹೋಗಿ ಬನ್ನಿ-ಸಮುದ್ರತೀರವಾದರೆ ಮತ್ತೂ ಒಳ್ಳೆಯದು"

ಎಂದು ಹೇಳಿ ಒಂದು ಇಂಜಕ್ಷನ್ ಚುಚ್ಚಿದರು.

ಡಾಕ್ಟರ್ ಅಪ್ಪಣೆಪಡೆದು ಹೊರಟ ಗೆಳೆಯರು ನೇರವಾಗಿ ಔಷಧದ ಅಂಗಡಿಗೆ ಬಂದು ಕಾಡ್‌ಲಿವರ್ ಆಯಿಲ್ ಕೊಂಡು, ಮೂರ್ತಿಯ ಮನೆಗೆ ಬಂದರು.

ಹೃದ್ರೋಗದ ವಿಷಯ ತಿಳಿಸದೆ ಗುಂಡಣ್ಣ ಲಲಿತಮ್ಮನಿಗೆ ಮೂರ್ತಿಯ ಆರೋಗ್ಯದ ವಿಷಯ ಸೂಚಿಸಿ

"ಅವನು ಬೇಡವೆಂದರೂ ನೀವು ಕೇಳಬೇಡಿಯಮ್ಮ. ಗೊಟಕದಲ್ಲಿ

ಹಾಕಿ ಅವನ ಗಂಟಲಲ್ಲಿ ಕಾಡ್‌ಲಿವರ್ ಆಯಿಲ್ ಸುರಿಯಿರಿ. ಬೆಳಿಗ್ಗೆ ರಾತ್ರಿ ತಪ್ಪದೆ ಹಾಲುಕುಡಿಸಿ."

"ನಾನು ಹಾಲುತೆಗೆದುಕೊಂಡು ಹೋದರೆ ಇವರ ಮುಖಮಾಡುತ್ತಾರೆ-ಆಗ ನೀವಿರಬೇಕು ಗುಂಡಣ್ಣ."

"ಸಣ್ಣಮಕ್ಕಳನ್ನು ಹೇಗಾದರೂ ಸುಧಾರಿಸಬಹುದು–ಈ ಬಲಿತಮಕ್ಕಳನ್ನು ಸುಧಾರಿಸುವುದು ಬಲುಕಷ್ಟ."

"ಡಾಕ್ಟರು ಇನ್ನೇನು ಹೇಳಿದರು."

"ಏನೂ ಇಲ್ಲ—ಪೌಷ್ಟಿಕ ಆಹಾರ, ವಿಶ್ರಾಂತಿ ಬೇಕೆಂದರು."

"ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಇವರು ಒಪ್ಪಿದರೇ ?"

"ಇವನು ಏಕೆ ಒಪ್ಪುತ್ತಾನಮ್ಮ."

"ಡಾಕ್ಟರು ಇನ್ನೇನು ಹೇಳಲಿಲ್ಲವೇ ?"

"ನಿಮ್ಮಲ್ಲಿ ನಾನು ಸುಳ್ಳು ಹೇಳುತ್ತೇನೆಯೇ ಲಲಿತಕ್ಕ–ಶಕ್ತಿ ಬರುವುದಕ್ಕೆ ಕೆಲವು ಇಂಜಕ್ಷನ್ ಕೊಡುವುದಾಗಿ ಹೇಳಿ ಇವತ್ತೇ ಒಂದು ಇಂಜಕ್ಷನ್ ಕೊಟ್ಟರು."

"ಹೀಗೆಂದು ನೀವು ಹೇಳಿದ್ದರೆ ನಾನೂ ಆಸ್ಪತ್ರೆಗೆ ಬರುತ್ತಿದ್ದೆನಲ್ಲಾ !"

"ನೀವು ಬರಬಾರದೆಂತಲೇ ನಾವು ಹೇಳಲಿಲ್ಲ."

ಗುಂಡಣ್ಣ, ವಿಶ್ವೇಶ್ವರಯ್ಯ ಹೋಗುವುದನ್ನೇ ಕಾದಿದ್ದ ಲಲಿತ, ಮೂರ್ತಿಯ ಕುತ್ತಿಗೆಯಪ್ಪಿ ಗಟ್ಟಿಯಾಗಿ ರೋಧಿಸಲುಪಕ್ರಮಿಸಿದಳು. ಮೂರ್ತಿ ಸಮಾಧಾನಪಡಿಸುತ್ತಾ

"ಏಕೆ ಲಲಿತಾ–ಏನಾಯಿತು ?"

"ದೊರೆ–ನನಗೆ ಮೋಸಮಾಡುವಿರಾ ?"

"ಅದು ನನ್ನಿಂದ ಸಾಧ್ಯವೇ ?"

"ಇಷ್ಟು ಕಾಹಿಲೆಯಿದ್ದೂ ನನಗೇಕೆ ಹೇಳಲಿಲ್ಲ."

"ನಿಜವಾಗಿ ನನಗೇನೂ ಆಗಿಲ್ಲ ಲಲಿತಾ. ಆಯಾಸವಾಗಿದೆ–ಸ್ವಲ್ಪ ವಿಶ್ರಾಂತಿ ತೆಗೆದುಕೊಂಡರೆ ಸರಿಹೋಗುತ್ತದೆ."

"ನಿಮ್ಮ ಆರೋಗ್ಯ ಸಂಪೂರ್ಣ ಸುಧಾರಿಸುವವರೆಗೆ ನೀವು ಲೇಖನಿ ಹಿಡಿಯಕೂಡದು."

"ವಿಮರ್ಶಾಗ್ರಂಥವನ್ನು ಅರ್ಧಾಂತಿಕವಾಗಿ ಕೈಬಿಡಲೇ ?"

"ನಾಲ್ಕುವಾರ ತಡವಾದರೇನು ?"

"ಇದನ್ನು ಮುಗಿಸಿಬಿಡುತ್ತೇನೆ ತಡಿ–ಅಮೇಲೆ ಇಬ್ಬರೂ ಒಂದೆರಡು ವಾರ ಎಲ್ಲಿಗಾದರೂ ಹೋಗಿ ಬರೋಣ. ಸಮುದ್ರತೀರ ಒಳ್ಳೆಯದೆಂದು ಡಾಕ್ಟರೂ ಹೇಳಿದ್ದಾರೆ. ಮೇಥಾ, ಸರ್ದಾರ್, ಆಯಿ, ವೀಣಾ ಎಲ್ಲರನ್ನೂ ನೋಡಿ ಬಹಳ ದಿನಗಳಾದವು."

"ಈ ಮಾತು ದಿಟವೇ ?"

"ದಿಟ."

"ನಾನು ಮೇಥಾಜಿಗೆ ಕಾಗದ ಬರೆಯಲೇ ?"

"ಅಗತ್ಯವಾಗಿ ಬರಿ––"

"ಮುಂಬಯಿ ಪ್ರವಾಸ ಮುಗಿಸಿಕೊಂಡು ಬರುವವರೆಗೆ ನೀವು ಯಾವ ಹೊಸ ಕೃತಿಯನ್ನೂ ಆರಂಭಿಸಕೂಡದು."

"ಆರಂಭಿಸುವುದಿಲ್ಲ."

"ನಾಳೆಯೂ ನೀವು ಇಂಜಕ್ಷನ್ನಿಗೆ ಹೋಗಬೇಕಲ್ಲವೇ ?"

"ಹೋಗಬೇಕು."

"ನಾನೂ ಬರುತ್ತೇನೆ."

"ನೀನೇಕೆ ಬರಬೇಕು–ಗುಂಡಣ್ಣ, ವಿಶ್ವೇಶ್ವರಯ್ಯ ಬರುತ್ತಾರಲ್ಲಾ."

"ಅವರೂ ಬರಲಿ–ನಾನೂ ಬರುತ್ತೇನೆ. ಡಾಕ್ಟರನ್ನು ಕೇಳಿದ ಹೊರತೂ ನನ್ನ ಮನಸ್ಸಿಗೆ ಸಮಾಧಾನವಿಲ್ಲ."

"ನನ್ನ ಮಾತಿನಲ್ಲಿ ನಂಬಿಕೆಯಿಲ್ಲವೇ ?"

"ಈ ವಿಷಯದಲ್ಲಿ ನಂಬಿಕೆಯಿಲ್ಲ."

"ಎಂಥಾ ಮೊಂಡೇ ನೀನು !!"

"ಮೊಂಡರ ಕೈಹಿಡಿದ ಮೇಲೆ ಮೊಂಡಾಗಲೇ ಬೇಕು."

ಎಂದು ನಕ್ಕಳು––

ಮೂರ್ತಿಯೂ ನಕ್ಕ–ಎದೆ ನೋಯುತ್ತಿದ್ದುದನ್ನೂ ತೋರಿಸಿಕೊಳ್ಳದೆ.

೧೬

ಮೂರ್ತಿಯ ಇಂಜಕ್ಷನ್ ಕೋರ್ಸ್ ಮುಗಿದಿತ್ತು. ದೇಹಾರೋಗ್ಯದಲ್ಲಿ ಗಮನಾರ್ಹವಾದ ಸುಧಾರಣೆ ಕಾಣಬರದಿದ್ದರೂ ಎದೆನೋವು ಸ್ವಲ್ಪ ಕಡಿಮೆಯಾಗಿತ್ತು. ರಾತ್ರಿ ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುತ್ತಿದ್ದ ಚುಚ್ಚುನೋವು ಸಂಪೂರ್ಣವಾಗಿ ನಿಂತುಹೋಗಿತ್ತು.

ಆ ಸ್ಥಿತಿಯಲ್ಲಿಯೂ ಮೂರ್ತಿ ತನ್ನ ಬರವಣಿಗೆ ನಿಲ್ಲಿಸಲಿಲ್ಲ. ಅವನ ಅವಿಶ್ರಾಂತಶ್ರಮದ ಫಲವಾಗಿ 'ಸಾಹಿತ್ಯ ವಿಮರ್ಶೆ' ಮುಗಿದಿತ್ತು. ಹಸ್ತಪ್ರತಿಯನ್ನು ಮೂರ್ತಿ ಒಮ್ಮೆ ಪರಿಶೀಲಿಸಿನೋಡಿ ವಿಶ್ವೇಶ್ವರಯ್ಯನ ಕೈಯಲ್ಲಿಟ್ಟ.

ಮುಂಬಯಿ ಪ್ರಯಾಣದ ಬಗ್ಗೆ ಗುಂಡಣ್ಣ, ವಿಶ್ವೇಶ್ವರಯ್ಯ ಇಬ್ಬರೂ 'ವರಾತ' ಹಚ್ಚಲಾರಂಭಿಸಿದರು. ಮೂರ್ತಿ ಬೇಸರದಿಂದ

"ನನ್ನ ಈ ಊರು ಬಿಟ್ಟು ಸಾಗಿಸುವವರೆಗೆ ನಿಮಗೆ ತೃಪ್ತಿಯಿಲ್ಲ" ಎಂದ.

"ನೀನು ಬಯ್ದುಕೊಂಡರೂ ಸರಿ–ಈಗ ಊರು ಬಿಟ್ಟು ಹೋಗಲೇಬೇಕಯ್ಯಾ"

ಎಂದು ಗುಂಡಣ್ಣ ಹಟಹಿಡಿದ.

"ಒಂದೊಂದು ಸಲ ನೀನು ಶುದ್ಧ ಹುಡುಗನ ಹಾಗೆ ಆಡುತ್ತೀ ಕಣೋ ಗುಂಡಾ !"

"ಏಕಪ್ಪಾ ?"

"ಮುಂಬಯಿಯಾತ್ರೆಗೆ ಅಲ್ಪಸ್ವಲ್ಪ ಹಣಬೇಕೆಂದು ಭಾವಿಸಿರುವೆಯಾ ?"

"ನಿನಗೇನಯ್ಯಾ ಕಡಿಮೆ–ಕನ್ನಡನಾಡಿನ ಬೆಸ್ಟ್–ಸೆಲ್ಲರ್ (Best seller) ನೀನು."

"ನಿಜ–ಹೆಸರು ಕ್ಷೀರಸಾಗರಭಟ್ಟ—ಕುಡಿಯೋನೀರಿಗೆ ಅಭಾವ."

"ಹಣ ಎಷ್ಟು ಬೇಕಾಗಬಹುದು ಸಾರ್"

ಎಂದು ವಿಶ್ವೇಶ್ವರಯ್ಯ ಕೇಳಿದ.

"ನಿಮ್ಮನ್ನೇ ಮತ್ತೆ ಸುಲಿಯಲೇ ವಿಶ್ವೇಶ್ವರಯ್ಯ."

"ಇದೆಂಥ ಸುಲಿಗೆ ಸಾರ್–ಮೈಮುರಿಯ ನೀವು ದುಡಿದಿಲ್ಲವೇ ?"

"'ತಾಯಿದೇವಿ'ಯ ರಾಯಲ್ಟಿ (Royalty) ಎಲ್ಲಾ ಕೊಟ್ಟಿದ್ದೀರಲ್ಲಪ್ಪಾ."

"ಚಿಂತೆಯಿಲ್ಲ ಸಾರ್. ಅಡ್ವಾನ್ಸ್ ಕೊಡಲು ನನ್ನಲ್ಲಿ ಹಣವಿದೆ. 'ತಾಯಿದೇವಿ' ಪ್ರಕಟಿಸಿ ನಾಲ್ಕುಕಾಸು ಲಾಭಮಾಡಿಕೊಂಡಿದ್ದೇನೆ. ಮುಂದಿನ ತಿಂಗಳು ಎರಡನೆಯ ಮುದ್ರಣವನ್ನೂ ಪ್ರಕಟಿಸುತ್ತೇನೆ."

"ನಿಮಗೆ ಎಷ್ಟು ಸಾಧ್ಯವೋ ಅಷ್ಟು ಕೊಡಿ."

"ಐದುನೂರು ರೂಪಾಯಿ ಕೊಡಲೇ ? ಮುಂಬಯಿಯಲ್ಲಿ ಹಣಬೇಕಾದರೆ ಬರೆಯಿರಿ ಕಳಿಸಿಕೊಡುತ್ತೇನೆ."

"ಅಲ್ಲಿ ನನಗೆ ಯಾವ ಖರ್ಚೂ ಇರುವುದಿಲ್ಲ ವಿಶ್ವೇಶ್ವರಯ್ಯ. ಒಂದು ಪ್ಯಾಕ್ ಸಿಗರೇಟಿಗೆ ನಾನು ಖರ್ಚುಮಾಡಿದರೂ ಮೇಥಾ ಕೋಪಿಸಿಕೊಳ್ಳುತ್ತಾನೆ."

"ಮುಂಬಯಿಯಲ್ಲಿ ನನಗೊಂದು ಕೆಲಸವಾಗಬೇಕಲ್ಲ ಸಾರ್."

"ಹೇಳಿ. ಅವಶ್ಯಕವಾಗಿ ಮಾಡಿಕೊಂಡು ಬರುತ್ತೇನೆ."

"ಈಚೆಗೆ ಹೊಸದಾಗಿ ಚೆಕೋಸ್ಲೋವಾಕಿಯಾದಿಂದ ಸಿಲೆಂಡರ್ ಮೆಷೀನ್‌ಗಳು ಬಂದಿವೆಯಂತೆ. ವಿಚಾರಿಸಿ ಬರೆಯಿರಿ."

"ಕೊನೆಗೂ ಸಿಲೆಂಡರ್ ಬದಲಾಯಿಸಲು ನಿಶ್ಚಯಿಸಿದಿರಿ !"

"ನಿಮ್ಮ ಮುಂದಿನ ಕಾದಂಬರಿಯನ್ನು ನನ್ನ ಹೊಸ ಮೆಷೀನ್ ಮೇಲೇ ಅಚ್ಚುಹಾಕಬೇಕೆಂದಿದ್ದೇನೆ."

"ನಿಮ್ಮ ಅಂದಾಜೂ ಹೇಳಿಬಿಡಿ."

"ಡಬ್ಬಲ್ ಕ್ರೌನ್ ಸೈಜು. ಬೆಲೆ ಹತ್ತು ಸಾವಿರದವರೆಗೆ ಹೋದರೂ ಪರವಾಗಿಲ್ಲ. ಮೆಷೀನ್ ಕೈಸೇರಿದ ಕೂಡಲೇ ಅರ್ಧ ಹಣಕೊಡುತ್ತೇನೆ. ಉಳಿದರ್ಧ ಹಣವನ್ನು ಕಂಪೆನಿಯವರು ಐದು ತಿಂಗಳ ಕಂತುಗಳಲ್ಲಿ ತೆಗೆದುಕೊಳ್ಳಲೊಪ್ಪಬೇಕು".

"ನನ್ನ ಮಿತ್ರರು ಸ್ನಾನಾ, ದಾಮ್ಲೆ ನಿಮಗನುಕೂಲವಾಗುವ ವ್ಯವಸ್ಥೆ ಮಾಡಿಕೊಡುತ್ತಾರೆ. ಯಂತ್ರ ಕಳಿಸುವ ಏರ್ಪಾಟುಮಾಡುತ್ತೇನೆ."

"ವಿಶ್ರಾಂತಿಗೆ ಹೋಗುವವರಿಗೆ ಕೆಲಸ ಅಂಟಿಸುತ್ತಿದ್ದೇನೆ."

"ಇದೂ ನನ್ನ ಕೆಲಸವೇ ತಾನೆ !" ಎಂದ.

ಹಣದ ಅಡಚಣೆಯೂ ಹೋದ ಮೇಲೆ ಮೂರ್ತಿಯ ಪ್ರಯಾಣ ಖಚಿತವಾಯಿತು.

ಆ ಸುದ್ದಿ ಕೇಳಿದ ಲಲಿತಮ್ಮ ಹಿಗ್ಗಿಹೋದಳು. ನಿರ್ಮಲನನ್ನೂ ಕರೆದುಕೊಂಡು ಬರುವ ವಿಷಯ ಸೇಲೀನಳಿಗೆ ತಿಳಿಸಿ ಕೂಡಲೆ ಕಾಗದ ಬರೆದಳು.

ಮೂರ್ತಿ, ಲಲಿತಮ್ಮನೊಂದಿಗೆ ಮುಂಬಯಿಗೆ ಹೊರಟದ್ದ ನಿರ್ಮಲನಿಗೆ ಔತಣಮಾಡಲು ಅ ಭ ಯಾ ಶ್ರ ಮ ವಾ ಸಿ ಗ ಳು ನಿ ಶ್ಚ ಯಿ ಸಿ ದ ರು. ಜ್ವಾ ಲಾ ಮಾ ಲಿ ನಿ ಯೇ ಮುಂದಾಳಾಗಿ ನಿಂತಳು. ಸುಂದರಮ್ಮನವರು ಜ್ವಾಲಾಮಾಲಿನಿಗೆ ಸರ್ವಾಧಿಕಾರವಹಿಸಿ 'ಬೇಕಾದ್ದು ಮಾಡು' ಎಂದರು. ವೀರಮ್ಮ, ಊರ್ಮಿಳಾ, ಕೌಸಲ್ಯ, ಸುಮಿತ್ರ ಇವರ ಉತ್ಸಾಹ ಹೇಳತೀರದಾಯಿತು.

ಸುಮಿತ್ರ, ನಿರ್ಮಲನ ತೊಡೆಯೇರಿ ಕುಳಿತು

"ಯಾವಾಗ ಬರುತ್ತೀ ನಿರ್ಮಲಕ್ಕ" ಎಂದು ಕೇಳಿದಳು.

"ಲಲಿತಕ್ಕ ಯಾವಾಗ ಕರೆದುಕೊಂಡು ಬರುತ್ತಾರೆ ಆಗ ಬರುತ್ತೇನೆ."

"ತುಂಬ ದಿನವಾಗುತ್ತದೇನೋ ?"

"ಇಲ್ಲ ನನ್ನ ಚಿನ್ನ—ಒಂದೆರಡು ವಾರದಲ್ಲಿ ಬರುತ್ತೇವೆ."

"ನಿರ್ಮಲಕ್ಕ—ಬೊಂಬಾಯಿ ನಿನ್ನ ಊರೇ ?"

"ಹೌದು—ನಿನಗೆ ಯಾರು ಹೇಳಿದರು."

"ಮ್ಯಾಡಾಂ ಹೇಳಿದರು—ನಿನ್ನ ಊರಿಗೆ ಹೋದ ಮೇಲೆ ಇಲ್ಲೇಕೆ ಬರುತ್ತೀಯಕ್ಕ—ನಾನು ಅಳದಿರಲಿ ಎಂತಾ ಸುಳ್ಳು ಹೇಳುತ್ತಾ ಇದ್ದೀ."

"ಬೊಂಬಾಯಿ ನನ್ನ ಊರಾದರೂ ಅಲ್ಲಿ ನನಗೆ ಯಾರೂ ಇಲ್ಲ ಸುಮ್ಮಿ."

"ಇಲ್ಲಿ ?"

"ನೀನು— ಜ್ವಾಲಾ—ವೀರಮ್ಮ—ಊರ್ಮಿ–ಕೌಸಲ್ಯ–ಮ್ಯಾಡಾಂ—ಲಲಿತಕ್ಕ—ಮೂರ್ತಿ ಅಣ್ಣನವರು ಎಲ್ಲಾರೂ ಇದ್ದೀರಿ."

"ನಮ್ಮನ್ನು ಮರೆಯುವುದಿಲ್ಲವೇ ?"

"ಹೇಗೆ ಮರೆಯಲಿ ನನ್ನ ಕಂದ. ನಿಮ್ಮ ಪ್ರೀತಿಯಿಂದಲ್ಲವೇ ನಾನು ಬದುಕಿರುವುದು."

"ಏಕಕ್ಕ ಅಳುತ್ತಿರುವೆ ?"

"ನಿನ್ನನ್ನು ಬಿಟ್ಟು ಹೋಗಲು ನನಗೂ ದುಃಖವಾಗುತ್ತದೆ."

"ಅಳಬೇಡಕ್ಕಾ-ಹೋಗಿ ಬಾ-ನಾನು ರಗಳೆಮಾಡುವುದಿಲ್ಲ."

"ಸುಮ್ಮಿ-ಇನ್ನು ಮೇಲೆ ನೀನು ಜ್ವಾಲಕ್ಕನ ಹತ್ತಿರ ಮಲಗಿಕೊಳ್ಳ ಬೇಕು-ಅವಳು ಹೇಳಿದ ಹಾಗೆ ಕೇಳಬೇಕು."

"ಜ್ವಾಲಕ್ಕ ನನ್ನ ಪ್ರೀತಿಸುವುದಿಲ್ಲ."

"ಇನ್ನು ಯಾರನ್ನು ಪ್ರೀತಿಸುತ್ತಾಳೆ."

"ಕೌಸಲ್ಯೆಯನ್ನು."

"ನಿನ್ನನ್ನೂ ಪ್ರೀತಿಸುತ್ತಾಳೆ ಸುಮ್ಮಿ. ನಾನು ನಿನ್ನನ್ನು ನೋಡಿ ಕೊಳ್ಳುವುದರಿಂದ ಅವಳು ಕೌಸಲ್ಯೆಯನ್ನು ನೋಡಿಕೊಳ್ಳುತ್ತಾಳೆ."

ನಿರ್ಮಲನ ವಿವರಣೆ ಸುಮಿತ್ರೆಗೆ ಒಪ್ಪಿಗೆಯಾಗದಿದ್ದರೂ ಅವಳು ಪ್ರತಿ ಭಟಸಲಿಲ್ಲ.

ನಿರ್ಮಲನ ಅಕ್ಕಪಕ್ಕದಲ್ಲಿ ಸುಮಿತ್ರೆ, ಕೌಸಲ್ಯೆ ಊಟಕ್ಕೆ ಕುಳಿತರು.

ಸುಂದರಮ್ಮನವರು ಊಟದಮನೆಯಲ್ಲಿಯೇ ಆರಾಮಾಸನ ಹಾಕಿಸಿ ಕೊಂಡು ಕುಳಿತು ಎಲ್ಲರನ್ನೂ ಉಪಚರಿಸಿದರು. ಕೌಸಲ್ಯ ಪಾಯಸ ರುಚಿ ನೋಡುತ್ತಾ

"ಲಲಿತಕ್ಕನೂ ಊಟಕ್ಕೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು" ಎಂದಳು.

"ಲಲಿತಮ್ಮನನ್ನು ಕರೆಯಲಿಲ್ಲವೇ ಜ್ವಾಲಾ" ಎಂದು ಸುಂದರಮ್ಮನವರು ಕೇಳಿದರು.

"ಕರೆದೆ ಮ್ಯಾಡಾಂ-ಊರಿಗೆ ಹೊರಡುವ ಸಿದ್ಧತೆಮಾಡಿಕೊಳ್ಳಬೇಕಾಗಿದೆ-ಬರುವುದಕ್ಕಾಗುವುದಿಲ್ಲ ಎಂದು ಹೇಳಿದರು."

"ನೀವು ಸ್ವಲ್ಪ ಪಾಯಸ ಕುಡಿಯಿರಿ ಮ್ಯಾಡಾಂ—ಮೈಗೆ ವಿರೋಧ ವಾಗುವುದಿಲ್ಲ"

ಎಂದು ವೀರಮ್ಮ ಉಪಚರಿಸಿದಳು.

"ನಿಮ್ಮ ಮನಸ್ಸಿಗೇಕೆ ಬೇಸರವಾಗಬೇಕು. ಒಂದು ತೊಟ್ಟು ಪಾಯಸ ಕೊಡೇ ತಾಯಿ"

ಎಂದರು ಸುಂದರಮ್ಮ.

ಜ್ವಾಲಾ ತಂದುಕೊಟ್ಟ ಪಾಯಸದ ಗ್ಲಾಸನ್ನು ಕೈಯಲ್ಲಿ ಹಿಡಿದು ಸುಂದರಮ್ಮ ಎಲ್ಲರನ್ನೂ ಉಪಚರಿಸಿದರು.

ಊಟವುಗಿದಮೇಲೆ ಸುಂದರಮ್ಮನವರು ಮೆಲ್ಲನೆ ತೆವಳಿಕೊಂಡು ಹೋಗಿ ತಮ್ಮ ಮಂಚದ ಮೇಲೆ ಕುಳಿತರು. ಆಶ್ರಮವಾಸಿಗಳು ಬಂದು ಅವರ ಮಂಚದ ಸುತ್ತ ಕುಳಿತರು.

ಸುಂದರಮ್ಮನವರು ನಿರ್ಮಲನನ್ನು ಪಕ್ಕಕ್ಕೆ ಕರೆದು ಅವಳ ತಲೆ ನೇವರಿಸುತ್ತಾ

"ಸಂತೋಷವಾಗಿ ಹೋಗಿ ಬಾ ನಿರ್ಮಲಾ"

ಎಂದು ಆಶೀರ್ವದಿಸಿ ಅವಳಿಗೊಂದು ಸೀರೆಯನ್ನು ಉಡುಗೆರೆಯಾಗಿತ್ತರು.

ಆಶ್ರಮವಾಸಿಗಳು ಹಿಂದುಳಿಯಲಿಲ್ಲ. ವೀರಮ್ಮ ತಾನು ಹೊಸದಾಗಿ ಹಾಕಿದ್ದ ಕಸೂತಿಚೀಲವನ್ನು ಓದಿಸಿದಳು; ಊರ್ಮಿಳಾ ತನ್ನ ಕುಪ್ಪಸವೊಂದನ್ನಿತ್ತಳು; ಜ್ವಾಲಾ ತನ್ನ 'ಗುಡ್‌ನೈಟ್' ದಿಂಬಿನಚೀಲವನ್ನಿತ್ತಳು; ಕೌಸಲ್ಯ ತನ್ನ ಕೊರಳಲ್ಲಿದ್ದ ಗಾಜಿನಮಾಲೆಯನ್ನೇ ದಾನಮಾಡಿದಳು; ಯಾರಿಗೂ ಕಡಿಮೆಯಿಲ್ಲದ ಸುಮಿತ್ರೆ ತನ್ನ ಬಣ್ಣದ ಪೆನ್ಸಿಲ್ಲುಗಳನ್ನು ನಿರ್ಮಲೆಗಿತ್ತಳು.

ನಿರ್ಮಲಾ ಎಲ್ಲವನ್ನೂ ತನ್ನ ಟ್ರಂಕಿನಲ್ಲಿ ಭದ್ರಪಡಿಸಿಕೊಂಡು ಹೊರಡಲನುವಾದಳು.

ಆಶ್ರಮದ ಹೊರಗಡೆ ಟ್ಯಾಕ್ಸಿ ಬಂದು ನಿಂತಿತು. ಮೂರ್ತಿ, ಲಲಿತಮ್ಮ ಕೆಳಗಿಳಿದು ಬಂದು ಎಲ್ಲರಿಗೂ 'ಹೋಗಿ ಬರುತ್ತೇವೆ' ಎಂದು ತಿಳಿಸಿದರು.

ನಿರ್ಮಲಾ ಸುಂದರಮ್ಮನವರನ್ನಪ್ಪಿಕೊಂಡು ಗಟ್ಟಿಯಾಗಿ ಅತ್ತಳು. ಆಶ್ರಮವಾಸಿಗಳು ನಿರ್ಮಲನನ್ನು ಬಿಡಲಾರದೆ ಅಪ್ಪಿದರು. ಲಲಿತಮ್ಮನೇ ಎಲ್ಲರನ್ನೂ ಸಮಾಧಾನಪಡಿಸಿ, ನಿರ್ಮಲನನ್ನು ಟ್ಯಾಕ್ಸಿಯ ಬಳಿ ಕರೆದೊಯ್ಯಬೇಕಾಯಿತು.

## ೧೭

ರೈಲು ಮುಂಬಯಿಯ ವಿಕ್ಟೋರಿಯಾ ಟರ್ಮಿನಸ್ ಮುಟ್ಟುವ ವೇಳೆಗೆ ಮೂರ್ತಿ, ಲಲಿತಮ್ಮ, ನಿರ್ಮಲನಿಗೆ ಸ್ವಾಗತ ಬಯಸಲು ಮೇಥಾ, ಸೆಲೀನ್ ಸಿದ್ಧರಾಗಿದ್ದರು.

ಲಲಿತಮ್ಮ ಗಾಡಿಯಿಂದಿಳಿದ ಕೂಡಲೆ ಸೆಲೀನ್ ಹಾಹಾರಿಬಂದು ಅವಳನ್ನಪ್ಪಿದಳು.

ಮೇಥಾ ಪ್ರೀತಿಪುರಸ್ಸರವಾಗಿ ಮೂರ್ತಿಯ ಹೆಗಲಮೇಲೆ ಕೈಹಾಕಿ "ಸುಖಪ್ರಯಾಣ ಆಯಿತೇ?" ಎಂದು ಕೇಳಿದ.

"ಆಯಿತು."

ಮೂರ್ತಿ, ಲಲಿತಮ್ಮ, ನಿರ್ಮಲನ ಕಣ್ಣುಗಳು ಯಾರನ್ನೋ ಅರಸಿದ್ದು ಕಂಡು ಮೇಥಾ

"ಸರ್ದಾರ್ ಊರಿನಲ್ಲಿಲ್ಲ. ಸಂಜೆಗೆ ಬರುತ್ತಾರೆ" ಎಂದ.

ಮೇಥನ ಆಳು ಎಲ್ಲರ ಸಾಮಾನುಗಳನ್ನೂ ಹೊತ್ತುಕೊಂಡು, ಕಾರಿನಲ್ಲಿ ಅಡಗಿಸಿದ.

ಸಂತೋಷ ಸಂಭ್ರಮದಲ್ಲಿ ಯಾರಿಗೂ ಮಾತೇ ಹೊರಡದಾಯಿತು.

ಕಾರು ಚರ್ಚಗೇಟ್ ರಿಕ್ಲಮೇಷನ್ (Churchgate reclamation) ರಸ್ತೆಯಲ್ಲಿ ಮಲಬಾರಹಿಲ್‌ಗೆ ಹೋಗುತ್ತಿರುವಂತೆ ಮೇಥ

"ನೀನು ಬಹಳ ಸೊರಗಿರುವೆ ಪ್ರಸಾದ್. ಮೈಯಲ್ಲಿ ಸರಿಯಾಗಿಲ್ಲವೇ?" ಎಂದು ಕೇಳಿದ.

"ಆರೋಗ್ಯವಾಗಿದ್ದೇನೆ. ಪ್ರಯಾಣದಿಂದ ಸ್ವಲ್ಪ ಆಯಾಸವಾಗಿದೆ ಯಷ್ಟೆ!"

ಎಲ್ಲರೂ ಹಜಾರದಲ್ಲಿ ಕುಳಿತಮೇಲೆ ಮೇಥನ ಅಡಿಗೆಯಾಳು ಉಪಹಾರ, ಚಹಾ ತಂದಿಟ್ಟ.

ನಿರ್ಮಲನನ್ನು ಪಕ್ಕದಲ್ಲಿ ಕೂಡಿಸಿಕೊಂಡು ಸೆಲೀನ್ ಉಪಚರಿಸಿದಳು. ಸೆಲೀನ್ ಸ್ಪಷ್ಟವಾಗಿ ಗುಜರಾತಿ ಮಾತನಾಡುವುದನ್ನು ಕಂಡು ಲಲಿತ

"ಎಷ್ಟು ಚೆನ್ನಾಗಿ ಗುಜರಾತಿ ಮಾತನಾಡುತ್ತೀರಿ ಸೆಲೀನ್." ಎಂದಳು.

"ಗುಜರಾತಿಯನ್ನು ಓದಿ ಬರೆಯುವುದನ್ನೂ ಸೆಲೀನ್ ಅಭ್ಯಾಸ ಮಾಡಿಕೊಂಡಿದ್ದಾಳೆ ಲಲಿತಾ ಬಹೆನ್"

ಎಂದು ಮೇಥ ಅಭಿಮಾನಪೂರ್ವಕವಾಗಿ ನುಡಿದ.

"ಪತಿಯ ಮನೆ, ಮನ ಎರಡೂ ನನ್ನದಾದಂತೆ ಅವರ ಭಾಷೆ, ಧರ್ಮವೂ ನನ್ನದಲ್ಲವೇ ?"

ಎಂದು ಸೆಲೀನ್ ಹೇಳಿದಳು.

ಲಲಿತ, ನಿರ್ಮಲನ ಕೋಣೆ ತೋರಿಸಲು ಸೆಲೀನ್ ಕರೆದುಕೊಂಡು ಹೋದಮೇಲೆ ಮೂರ್ತಿ

"ನಾನು ಬರುವ ವಿಷಯ ನಾನಾ, ದಾವ್ಲೆ, ದಸ್ತೂರರಿಗೆ ತಿಳಿಸಲಿಲ್ಲವೇ ಮೇಥಾ ?"

"ಉದ್ದೇಶಪೂರ್ವಕವಾಗಿಯೇ ತಿಳಿಸಲಿಲ್ಲ ಪ್ರಸಾದ್. 'ಸೆಂಚುರಿ' ಕಛೇರಿಯಲ್ಲಿ ರಾಜಕಾರಣ ಆರಂಭವಾಗಿದೆ."

"ಹಾಗೆಂದರೇನು ?"

"ದಾವ್ಲೆ 'ಸೆಂಚುರಿ' ಬಿಟ್ಟಿರುವ ಸಂಗತಿ ನಿನಗೆ ಗೊತ್ತೇ ಇಲ್ಲವೇ ?"

"ಇಲ್ಲ—ಈಚೆಗೆ ಕಾಗದಗಳನ್ನೂ ಬರೆಯದೆ ನಾನು ಅಪರಾಧಿಯಾಗಿರುವೆ."

"ದಾವ್ಲೆ 'ಸೆಂಚುರಿ'ಯ ಮರಾಟಿ ಆವೃತ್ತಿ ತೆಗೆಯಬೇಕೆಂದು ಹಟ ಹಿಡಿದ— ನಾನಾ, ದಸ್ತೂರ್ 'ಮರಾಟಿ, ಗುಜರಾತಿ, ಹಿಂದಿ' ಮೂರು ಆವೃತ್ತಿಗಳನ್ನೂ ಒಟ್ಟಿಗೆ ತೆಗೆಯೋಣ—ಮರಾಟಿಯೊಂದೇ ಬೇಡ ಎಂದರು. ದಾವ್ಲೆ ಕೋಪಮಾಡಿಕೊಂಡು 'ಸೆಂಚುರಿ'ಯಿಂದ ದೂರನಿಂತ."

"ಅವರ ವೈಮನಸ್ಯ ಪರಿಹರಿಸಲು ನೀನು ಪ್ರಯತ್ನಿಸಲಿಲ್ಲವೇ ?"

"ಪ್ರಯತ್ನಿಸಿದೆ. ಇಬ್ಬರೂ ಹಟಕ್ಕೆ ಬಿದ್ದಿದ್ದಾರೆ. ಈ ವಿಷಯ ಕೂಲಂಕಷವಾಗಿ ನಾನೇ ನಿನಗೆ ಬರೆಯಬೇಕೆಂದಿದ್ದೆ."

"ಈಗೇನು ಮಾಡೋಣ ?"

"ನಾನು ಸ್ನಾನಮುಗಿಸುತ್ತೇನೆ—ದಾಮ್ಲೆಯನ್ನು ನೋಡಿಕೊಂಡು 'ಸೆಂಚುರಿ' ಕಛೇರಿಗೆ ಹೋಗಿಬರೋಣ. ಯಾವ ಕಾರಣಕ್ಕೂ ನಮ್ಮ ಬಳಗ ಒಡೆಯಕೂಡದು."

"ಆಗಬಹುದು—ಪ್ರಸಾದ್, ಸತ್ಯವಾಗಿ ಹೇಳು, ನನ್ನಲ್ಲಿ ಮರೆಮಾಜ ಬೇಡ—ನಿನ್ನ ಆರೋಗ್ಯ ಹೀಗೇಕಾಗಿದೆ ?"

ಮೂರ್ತಿ ಎದ್ದುಹೋಗಿ ತನ್ನ ಸೂಟ್ ಕೇಸಿನಲ್ಲಿದ್ದ ಈಚಿನ ಪ್ರಕಟನೆ ಗಳನ್ನು ತಂದು ಮೇಥನ ಕೈಗಿತ್ತು

"ನನ್ನ ಪುಸ್ತಕಗಳೇ ನಿನಗೆ ವಿವರಣೆ ಕೊಡುತ್ತವೆ."

ಮೇಥಾ ಪುಸ್ತಕಗಳನ್ನು ತಿರುಗಿಸಿ ನೋಡಿ

"ಪ್ರಸಾದ್, ನಿನ್ನ ಆರೋಗ್ಯ ಸಂಪೂರ್ಣವಾಗಿ ಸುಧಾರಿಸುವವರೆಗೆ ನೀನು ಕಾಗದ ಲೇಖನಿ ಮುಟ್ಟಕೂಡದು."

"ನನ್ನ ಮಾತಂತಿರಲಿ—ಈಚೆಗೆ ನೀನೇನು ಮಾಡಿರುವೆ ?"

"ಸ್ವಲ್ಪ ಕೆಲಸಮಾಡಿದ್ದೇನೆ. ಅದನ್ನೇ ನಿನ್ನಲ್ಲಿ ಸವಿಸ್ತಾರವಾಗಿ ಚರ್ಚಿಸ ಬೇಕಾಗಿದೆ."

"ಹೇಳು ಮೇಥಾ—ಬೇಗ ಹೇಳು."

"ಭಗವದ್ಗೀತೆಯ ಆಧಾರದ ಮೇಲೆ ಒಂದು ಚಿತ್ರಸಂಪುಟ ಸಿದ್ಧಗೊಳಿಸ ಲಾರಂಭಿಸಿದೆ. ಸುಮಾರು ಇಪ್ಪತ್ತುನಾಲ್ಕು ಚಿತ್ರಗಳಲ್ಲಿ ಇಡಿಯ ಗೀತಾರ್ಥ ಸಾರ ಕೊಡಬೇಕೆಂದು ಇಚ್ಛೆ. ಸೂಕ್ತವಿವರಣೆ, ಚಿತ್ರಪರಿಚಯ, ಮೂಲ ಶ್ಲೋಕಾನುವಾದಗಳನ್ನು ನೀನು ಮಾಡಿಕೊಡಬೇಕು. ಸೆಲೀನ್ ಅವುಗಳನ್ನು ಫ್ರೆಂಚಿಗೆ ಅನುವಾದಿಸುತ್ತಾಳೆ. ಇಂಗ್ಲಿಷ್ ಮತ್ತು ಫ್ರೆಂಚ್ ಎರಡು ಭಾಷೆ ಗಳಲ್ಲಿಯೂ ಈ ಗ್ರಂಥ ಪ್ರಕಟಿಸಬೇಕೆಂಬುದೇ ನನ್ನ ಉದ್ದೇಶ."

"ಚಿತ್ರಗಳೆಷ್ಟಾಗಿವೆ."

"ಇಪ್ಪತ್ತು ಚಿತ್ರ ಮುಗಿಸಿದ್ದೇನೆ."

"ತೋರಿಸು ಮೇಥಾ."

"ಈಗ ಬೇಡ—ಸಾವಕಾಶವಾಗಿ ಕುಳಿತುಕೊಳ್ಳೋಣ. ಮೊದಲು ನೀನು ಸ್ನಾನಮಾಡು—ದಾವ್ಲೆ ಕೆಲಸ ಮುಗಿಸಿಕೊಂಡು ಬರೋಣ."

"ದಾವ್ಲೆ ಮನೆಯೆಲ್ಲಿ ?"

"ಗಿರ್‌ಗಾಂವ್‌ದಲ್ಲಿ. ಫೋನ್‌ಮಾಡಿ ನೋಡುತ್ತೇನೆ."

ಎಂದು ಫೋನ್ ಎತ್ತಿಕೊಂಡು ದಾವ್ಲೆ ನಂಬರ್ ಡಯಲ್ (Dial) ಮಾಡಿ

"ಹೆಲೋ—ಹೆಲೋ"

"ಯಾರು ಮಾತಾಡುವವರು."

"ನಾನು ಮೇಥಾ-ದಾವ್ಲೆಯೇನು ?"

"ನಾನೇ ಮೇಥಾಜಿ, ಕುಶಲವೇ ?"

"ಫೋನಿನಲ್ಲಿ ಯಾರೊ ಮಾತಾಡುತ್ತಾರೆ—ಅವರು ಧ್ವನಿಯ ಗುರುತು ಸಿಕ್ಕುತ್ತದೇನು ನೋಡು"

ಎಂದು ಮೆಲ್ಲನೆ ರಿಸೀವರನ್ನು ಪ್ರಸಾದನ ಕೈಗೆ ಸರಿಸಿದ.

"ನಮಸ್ತೇ ದಾವ್ಲೆ ಭಾಯ್."

"ಯಾರು ಮಾತಾಡುವವರು ?"

"ನನ್ನ ಧ್ವನಿಯ ಗುರುತು ಸಿಕ್ಕಲಿಲ್ಲವೇ "

"ಇಲ್ಲ—ನೀವು ಯಾರು ?"

"ಪ್ರಸಾದ್."

"**ಪ್ರಸಾದ್** ! ಇದೇನು ಕನಸಲ್ಲವಷ್ಟೆ !"

"ಅಲ್ಲ ದಾವ್ಲೆ. ನಾನೇ-ನಿಜವಾಗಿಯೂ ನಾನೇ !"

"ಯಾವಾಗ ಬಂದಿರಿ ?

"ಈಗ ಒಂದು ತಾಸಾಯಿತು. ಸ್ನಾನ ಮುಗಿಸಿ, ನಾನೂ ಮೇಥಾ ನಿಮ್ಮ ಮನೆಗೆ ಹೊರಟದ್ದೆವು."

"ಬನ್ನಿ ಬನ್ನಿ—ನಿಮಗಾಗಿ ಕಾಯುತ್ತಿರುತ್ತೇನೆ."

ದಾವ್ಲೆಯ ಧ್ವನಿ ಕೇಳಿಯೇ ಮೂರ್ತಿಗೆ ಅತ್ಯಾನಂದವಾಯಿತು. ಅರ್ಧ ಗಂಟೆಯೊಳಗಾಗಿ ಅವನು ಸ್ನಾನಮುಗಿಸಿ, ಉಡುಪು ಬದಲಾಯಿಸಿಕೊಂಡು ಹೊರಡಲನುವಾದ.

ಮೇಥಾ, ಮೂರ್ತಿ ಹೊರಗೆ ಹೊರಟುದನ್ನು ಕಂಡ ಸೆಲೀನ್ "ಹೊರಗೆ ಹೋಗಿ ಬರುವಿರಾ ?" ಎಂದಳು.

"ದಾವ್ಲೆ ನೋಡಿಕೊಂಡು, 'ಸೆಂಚುರಿ' ಕಛೇರಿಗೆ ಹೋಗಿ ಬರುತ್ತೇನೆ."

"ಹೋಗಿ ಬನ್ನಿ–ಅದು ಅವಶ್ಯಕವಾಗಿ ಆಗಬೇಕಾಗಿರುವ ಕೆಲಸ. ಲಂಚ್‌ಗೆ (Lunch) ಮನೆಗೇ, ಬರುವಿರೋ–ಅಲ್ಲಿಯೇ ಮುಗಿಸುವಿರೋ?"

"ಪ್ರಸಾದ್ ಬಂದ ದಿನವೇ ಹೊರಗೆ ಊಟಮಾಡುವುದು ಯಾವನ್ಯಾಯ-ಮನೆಗೇ ಬರುತ್ತೇನೆ. ನೀವು ಹೊರಗೆ ಹೋಗಿ ಬರುತ್ತೀರಾ ?"

"ಲಲಿತಾ ಬಹೆನ್ ಕರೆದುಕೊಂಡು ಪೇಟೆಯ ಕಡೆ ಹೋಗಿ ಬರುತ್ತೇನೆ."

"ಡ್ರೈವರ್ ನೀವು ಕರೆದುಕೊಂಡು ಹೋಗಿ. ನಾನು 'ಹಿಂದೂಸ್ಥಾನ್' ಡ್ರೈವ್ ಮಾಡಿಕೊಂಡು ಹೋಗುತ್ತೇನೆ."

ಲಲಿತಮ್ಮ ಮೂರ್ತಿಗೆ ಕುಪ್ಪಸದಂಗಿ (waistcoat) ತೊಡಿಸುತ್ತಾ "ಬಹಳ ಹೊತ್ತು ಮಾಡಬೇಡಿ–ಬೇಗ ಬಂದುಬಿಡಿ" ಎಂದಳು.

"ನೀವೂ ಪೇಟೆಗೆ ಹೋಗುತ್ತೀರಲ್ಲಾ....ಆಯಿಯನ್ನು ನೋಡಿಕೊಂಡು ಬರುತ್ತೀಯಾ ?"

"ಇಲ್ಲ–ನಾಳೆ ಇಬ್ಬರೂ ಹೋಗೋಣ–ಸರ್ದಾರ್‌ಜೀ ಬರಲೇ ಇಲ್ಲವಲ್ಲ!"

"ನಿರ್ಮಲನ ಮುಖ ಕಳೆಗುಂದಿದೆಯೇ ?"

"ಹೋಗಿ ದೊರೆ–ನಿಮಗೆಲ್ಲಾ ಹಾಸ್ಯ."

"ಸಂಜೆಗೆ ಸರ್ದಾರ್ ಬರಬಹುದು."

ಮೇಥಾ ಡ್ರೈವ್ ಮಾಡುತ್ತಿದ್ದುದರಿಂದ ಅವನು ಹೆಚ್ಚು ಮಾತನಾಡಲು ಸಾಧ್ಯವಾಗಲಿಲ್ಲ. ಮೂರ್ತಿಯೇ ಎಲ್ಲ ಮಾತೂ ಆಡಬೇಕಾಯಿತು.

"ನಿನ್ನ ಅರೋಗ್ಯ ಸ್ವಲ್ಪವೂ ಸಮರ್ಪಕವಾಗಿಲ್ಲ ಪ್ರಸಾದಭಾಯ್. ದಾವ್ಲೆ ನೋಡಿಯಾದ ಮೇಲೆ ನಾನು ನಿನ್ನನ್ನು ಡಾ. ವಝೆಯವರಲ್ಲಿ ಕರೆದುಕೊಂಡು ಹೋಗುತ್ತೇನೆ."

"ನನಗೇನೂ ಆಗಿಲ್ಲ ಮಾರಾಯ. ಆರೋಗ್ಯವಾಗಿದ್ದೇನೆ."

"ಆ ಮಾತು ಡಾ. ವಝೆ ಹೇಳಿಬಿಟ್ಟರೆ ನನಗೆ ತೃಪ್ತಿ."

"ನಾವು ಡಾಕ್ಟರನ್ನು ಕಂಡುಬಂದ ವಿಷಯ ನೀನು ಲಲಿತನಿಗೆ ಹೇಳಕೂಡದು."

"ನಿನ್ನ ಆರೋಗ್ಯದ ವಿಷಯ ಲಲಿತಾಬಹೆನ್‌ಗೆ ಗೊತ್ತೇ ಇಲ್ಲವೇ ?"

"ಸ್ವಲ್ಪ ಸ್ವಲ್ಪ ಗೊತ್ತಿದೆ—ಹೃದಯದೌರ್ಬಲ್ಯದ ವಿಷಯ ಗೊತ್ತಿಲ್ಲ."

"ಹಾ! ಹೃದಯದೌರ್ಬಲ್ಯ !"

"ಅಲ್ಲಿ ನೋಡು ಮೇಥಾ-ಎದುರಿಗೆ ಕಾರು ಬರುತ್ತಿದೆ."

ಕಾರಿಗೆ ಡಿಕ್ಕಿಹೊಡೆಯದಂತೆ ಮೇಥಾ ತಟಕ್ಕನೆ ಬಲಕ್ಕೆ ತಿರುಗಿಸಿಕೊಂಡು

"ನಿನ್ನ ವರ್ತನೆ ಸ್ವಲ್ಪವೂ ನ್ಯಾಯವಿಲ್ಲ ಪ್ರಸಾದ್."

"ಅವಳ ಮನಸ್ಸಿಗೆ ವ್ಯಥೆಯುಂಟುಮಾಡುವುದರಿಂದ ನನ್ನ ಆರೋಗ್ಯ ಉತ್ತಮವಾಗುವುದಿಲ್ಲ—ಮತ್ತಷ್ಟು ಕೆಡುತ್ತದೆ ಮೇಥಾ. ನನ್ನ ಸಮಸ್ತ ಚಟುವಟಿಕೆಗೂ ಅವಳ ಸಮಾಧಾನಚಿತ್ತವೇ ಅಸ್ತಿಭಾರ."

ಗಿರ್‌ಗಾಂವ್‌ದ ಹಿಂಬದಿಯ ರಸ್ತೆಯ ಕಡೆ ಕಾರು ತಿರುಗಿ ದಾವ್ಲೆಯ ಮನೆಯ ಮುಂದೆ ಬಂದು ನಿಂತಿತು. ಎರಡನೆಯ ಅಂತಸ್ಥಿನ ಫ್ಲ್ಯಾಟ್‌ನ ವೆರಾಂಡದಲ್ಲಿ ನಿಂತಿದ್ದ ದಾವ್ಲೆ, ಗೆಳೆಯರನ್ನು ಕಂಡವನೇ ಕೆಳಗಿಳಿದು ಬಂದು, ಅವರನ್ನಪ್ಪಿ ಸ್ವಾಗತಿಸಿದ.

ದಾವ್ಲೆಯದು ನಾಲ್ಕೇ ರೂಮಿನ ಫ್ಲ್ಯಾಟ್ ಆದರೂ ಅಚ್ಚುಕಟ್ಟಾಗಿತ್ತು. ದಿವಾನಖಾನೆ ಸೋಫಾಸೆಟ್ ಫ್ಯಾನಿನಿಂದ ಅಲಂಕೃತವಾಗಿತ್ತು—ಅಲ್ಲೇ ಗೋಡೆಯ ಬದಿಗೆ ಫೋನ್.

ಆನಂದಪರವಶನಾಗಿದ್ದ ದಾವ್ಲೆಗೆ ಗೆಳೆಯರನ್ನು ಹೇಗೆ ಉಪಚರಿಸಬೇಕೋ ತಿಳಿಯದಾಯಿತು. ಕ್ಷಣಕಾಲ ಕಕ್ಕಾಬಿಕ್ಕಿಯಾಗಿ ಕೊನೆಗೆ

"ಮನ್ನೂ—ಚಹಾ ತೆಗೆದುಕೊಂಡು ಬಾ" ಎಂದು ಹೇಳಿದ.

"ಚೆನ್ನಾಗಿದ್ದೀಯಾ ದಾವ್ಲೆ."

"ನನ್ನ ಚೆನ್ನ ಹಾಗಿರಲಿ—ನೀನೇಕೆ ಹೀಗಾಗಿದ್ದೀ ಪ್ರಸಾದ್. ಫೋನಿನಲ್ಲಿ ನೀನು ಮಾತನಾಡಿದಾಗ ನಿನ್ನ ಧ್ವನಿಯೇ ತಿಳಿಯಲಿಲ್ಲ."

"ಪ್ರಸಾದ್‌ಗೆ ಮೈಯಲ್ಲಿ ಸರಿಯಾಗಿಲ್ಲ ದಾವ್ಲೆ—ನಡೀ, ಅವನನ್ನು ಮೊದಲು ಡಾ. ವರ್ಝೆಯವರಲ್ಲಿ ಕರೆದುಕೊಂಡು ಹೋಗೋಣ.

"ಏನಾಗಿದೆ ?"

"ಹೃದಯದೌರ್ಬಲ್ಯ !"

ಮರುಮಾತಾಡದೆ ದಾವ್ಲೆ ಫೋನ್ ಎತ್ತಿಕೊಂಡು ಡಾ. ವರ್ಝುಯವರಿಗೆ ತಾವು ಬರುವ ವಿಷಯ ತಿಳಿಸಿದ.

ಮನ್ನೂ ತಂದುಕೊಟ್ಟ ಚಹಾ, ಚೂಡಾ ಸೇವಿಸಿದ ಮೇಲೆ ಮೂವರೂ ಹೊರಟರು.

ದಾವ್ಲೆಯ ದಾಕ್ಷಿಣ್ಯದಿಂದ ಡಾ. ವರ್ಝುಯವರನ್ನು ಕೂಡಲೆ ಕಾಣುವುದು ಸಾಧ್ಯವಾಯಿತು. ಅದೇ ಬಂದು ಒಳಗೆ ಹೋದ ಈ ಮೂವರನ್ನು ಅಲ್ಲಿ ಕಾಯುತ್ತಿದ್ದ ಜನ ನುಂಗುವಂತೆ ನೋಡಿದರು.

ಮೂರ್ತಿಯನ್ನು ಮೇಜಿನಮೇಲೆ ಮಲಗಿಸಿ ಡಾ. ವರ್ಝು ಎದೆ, ಬೆನ್ನು ಪರೀಕ್ಷಿಸಿ ನೋಡಿ

"ರಕ್ತದ ಒತ್ತಡದ ಚಿಹ್ನೆಗಳಿವೆ. ಎಚ್ಚರಿಕೆಯಿಂದಿರುವುದು ಒಳ್ಳೆಯದು."

"ಚಿಕಿತ್ಸೆ ಏನು?"

"ರೋಗಿಗಳ ತೃಪ್ತಿಗಾಗಿ ನಾವು ಇಂಜಕ್ಷನ್ ಚುಚ್ಚುವುದಷ್ಟೆ! ಈ ರೋಗಕ್ಕೆ ರೋಗಿಯೇ ವೈದ್ಯ. ಪೌಷ್ಟಿಕ ಆಹಾರ–ವಿಶ್ರಾಂತಿ–ನಿರ್ಮಲವಾಯು ಸೇವನೆ—ಹೆಚ್ಚು ದಣಿವಾಗದಷ್ಟು ವ್ಯಾಯಾಮ—ವಾಕಿಂಗ್. ಶಕ್ತಿಗೆ ಬೇಕಾದರೆ ವಿಟಮಿನ್ 'ಬಿ' ತೆಗೆದುಕೊಳ್ಳಬಹುದು—ಇವರದು ಯಾವ ಊರು?"

"ಬೆಂಗಳೂರು."

"ಇಲ್ಲಿಗೆ ಬಂದದ್ದು ಒಳ್ಳೆಯದಾಯಿತು. ಸಮುದ್ರದ ಹವಾದಿಂದ ಆರೋಗ್ಯ ತೀವ್ರ ಸುಧಾರಿಸುತ್ತದೆ."

ಎಲ್ಲರೂ ಚಿಕಿತ್ಸಾಲಯದಿಂದ ಹೊರಗೆ ಬಂದಮೇಲೆ ಮೂರ್ತಿ

"ಈಗ ಸಮಾಧಾನವಾಯಿತೇ ಮೇಥಾ" ಎಂದು ಕೇಳಿದ.

ಮೇಥಾ ನಕ್ಕು

"ಮುಂದೆ ಎಲ್ಲಿಗೆ?" ಎಂದು ಕೇಳಿದ.

"ಎಲ್ಲಿಗೆ ಹೋಗೋಣ ದಾವ್ಲೆ?"

"ನನಗೇನು ಗೊತ್ತು—ನೀವು ಎಲ್ಲಿಗೆ ಕರೆದುಕೊಂಡು ಹೋದರೂ ಬರಲು ಸಿದ್ಧನಾಗಿದ್ದೇನೆ."

"ಸರಿ—ಸೆಂಚುರಿ ಕಛೇರಿಗೆ ಹೋಗೋಣ ನಡಿ ಮೇಥಾ."

ದಾವ್ಲೆಯ ಉತ್ತರ ಕಾಯದೆ ಮೇಥಾ ಕಾರ್ ಅತ್ತ ತಿರುಗಿಸಿದ.

ಕಾರ್ ಹೋಗುತ್ತಿದ್ದಂತೆ ದಾವ್ಲೆ

"ನಾನು 'ಸೆಂಚುರಿ' ಕಛೇರಿಗೆ ಬರುವುದಿಲ್ಲ ಪ್ರಸಾದ್" ಎಂದ.

"ಏಕೆ ?"

"ಮೇಥಾ ಎಲ್ಲಾ ವಿಷಯ ನಿನಗೆ ಹೇಳಿರಬಹುದು."

"ಸೂಕ್ಷ್ಮವಾಗಿ ಹೇಳಿದ್ದಾನೆ. ನೀವೂ ಹೀಗೆ ಮಕ್ಕಳಂತೆ ಆಡುವಿರೆಂದು ನಾನು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ."

"ಭಿನ್ನಾಭಿಪ್ರಾಯ ಹುಟ್ಟಿದ ಮೇಲೆ ನಾನು ದೂರವಿರುವುದೇ ಲೇಸು."

"ನಿಮ್ಮಲ್ಲಿ ಹುಟ್ಟಿರುವ ಭಿನ್ನಾಭಿಪ್ರಾಯ ಅಭೇದ್ಯವಾದ ಕೋಟೆಯಾಗಿದೆಯೇ ?"

"..............................."

"'ಸೆಂಚುರಿ' ಬಳಗಕ್ಕೆ ನಾನೂ ಸೇರಿದವನಷ್ಟೆ !"

"ಆ ಬಗ್ಗೆ ನಾನು ಸಂದೇಹಪಟ್ಟಿನೇ ?"

"ಇಲ್ಲ. ನನಗೆ ತಿಳಿಸದೆ ನೀನು 'ಸೆಂಚುರಿ' ಬಿಟ್ಟದ್ದು ತಪ್ಪು."

"ಎಲ್ಲರೂ ನನ್ನನ್ನೇ ತಪ್ಪಿತಸ್ಥನನ್ನಾಗಿ ಮಾಡುತ್ತಿರುವಿರಿ."

"ನೀನು ಬೇರೆ—ದಸ್ತೂರ್, ನಾನಾ ಬೇರೆ ಎಂದು ನಾನು ಯಾವಾಗ ಲಾದರೂ ಭಾವಿಸಿರುವೆನೇ ?"

"ಇಲ್ಲ."

"ನಿನ್ನನ್ನೇಕೆ ವೃಥಾ ತಪ್ಪಿತಸ್ಥನನ್ನಾಗಿ ಮಾಡಲಿ. ಕೆಟ್ಟ ಘಳಿಗೆಯಲ್ಲಿ ಒಮ್ಮೊಮ್ಮೆ ಆಡಿದ ಮಾತು ಪ್ರಕೋಪಕ್ಕೆ ಹೋಗುತ್ತದೆ—ನೀನು, ದಸ್ತೂರ್ ನಾನಾ ಎಂಥೆಂಥ ಸಮಸ್ಯೆಗಳನ್ನು, ಗಂಡಾತರಗಳನ್ನು ಎದುರಿಸಿದ್ದೀರಿ ನೆನಪಿದೆಯೇ ? ರೊಟ್ಟಿಕೊಳ್ಳಲು ಕೂಡ ಅನುಕೂಲವಿಲ್ಲದೆ ಬೀದಿಯಮೇಲೆ ಮಾರಾಟಕ್ಕೆ ಬರುತ್ತಿದ್ದ ಸಿಂಗಲ್ ಚಹಾ ಕುಡಿದು, ರೀವ್‌ಪೇಪರ್ ಹಾಸಿ ಕೊಂಡು ಮಲಗುತ್ತಿದ್ದುದು ಮರೆತುಹೋಯಿತೇ ? ನಿಮ್ಮ ವಿಶ್ವಾಸವೃಕ್ಷಕ್ಕೆ ನೀರೆರೆದುದು ಆ ದಿವ್ಯತ್ಯಾಗ. 'ಸೆಂಚುರಿ'ಯನ್ನು ನೀವು ಯಾರುಬಿಟ್ಟರೂ ಅದು ಅಂಗಹೀನವಾಗುತ್ತದೆ."

"ನಮ್ಮ ಜತೆಗೆ ನೀನು—ನಿನ್ನ ಸಹಧರ್ಮಿಣಿ ಹೆಣಗಿದುದನ್ನೂ ನಾನ
ಮರೆತಿಲ್ಲ ಪ್ರಸಾದ್."

"ದಾವ್ಲೆ–ನನ್ನ ಜೀವನ ಬಹಳ ಏರುಪೇರುಗಳನ್ನನುಭವಿಸಿದೆ. ಲೋಕದ
ಅಸೀಮಕ್ರೌರ್ಯದಿಂದ ತಪ್ತನಾಗಿದ್ದೇನೆ. ನಿರ್ವಿಣ್ಣತೆ ಬೃಹದಾಕಾರ ತಳೆದು
ರಕ್ಕಸನಂತೆ ನನ್ನನ್ನು ಕಬಳಿಸಲು ಬಂದಾಗ ನಿಮ್ಮನ್ನು ಸ್ಮರಿಸಿಕೊಳ್ಳುತ್ತೇನೆ—
ಮೇಥಾ, ಸೆಲೀನ್, ದಾವ್ಲೆ, ನಾನಾ, ದಸ್ತೂರ್, ಆಯಿ, ವೀಣಾ ಇಷ್ಟು ಜೀವ
ಗಳು ನನ್ನವಲ್ಲವೇ ? ಇಷ್ಟು ಜೀವಗಳೂ ತಮ್ಮ ಅಮೃತಪ್ರೇಮದಿಂದ ನನ್ನನ್ನು
ರಕ್ಷಿಸುತ್ತಿಲ್ಲವೇ ? ನಾನೇಕೆ ವಿಷಣ್ಣನಾಗಬೇಕು—ಮುಂಬಯಿಗೆ ಹಾರಿ
ಹೋದರೆ ಸಾಕು ಈ ಹೃದಯಗಳು ಬಾಚಿ ನನ್ನನ್ನಪ್ಪಿಕೊಳ್ಳುವುದಿಲ್ಲವೆ ?
ಎಂಬ ಭಾವನೆ ನನ್ನ ಬಾಳಿಗೆ ಧೈರ್ಯ, ಸ್ಥೈರ್ಯ, ಶಾಂತಿ, ಕ್ರತುಶಕ್ತಿಯನ್ನು
ನೀಡುತ್ತದೆ. ವಿಶ್ವದ ಇತಿಹಾಸಕಾರ ನಮ್ಮ ಸ್ನೇಹಕ್ಕೆ ಒಂದು ಪುಟ ಕೊಡ
ದಿರಬಹುದು ; ಆದರೆ ಕಲ್ಪಗಳ ಲಿಪಿಕಾರ ಅವಕ್ಕಾಗಿ ಒಂದು ಅಧ್ಯಾಯವನ್ನೇ
ಮೀಸಲಾಗಿಡುತ್ತಾನೆಂದು ನನ್ನ ನಂಬಿಕೆ."

ದಾವ್ಲೆಯ ಕಣ್ಣುಗಳಲ್ಲಿ ಹನಿಗಳುದುರುತ್ತಿದ್ದವು. ಅವನು ಮಧ್ಯೆ
ಮಾತನಾಡಲೆತ್ನಿಸಿ ಸುಮ್ಮನಾಗಿದ್ದ.

ಸ್ಟಿರಿಂಗ್ ವ್ಹೀಲ್ (Steering wheel) ಮೇಲೆ ಒಂದೇ ಕೈಯನ್ನಿಟು
ಕೊಂಡು ಮೇಥಾ ಕರವಸ್ತ್ರದಿಂದ ಕಣ್ಣೊರಸಿಕೊಳ್ಳುತ್ತಿದ್ದ.

"ನನ್ನ ಅಂತರಂಗದ ರಹಸ್ಯವೊಂದನ್ನು ಇಂದು ನಿಮ್ಮೆದುರಿಗೆ ಬಿಚ್ಚಿಡು
ತ್ತೇನೆ. ಒಂದೊಂದು ಕೃತಿಯನ್ನು ನಾನು ಮುಗಿಸಿದಾಗ ನನ್ನ ಆಯುಷ್ಯದ
ಕೆಲಭಾಗವುಗಿಯಿತು ಎಂಬ ಭಾವನೆ ಬರುತ್ತದೆ. ಹೃದ್ರೋಗ ಆರಂಭ
ವಾದ ಮೇಲೆ ಈ ಭಾವನೆ ಮತ್ತಷ್ಟು ಬಲಿತಿದೆ. ನಾನು ಸಾಯುವುದಕ್ಕೆ
ಅಂಜುವುದಿಲ್ಲ ದಾವ್ಲೆ—ನನ್ನ ಸಾವೂ ಸುಂದರವಾಗಿರಬೇಕೆಂಬುದೇ ನನ್ನ
ಬಯಕೆ. ನಿಮ್ಮ ನಗೆಮಾತಿನ ಕೇಕೆ ಕೇಳುತ್ತ, ನಿಮ್ಮೆಲ್ಲರ ಮಧ್ಯೆ ಮಲಗಿ
ನಾನು ನನ್ನ ಅಂತಿಮ ಉಸಿರನ್ನೆಳೆಯಬೇಕೆಂದು ಹಾರೈಸುತ್ತೇನೆ. ನಿಮ್ಮಲ್ಲಿ
ಯಾರು ನನ್ನ ಬಳಿಯಲ್ಲಿಲ್ಲದಿದ್ದರೂ ನನ್ನ ಜೀವ ಪರಿತಪಿಸುತ್ತದೆ."

ದಾವ್ಲೆಗೆ ತಡೆಯಲಾಗಲಿಲ್ಲ. ಮೂರ್ತಿಯನ್ನಪ್ಪಿ ಅವನ ಹೆಗಲಮೇಲೆ
ಮುಖವಿಟ್ಟು ರೋಧಿಸಲಾರಂಭಿಸಿದ.

ಮೋಥನ ಕೈ ನಿಂತುಹೋಯಿತು. ಕಾರನ್ನು ರಸ್ತೆಯ ಮಗ್ಗುಲಲ್ಲಿ ನಿಲ್ಲಿಸಿ ಅವನು ಸ್ತಬ್ಧನಾಗಿ ಕುಳಿತುಬಿಟ್ಟ.

ದುಃಖದಾವೇಗ ಸ್ವಲ್ಪ ಕಡಿಮೆಯಾಗಲು ದಾವ್ಲೆ

"ಪ್ರಸಾದ್‌ಭಾಯ್—ನಾನು ಮೂರ್ಖ—ಶುದ್ಧ ಹುಂಬ. ಮಹಾ ಪರಾಧಮಾಡಿದ್ದೇನೆ. ನನ್ನನ್ನು ಕ್ಷಮಿಸು–ನೀನು ಹೇಳಿದಂತೆ ಕೇಳಲು ನಾನು ಸಿದ್ಧನಾಗಿದ್ದೇನೆ" ಎಂದ.

ಮೋಥಾ ಚೇತರಿಸಿಕೊಂಡು ಮತ್ತೆ ಕಾರ್ ಸ್ಟಾರ್ಟ್ (Start) ಮಾಡಿದ.

ನಾಲ್ಕಾರು ನಿಮಿಷಗಳಲ್ಲಿ ಅವನ ಕಾರು 'ಸೆಂಚುರಿ' ಕಛೇರಿಯ ಮುಂದೆ ಬಂದು ನಿಂತಿತು.

ಮೂರ್ತಿ ಕ್ಷಣಕಾಲ ಸೆಂಚುರಿ ಕಟ್ಟಡವನ್ನು ದಿಟ್ಟಿಸಿ ನೋಡಿದ.

'ಅದೇ ಹಳೆಯಕಟ್ಟಡ. ಅವೇ ಹಳೆಯ ಯಂತ್ರಗಳ ಕಿವಿ ಗಡಚಿಕ್ಕುವ ನಾದ. ಅದರಿದೇ ಅಲ್ಲವೇ ನನ್ನ ವಿಶ್ವವಿದ್ಯಾನಿಯ—ಇಲ್ಲಿಯೇ ಅಲ್ಲವೇ ನಾನು ಮೂವರು ಮಹಾತ್ಯಾಗಿಗಳನ್ನು ಕಂಡುದು—ಇಲ್ಲಿಯೇ ಅಲ್ಲವೇ ನಾನು ಸೇವಾದೀಕ್ಷೆ ಪಡೆದುದು' ಎಂದುಕೊಂಡ.

ಮೂರ್ತಿಗೆ ಸೆಂಚುರಿ ಕಟ್ಟಡ ಹಳೆಯ ವೃತ್ತಪತ್ರಿಕೆಯೊಂದರ ಕಛೇರಿಯಾಗಿರಲಿಲ್ಲ—ಪವಿತ್ರ ಪುರಾತನ ದೇವಾಲಯವಾಗಿತ್ತು–ಸತ್ಯದೇವಿಯ ಮೆಚ್ಚಿನ ಮಂದಿರವಾಗಿತ್ತು.

ಆಫೀಸ್‌ರೂಮಿನ ಮೇಜಿನಮುಂದೆ ನಿಂತು ಹೊಸದಾಗಿ ಬಂದಿದ್ದ ಮೊಳೆಗಳ (Types)ಪೊಟ್ಟಣಗಳನ್ನು ಬಿಚ್ಚುತ್ತಿದ್ದ ರಾಡ್‌ರೀಗಸ್ ದಾವ್ಲೆಯನ್ನು ಕಂಡು ಆಶ್ಚರ್ಯದಿಂದ

"ಅಣ್ಣಾ ಸಾಹೇಬ್!" ಎಂದ.

"ನಾನಾ, ದಸ್ತೂರ್ ಎಲ್ಲಿ ರಾಡ್ ?"

"ಮೆಷೀನ್‌ರೂಮಿನಲ್ಲಿದ್ದಾರೆ–ಕರೆಯುತ್ತೇನೆ."

"ನಾನು ಬಂದಿದ್ದೇನೆಂದು ಹೇಳಬೇಡ."

ರಾಡರೀಗಸ್ ಒಳಗೆ ಹೋದ ಐದು ನಿಮಿಷಗಳಲ್ಲಿ ಆಫೀಸ್‌ರೂಮಿಗೆ ಬಂದ ನಾನಾ, ದಸ್ತೂರ್ ತಮ್ಮ ಕಣ್ಣನ್ನು ತಾವೇ ನಂಬದಾದರು.

'ಪ್ರಸಾದ್—ಮೇಥಾ—ದಾವ್ಲೆ !!!'

ಪರಸ್ಪರಾಲಿಂಗನವಾದ ಮೇಲೆ ದಸ್ತೂರ್

"ಯಾವಾಗ ಬಂದೆ ಪ್ರಸಾದ್" ಎಂದು ಕೇಳಿದ.

"ಡೆಕ್ಕನ್ ಕ್ವೀನಿನಲ್ಲಿ (Deccan Queen) ಬಂದೆ."

"ನಮಗೊಂದು ಮಾತು ತಿಳಿಸಬಾರದಾಗಿತ್ತೇ ?"

ಮೂರ್ತಿ ಮೇಥನ ಮುಖ ನೋಡಿದ.

ದಸ್ತೂರ್ ಸುಳ್ಳುಕೋಪ ನಟಿಸುತ್ತ

"ದಾವ್ಲೆಯನ್ನೇಕೆ ಕರೆದುಕೊಂಡು ಬಂದೆ ಪ್ರಸಾದ್ ?" ಎಂದ.

"ದಾವ್ಲೆಯೇ ನನ್ನನ್ನು ಕರೆದುಕೊಂಡುಬಂದ ದಸ್ತೂರ್."

"ಇವನು ನಮ್ಮೊಂದಿಗೆ ಜಗಳವಾಡಿಕೊಂಡು ಓಡಿಹೋಗಿದ್ದಾನೆ."

ಎಂದು ನಾನಾ ಸೇರಿಸಿದ.

"ಇಲ್ಲ ಪ್ರಸಾದ್—ಇವರೇ ನನ್ನನ್ನು ಓಡಿಸಿದರು."

"ಬೇಡ ಬೇಡ—ಸುಳ್ಳುಹೇಳಿದರೆ ಟೈಪಿನ ಪೊಟ್ಟಣಗಳನ್ನೆಲ್ಲಾ ನಿನ್ನ ತಲೆಯ ಮೇಲೆ ಸುರಿದುಬಿಡುತ್ತೇನೆ"

ಎಂದು ದಸ್ತೂರ್ ಹೆದರಿಸಿದ.

ಮೂರ್ತಿ ಬಂದಿರುವ ಸುದ್ದಿ ಪ್ರೆಸ್ಸಿನಲ್ಲಿ ಹಬ್ಬಲು ತಡವಾಗಲಿಲ್ಲ. ರಾಡ್ ರೀಗಸ್ಸನನ್ನು ಮುಂದಿಟ್ಟುಕೊಂಡು ಎಲ್ಲರೂ ಆಫೀಸ್‌ರೂಮ್ ಬಳಿಗೆ ಬಂದರು.

ಮೂರ್ತಿ ಎದ್ದುಹೋಗಿ ಎಲ್ಲರನ್ನೂ ಮಾತನಾಡಿಸಿ ಕುಶಲಪ್ರಶ್ನೆಮಾಡಿ

"ರಾಡ್, ಎಲ್ಲರಿಗೂ ಉಪಹಾರ, ಚಹಾ ತರಿಸಿಕೊಡು"

ಎಂದು ರಾಡ್‌ರೀಗಸ್ ಕೈಗೆ ಹತ್ತು ರೂಪಾಯಿ ಹಾಕಿದ.

"ಲಲಿತಾ ಬಹೆನ್ ಬಂದಿದ್ದಾರೆಯೇ ಪ್ರಸಾದ್ ?"

ಎಂದು ನಾನಾ ಕೇಳಿದ.

"ಬಂದಿದ್ದಾರೆ—"

"ಈಚೆಗೆ ನೀನು ಕಾಗದ ಬರೆಯುವುದನ್ನೂ ಬಿಟ್ಟುಬಿಟ್ಟೆ."

"ಪ್ರಸಾದನ ಸಾಹಿತ್ಯಸೃಷ್ಟಿ ನೋಡಿದರೆ ನೀನು ಆಶ್ಚರ್ಯಪಡುವೆ ನಾನಾ"

ಎಂದು ಮೇಥಾ ಹೇಳಿದ.

"ನಾಳೆಯೇ ಪ್ರಯಾಣ ಸಿದ್ಧಮಾಡಿಕೊಂಡು ಬಂದಿರುವೆಯಷ್ಟೆ!"

ಎಂದು ದಸ್ತೂರ್ ಕೇಳಿದ.

ಮೂರ್ತಿ ನಕ್ಕು

"ಇಲ್ಲ ದಸ್ತೂರ್—ನೀನು ಆಚೆಗೆ ದೂಡುವವರೆಗೂ ನಾನು ಮುಂಬಯಿ ಬಿಡುವುದಿಲ್ಲ. ಮೇಥನ ಮನೆಯಲ್ಲಿ ಸುಖವಾಗಿ ಊಟೋಪಚಾರ ಕಳೆದು ಹೋಗುತ್ತದೆ—ಇನ್ನು ಏತಕ್ಕೆ ಯೋಚನೆ ಮಾಡಬೇಕು."

ರಾಡ್‌ರೀಗಸ್ ಚೂಡಾ, ಖಾರಾ ಬಿಸ್ಕತ್ತು, ಪ್ರೇಸ್ಟ್ರಿ ಕೇಕ್ಸ್ ಜತೆಯಲ್ಲಿ ಚಹಾ ತಂದು ಮೇಜಿನ ಮೇಲಿಟ್ಟ.

ತಮಗೆ ಬೇಕಾದ ತಿನಿಸುಗಳನ್ನು ಎಲ್ಲರೂ ಕೈಗೆತ್ತಿಕೊಂಡರು. ಮೂರ್ತಿ ಚಹಾ ಕಪ್ಪು ತೆಗೆದುಕೊಂಡು

"ಚಹಾ ಕುಡಿಯುವುದೇ ಮರೆತುಹೋಗಿತ್ತು. ಮತ್ತೆ ಈಗ ಅಭ್ಯಾಸ ಮಾಡಿಕೊಳ್ಳಬೇಕಾಗಿದೆ."

ಉಪಾಹಾರ ಸೇವಿಸಿದ್ದು ಮುಗಿದು, ಎಲ್ಲರೂ ಚಹಾ ಕುಡಿದಮೇಲೆ ಒಳಕ್ಕೆ ಬಂದ ರಾಡರೀಗಸ್

"ಸಾರ್" ಎಂದ.

"ಏನು ರಾಡ್" ಎಂದು ದಸ್ತೂರ್ ಕೇಳಿದ.

"ಪ್ರಸಾದರ ಆಗಮನದ ಸಂತೋಷಾರ್ಥವಾಗಿ ಇವತ್ತು ರಜಾ ಕೊಡಬೇಕೆಂದು ಕೆಲಸಗಾರರು ಕೇಳುತ್ತಿದ್ದಾರೆ."

ದಸ್ತೂರ್ ಗಂಭೀರವಾಗಿ

"ನನ್ನನ್ನೇನು ಕೇಳುತ್ತೀ ರಾಡ್. ನಿಮ್ಮ ದೊಡ್ಡ ಯಜಮಾನರು ದಾವ್ಲೆ ಸಾಹೇಬರು ಬಂದಿದ್ದಾರೆ—ಅವರನ್ನೇ ಕೇಳು" ಎಂದ.

ದಾವ್ಲೆ ಸುಪ್ರಸನ್ನನಾಗಿ

"ರಜಾ ಮಂಜೂರಾಗಿದೆ—ಎಲ್ಲರೂ ಮನೆಗೆ ಹೋಗಬಹುದು" ಎಂದ.

ಅವನ ಯಜಮಾನಿಗೆ ಕಂಡು ಎಲ್ಲರೂ ಗಹಗಹಿಸಿ ನಕ್ಕರು.

ಮೂರ್ತಿ ಕಳಕಳಿಯಿಂದ

"ಈ ಸಂಸಾರ ಎಂದಿಗೂ ಒಡೆಯಕೂಡದು" ಎಂದ.

"ಎಲ್ಲರೂ ಹಟಕ್ಕೆ ಬಿದ್ದು ತಪ್ಪುಮಾಡಿದೆವು ಪ್ರಸಾದ್. 'ಸೆಂಚುರಿ'ಯ ಮರಾಟ ಆವೃತ್ತಿ ಆಗಬೇಕೆಂದು ದಾವ್ಲೆ ಹಟ ಹಿಡಿದಾಗ, ನಾವೂ ಅಷ್ಟೆ

ಹಟಹಿಡಿದು 'ಬೇಡ' ಎಂದೆವು. ಡಾಮ್ಲೆ ರೇಗಿಕೊಂಡು ಹೊರಟೇ ಹೋದ
ಒಂದೆರಡು ದಿನವಾದ ಮೇಲೆ ನನಗೂ ನಾನನಿಗೂ ವಿವೇಕ ಬಂತು. 'ಹೇಗು
ಪ್ರಾಂತ್ಯಭಾಷೆಗಳ ಆವೃತ್ತಿಗಳನ್ನು ಪ್ರಕಟಿಸಬೇಕೆಂದು ನಾವು ವಿಚಾರ ಮಾಡು
ತ್ತಿದ್ದೇವೆ. ಡಾಮ್ಲೆ ಹೇಳಿದಂತೆ ಮರಾಟಿ ಆವೃತ್ತಿಯಿಂದಲೇ ಆರಂಭಿಸೋಣ
ಎಂದು ನಾನಾ ಹೇಳಿದ. ನಾನೂ ಒಪ್ಪಿಕೊಂಡೆ. ಆ ಹೊತ್ತಿನಲ್ಲಿ ಡಾಮ್ಲೆ
ಇಲ್ಲಿಗೆ ಬಂದುಬಿಟ್ಟದ್ದರೆ ವ್ಯಾಜ್ಯ ಇಷ್ಟು ಮುಂದುವರಿಯುತ್ತಲೇ ಇರುತ್ತಿರಲಿಲ್ಲ
ಅವನೂ ಬೀಗಿಕೊಂಡು ಕುಳಿತ—ನಾವೂ ಬೀಗಿಕೊಂಡೆವು."

"ನನ್ನದು ತಪ್ಪಾಯಿತು—ಕ್ಷಮಿಸಿ ದಸ್ತೂರ್—ನಾನಾ"

ಎಂದು ಡಾಮ್ಲೆ ವಿನಯಪೂರ್ವಕವಾಗಿ ಬೇಡಿದ.

"ಡಾಮ್ಲೆ, ನಾವು ದಿನಕ್ಕೆ ಹತ್ತು ಸಲ ವ್ಯಾಜ್ಯ ಕಾಯೋಣ—
ಕಂಪೋಸಿಂಗ್ ಸ್ಟಿಕ್ (Composing stick) ತೆಗೆದುಕೊಂಡು ಹೊಡೆ
ದಾಡೋಣ. ಆದರೆ ಒಬ್ಬರನ್ನು ಬಿಟ್ಟು ಒಬ್ಬರು ಹೋಗುವುದು ಬೇಡ.
ನೋಡು—ಇವತ್ತು 'ಸೆಂಚುರಿ' ಅನುಕೂಲಸ್ಥಿತಿಯಲ್ಲಿದೆ—ನಮ್ಮ ಜಾಬ್
ಡಿಪಾರ್ಟ್‌ಮೆಂಟ್‌ನಿಂದಲೂ (Job Department) ಚೆನ್ನಾಗಿ ಸಂಪಾದನೆ
ಯಾಗುತ್ತಿದೆ—ಈ ಸ್ಥಿತಿಗೆ ನಮ್ಮ ಮುದ್ರಣಾಲಯ, ಪತ್ರಿಕೆ ಬರಬೇಕಾದರೆ
ನೀನು, ನಾನೂ, ನಾನಾ, ಪ್ರಸಾದ್ ಪಟ್ಟಿರುವ ಶ್ರಮ ಅಷ್ಟಿಷ್ಟಲ್ಲ. ನಮ್ಮ
ಒಮ್ಮತಿಸಮ್ಮತಿ ಕಂಡೇ ಮೇಥಾ, ಸರ್ದಾರ್ ಕೈತುಂಬ ಹಣಕೊಟ್ಟು, ಪತ್ರಿಕೆ
ಯನ್ನು ವಿಪತ್ತುಗಳಿಂದ ಕಾಪಾಡಿದ್ದಾರೆ—ನೀನು ಹೋದ ಮೇಲೆ ನಾನಾ
ನಾನೂ ಏನು ಯೋಚಿಸಿದೆವು ಬಲ್ಲೆಯಾ ?"

"ಏನು ಯೋಚಿಸಿದಿರಿ ?"

"ಪತ್ರಿಕೆ, ಪ್ರೆಸ್ಸು ಎಲ್ಲಾ ಮಾರಿ, ಒಂದು ಭಾಗ ಕೆಲಸಗಾರರಿಗೆ ಕೊಟ್ಟು,
ನಿನ್ನ ಭಾಗ ನಿನಗೆ ಕೊಟ್ಟು—ಉಳಿದುದನ್ನು ನಾವಿಬ್ಬರೂ ಹಂಚಿಕೊಳ್ಳುವುದೆಂದು.
ನಮ್ಮ ಯೋಚನೆಗೆ ಅಡ್ಡಬಂದವನೇ ರಾಡ್‌ರೀಗಸ್—'ಅಣ್ಣಾಸಾಹೇಬರು
ಬಂದೇಬರುವರು ಸಾರ್—ಸೆಂಚುರಿ ಬಿಟ್ಟು ಅವರಾದರೂ ಇರಲು ಸಾಧ್ಯವೇ'
ಎಂದು ಹೇಳಿದ."

"ಅವನು ನನ್ನಲ್ಲಿಯೂ ಬಂದು ಹಲವು ಬಾರಿ ಕರೆದ."

"ತೆಗೆದುಕೋ ಡಾಮ್ಲೆ—ಸೆಂಚುರಿಯ ಸಮಸ್ತ ಆಸ್ತಿಯೂ ನಿನ್ನದು—

ನಿನಗೆ ಹೇಗೆ ಸೂಕ್ತವೋ ಹಾಗೆ ಮಾಡು—ಮರಾಟಿ ಪತ್ರಿಕೆ ಮಾಡಬೇಕೆನ್ನಿಸಿದರೆ ಇಂದೇ ಆರಂಭಿಸು—ನಾವು ಚಕಾರಶಬ್ದವೆತ್ತುವುದಿಲ್ಲ."

ಎಂದು ದಸ್ತೂರ್ ಹೇಳಲು ಉತ್ಕಂಠಿತನಾದ ದಾವ್ಲೆ

"ಬೇಡ ದಸ್ತೂರ್ ಭಾಯ್—ಪತ್ರಿಕೆ, ಪ್ರೆಸ್ಸು ಮೊದಲಿನಂತೆಯೇ ನಡೆದುಕೊಂಡು ಬರಲಿ. ಮರಾಟಿ ಪತ್ರಿಕೆ ಆರಂಭಿಸುವ ವಿಷಯ ಮುಂದೆ ಎಲ್ಲರೂ ಕೂಡಿ ಆಲೋಚಿಸೋಣ" ಎಂದ.

ಮೂರ್ತಿ, ಮೇಥಾ ಇಬ್ಬರಿಗೂ ಮಹದಾನಂದವಾಯಿತು. ಮೂರ್ತಿ ಹೊರಡಲನುವಾಗಿ

"ಇನ್ನು ನಾವು ಹೊರಡುತ್ತೇವೆ. ಮನೆಯಲ್ಲಿ ಸೆಲೀನ್ ಸೋದರಿ ಕಾದಿರುತ್ತಾರೆ" ಎಂದ.

"ಪುನಃ ನಿಮ್ಮನ್ನು ಕಾಣುವುದು ?"

"ನಾಳೆ ನೀವೇ ಎಲ್ಲರೂ ನಮ್ಮನೆಗೆ ಬನ್ನಿ—ರಾತ್ರಿ ಜತೆಯಲ್ಲಿ ಊಟ ಮಾಡೋಣ"

ಎಂದು ಮೇಥಾ ಆಹ್ವಾನಿಸಿದ.

ಗೆಳೆಯರು ಅವನ ಆಹ್ವಾನ ಅಂಗೀಕರಿಸಿದರು.

ದಾವ್ಲೆಯನ್ನು 'ಸೆಂಚುರಿ' ಕಛೇರಿಯಲ್ಲಿಯೇ ಬಿಟ್ಟು ಮೇಥಾ, ಮೂರ್ತಿ ಮಲಬಾರ್ ಹಿಲ್‌ಗೆ ಹಿಂದಿರುಗಿದರು.

## ೧೮

ಎಲ್ಲರೂ ಊಟಕ್ಕೆ ಕುಳಿತಾಗ ಸೆಲೀನ್ ಮೇಥನಿಗೆ "ಎಲ್ಲಿಎಲ್ಲಿಗೆ ಹೋಗಿ ಬಂದಿರಿ" ಎಂದು ಕೇಳಿದಳು.

"ನೀವು ಎಲ್ಲಿಗೆ ಹೋಗಿ ಬಂದಿರಿ—ವರದಿ ಒಪ್ಪಿಸಿ."

"ಕೆಲವು ಸಣ್ಣಪುಟ್ಟ ಸಾಮಾನುಗಳನ್ನು ಕೊಳ್ಳಬೇಕಾಗಿತ್ತು-ಹಾರ್ನ್‌ಬೀ ರೋಡ್‌ವರೆಗೆ ಹೋಗಿ ಬಂದೆವು."

ಮೇಥಾ ಬೆಳಗ್ಗಿನ ಕಾರ್ಯಕಲಾಪ ವಿವರಿಸುತ್ತಾ "ಪ್ರಸಾದ್ ಶಾಂತಿಸಂಧಾನಚತುರ ಸೆಲೀನ್. ಜವಾಹರಲಾಲ್‌ಜೀಯ ಅಸಿಸ್ಟೆಂಟ್ ಆಗುವುದಕ್ಕೆ ಸರ್ವವಿಧದಿಂದಲೂ ದಕ್ಷ."

"ಪಾಮ್ಲೆ 'ಸೆಂಚುರಿ'ಗೆ ಹೋದರಲ್ಲಾ-ಬಹಳ ಸಂತೋಷ. ಪ್ರಸಾದ್ ಭಾಯ್ ದೊಡ್ಡ ಕೆಲಸ ಸಾಧಿಸಿದಂತಾಯಿತು."

"ನಾನು ಮಾಡಿರುವ ಕೆಲಸ, ಅದಕ್ಕೆ ನೀವು ಕೊಡುತ್ತಿರುವ ಮನ್ನಣೆ ಕಂಡು ನನಗೊಂದು ಕಥೆ ಜ್ಞಾಪಕಕ್ಕೆ ಬರುತ್ತದೆ ಸೋದರಿ."

"ಕಥೆ ಹೇಳಿ."

"ನಮ್ಮೂರಲ್ಲಿ ಒಬ್ಬರು ಪತ್ರಿಕಾಸಂಪಾದಕರಿದ್ದರು. ಪ್ರಚಂಡ ಮನುಷ್ಯ. ಮುಂಬಯಿ, ಮದರಾಸು, ಕಲ್ಕತ್ತ, ಡೆಲ್ಲಿ ಎಲ್ಲಾ ಊರುಗಳಲ್ಲಿಯೂ ಚೊಟ್ಟೆ ಹಾಕಿ ಬೆಂಗಳೂರಿಗೆ ಬಂದು ಒಂದು ದಿನಪತ್ರಿಕೆ ಆರಂಭಿಸಿದ್ದರು. ಬೆಳಿಗ್ಗೆ ಎದ್ದು ನಗರಪರ್ಯಟನಮಾಡಿಕೊಂಡು ಬರುವುದು ಅವರ ಪದ್ಧತಿಯಾಗಿತ್ತು. ಯಾವದೋ ರಸ್ತೆ ರಿಪೇರಿಮಾಡಿಸಬೇಕೆಂದು ಮುನಿಸಿಪಾಲಿಟಿಯವರು ಜಲ್ಲಿಕಲ್ಲು ಸಂಗ್ರಹಿಸುತ್ತಿದ್ದುದೂ, ಯಾವದೋ ಚೌಕದಲ್ಲಿ ದೀಪ ಹಾಕಬೇಕೆಂದು ಎಲೆಕ್ಟ್ರಿಕ್ ಡಿಪಾರ್ಟಮೆಂಟಿನವರು ದೀಪದ ಕಂಬ ಉರುಳಿಸಿದ್ದುದೂ

ನಮ್ಮ ಸಂಪಾದಕರ ಗಮನಕ್ಕೆ ಬೀಳುತ್ತಿತ್ತು. ಅದೇ ಸಂಜೆಯ ತಮ್ಮ ಪತ್ರಿಕೆಯಲ್ಲಿ ಸಂಪಾದಕರು 'ಕಿಲಾರಿ ರಸ್ತೆ ಕೇಳುವವರೇ ಇಲ್ಲವಾಗಿದೆ. ಬೆಂಗಳೂರಿನಂಥ ಮಹಾನಗರದಲ್ಲಿ ಮುನಿಸಿಪಾಲಿಟಿ ಇದೆಯೋ ಇಲ್ಲವೋ ಎಂದು ಅನುಮಾನಬರುವಂತಾಗಿದೆ. ಈ ರಸ್ತೆ ರಿಪೇರಿ ಕಂಡು ಜನ್ಮಾಂತರ ಗಳಾದವು. ಇಲ್ಲಿ ತಲೆಯೊಡೆದುಕೊಂಡ ಮುದುಕರೆಷ್ಟೋ—ಕಾಲು ಮುರಿದು ಕೊಂಡ ಮಕ್ಕಳೆಷ್ಟೋ–ಎಡವಿಬಿದ್ದ ಹೆಣ್ಣುಮಕ್ಕಳೆಷ್ಟೊ! ಇನ್ನಾದರೂ ಮುನಿಸಿ ಪಾಲಿಟಿಯವರು ಕಣ್ಣುಬಿಟ್ಟು ನೋಡಿ ಕಿಲಾರಿರಸ್ತೆಯನ್ನು ಕೂಡಲೇ ರಿಪೇರಿ ಮಾಡಬೇಕೆಂದು ನಾವು ಆಗ್ರಹಪೂರ್ವಕವಾಗಿ ನಂಬಿರುತ್ತೇವೆ' ಎಂದು ಅಗ್ರ ಲೇಖನ ಬರೆಯುತ್ತಿದ್ದರು. ತಮ್ಮ ವ್ಯವಸ್ಥಿತ ಕಾರ್ಯಕ್ರಮದಂತೆ ಮುನಿಸಿ ಪಾಲಿಟಿಯವರು ನಾಲ್ಕಾರು ದಿನಗಳಲ್ಲಿ ರಸ್ತೆಯನ್ನು ರಿಪೇರಿಮಾಡುತ್ತಿದ್ದರು. ರಸ್ತೆ ರಿಪೇರಿಯಾದ ಮರುದಿನವೇ ಸಂಪಾದಕರು ಇನ್ನೊಂದು ಅಗ್ರಲೇಖನ ಬರೆದು 'ಕಳೆದವಾರದ ಪತ್ರಿಕೆಯಲ್ಲಿ ನಾವು ಅಗ್ರಲೇಖನ ಬರೆದು ಸೂಚಿಸಿದಂತೆ ಮುನಿಸಿಪಾಲಿಟಿಯವರು ನಮ್ಮ ಸಲಹೆ ಮಾನ್ಯಮಾಡಿ ಕಿಲಾರಿರಸ್ತೆ ರಿಪೇರಿ ಮಾಡಿರುವುದಕ್ಕೆ ಅವರಿಗೆ ಧನ್ಯವಾದಗಳನ್ನರ್ಪಿಸುತ್ತೇವೆ. ಆ ರಸ್ತೆಯಲ್ಲಿ ಓಡಿಯಾಡುವ ಮುದುಕರು, ಮೋಟರು, ಮಕ್ಕಳು ಮರಿ, ಹೆಂಗಸರು ಗಂಡಸರು ಎಲ್ಲರಿಗೂ ನಾವು ಈ ಅಲ್ಪಸೇವೆ ಸಲ್ಲಿಸುವ ಅವಕಾಶ ಸಿಕ್ಕಿದುದಕ್ಕೆ ಹರ್ಷಿಸುತ್ತೇವೆ' ಎಂದು ತಮ್ಮ ಬೆನ್ನು ತಾವೇ ಚಪ್ಪರಿಸಿಕೊಳ್ಳುತ್ತಿದ್ದರು— ನನ್ನ ಕಥೆಯೂ ಹೀಗೇ ಆಗಿದೆ" ಎಂದ.

ನಗೆ ತಡೆಯಲಾಗದೆ ಎಲ್ಲರೂ ಗಹಗಹಿಸಿ ನಕ್ಕರು.

"ನಿನ್ನ ವಿನಯ ಎಂಥವರ ಹೃದಯವನ್ನೂ ಗೆದ್ದುಬಿಡುತ್ತದೆ ಪ್ರಸಾದ್"

ಎಂದು ಮೇಥಾ ಹೇಳಲು ಲಲಿತಮ್ಮ ಥಟ್ಟನೆ

"ವಿನಯವೇ! ಊರಿನಲ್ಲಿ ಇವರನ್ನು ಏನನ್ನುತ್ತಾರೆ ಬಲ್ಲಿರಾ ಮೇಥಾ ಭಾಯ್."

"ಏನನ್ನುತ್ತಾರೆ ತಂಗಿ."

"ಮಹಾದುರಹಂಕಾರಿ ಎನ್ನುತ್ತಾರೆ."

ಮೂರ್ತಿ ಉಪೇಕ್ಷೆಯಿಂದ

"ಹೋಗಲಿ ಬಿಡು—ಅದು ಯಾವ ದೊಡ್ಡ ವಿಷಯ" ಎಂದ.

ಮೇಥನ ಕುತೂಹಲ ಕೆರಳಿತು.

"ಅದೇನು ವಿಷಯ ಹೇಳಿ—ಲಲಿತಾಬಹೆನ್" ಎಂದ.

ಹುನಗುಂದನ, ಅವನ ಮಂಡಳಿ ಮೂರ್ತಿಯ ವಿರುದ್ಧ ನಡೆಸಿದ ಅಪ ಪ್ರಚಾರ, ವಿರೋಧಗಳನ್ನು ಲಲಿತಮ್ಮ ವಿವರಿಸಿದಳು. ಮೂರ್ತಿಯ ಕೀರ್ತಿಗೆ ಮಸಿಬಳಿಯುವ ಅವರ ಪ್ರಯತ್ನದಿಂದ 'ಅಭಯಾಶ್ರಮ'ಕ್ಕೂ ಹೇಗೆ ತೊಂದರೆ ಯಾಯಿತೆನ್ನುವುದನ್ನೂ ವರ್ಣಿಸಿದಳು.

ಮೇಥನ ಮನಸ್ಸಿಗೆ ದುಃಖವಾಯಿತು. ಗದ್ಗದ ಧ್ವನಿಯಿಂದವನು

"ಯಾವನೂ ತನ್ನ ಊರಿನವರಿಗೆ ಮಹಾಪುರುಷನಲ್ಲ (No man is a hero in his Country) ತಂಗೀ—ಬೆಂಗಳೂರಿನ ಸಹವಾಸವೇ ಬೇಡವೆಂದು ಪ್ರಸಾದನಿಗೆ ನಾನು ಹೇಳಿದೆ—ಅವನು ನನ್ನ ಮಾತು ಕೇಳಲಿಲ್ಲ. ಧ್ಯೇಯ ಸಾಧನೆಗಾಗಿ ಮನಃಶಾಂತಿಯನ್ನೂ ಬಲಿಗೊಡಲು ಅವನು ಸಿದ್ಧನಾದ."

"ಈ ವಿಷಯದಲ್ಲಿ ನಿಮ್ಮೆಲ್ಲರ ಮನಸ್ಸಿಗೂ ವಿರುದ್ಧವಾಗಿ ನಾನು ನಡೆದು ಕೊಂಡಿದ್ದೇನೆ ಮೇಥಾ. ಪ್ರಾಂತ್ಯ ಭಾಷೆ, ಸಾಹಿತ್ಯದ ಉತ್ಕರ್ಷಕ್ಕೆ ದುಡಿ ಯುವುದು ನಮ್ಮ ಕರ್ತವ್ಯವಲ್ಲವೇ ? ನಾವು ನೂತನವಾಗಿ ಗಳಿಸಿರುವ ಸ್ವಾತಂತ್ರ್ಯದ ಸಂಪೂರ್ಣಕಲ್ಪನೆಯನ್ನು ಜನತೆಗೆ ಇಂಗ್ಲಿಷ್, ಹಿಂದಿ ಭಾಷೆಗಳ ಮೂಲಕ ಕೊಡಲು ಸಾಧ್ಯವೇ ?—ಸಾಹಿತ್ಯ, ಕಲೆಗಳಲ್ಲಿ ಈರ್ಷೆ, ಸ್ಪರ್ಧೆ, ಹೋರಾಟ, ವೈಮನಸ್ಯ, ಸ್ವಪ್ರತಿಷ್ಠೆಗಳಿಗೆ ಸ್ಥಾನವಿಲ್ಲ. ಒಂದೊಂದು ಭಾವನೆ ಯನ್ನು ಸಹೇತುಕವಾಗಿ, ಸಬಲವಾಗಿ ವ್ಯಕ್ತಮಾಡಲು ನಾನು ವಾರಗಟ್ಟಳೆ ಹೆಣಗಾಡಿದ್ದೇನೆ; ಕೆಲವು ಸಲ ಭಾವನೆ, ಅಭಿವ್ಯಕ್ತಿ ಎರಡೂ ಸಮರಸವಾಗಿ ಜಲಪಾತದಂತೆ ಧುಮುಕುವುದೂ ಉಂಟು. ಮನಸ್ಸನ್ನು ಹದಗೊಳಿಸಿಕೊಂಡು ಅದು ಜಾಗ್ರತ್ಸ್ವಪ್ನಸುಷುಪ್ತಾವಸ್ಥೆಗಳಲ್ಲಿ ಎಚ್ಚರವಾಗಿರುವಂತೆ ಪ್ರಯತ್ನಿಸು ವುದು ನಮ್ಮ ಕರ್ತವ್ಯ. ಈ ಕರ್ತವ್ಯಕ್ಕೆ ನಾವು ಮನಗೊಟ್ಟರೆ ಸಣ್ಣಪುಟ್ಟ ಲೌಕಿಕ ವಿಚಾರಗಳು, ಈರ್ಷೆ, ಈಪ್ಸಿತಗಳಿಗೆ ಕಾಲಾವಕಾಶವೇ ದೊರೆಯುವು ದಿಲ್ಲ."

"ಇಲ್ಲಿಯೇ ಇದ್ದುಗೊಂಡು ಆ ಕೆಲಸ ಮಾಡಬಹುದಾಗಿತ್ತಲ್ಲ !"

"ಕನ್ನಡ ನಾಡಿನಲ್ಲಿ ಇಂದು ಎರಡು ಬಗೆಯ ಕೆಲಸವಾಗಬೇಕಾಗಿದೆ ಮೇಥಾ—ಪಾಶ್ಚಾತ್ಯ ದೇಶಗಳ ಪ್ರಗತಿಗನುಗುಣವಾಗಿ ನಾವು ವಿವಿಧ ಸಾಹಿತ್ಯ

ಪ್ರಕಾರಗಳನ್ನು ಬೆಳೆಸಬೇಕಾಗಿದೆ. ಈಚೆಗೆ ನಮ್ಮಲ್ಲಿ ಕೆಲವು ಕವಿಗಳು ಈ ಲಿ ಯ ಟ್, ಆ ಡೆ ನ್, ಸ್ಪೆಂಡರ್, ಮ್ಯಾಕನೀಸ್ (Eliot, Auden, Spender, Mac Neice) ಮೊದಲಿಯಲ್ಲಿ ನವ್ಯ ಕವಿತಾರಚನೆ ಆರಂಭಿಸಿದರು. ಈ ಪರಂಪರೆಯ ವಿರುದ್ಧ ದೊಡ್ಡ ಬಂಡಾಯವೆದ್ದಿತು. ಕಾವ್ಯ ಕೀಳು ಪ್ರಬಂಧದ ದಾರಿ ಹಿಡಿಯುತ್ತಿದೆಯೆಂದು ವಿಮರ್ಶಕರು ಆಕ್ಷೇಪಿಸಿದರು. ಕೈಲಾಸಂ ನಾಟಕಗಳನ್ನು ಬರೆಯಲಾರಂಭಿಸಿ, ರೂಢಿಭಾಷೆಯನ್ನಳವಡಿಸಿ ಕೊಂಡು, ಹೇರಳವಾಗಿ ಇಂಗ್ಲಿಷ್ ಶಬ್ದಗಳನ್ನು ಬೆರೆಸಲಾರಂಭಿಸಿದಾಗಲೂ ಇದೇ ಆಕ್ಷೇಪವೆದ್ದಿತ್ತು- ಕಾ ಲ ಪ ರೀ ಕ್ಷೆ ಗೊ ಳ ಗಾ ದ ಕೈಲಾಸಂ ಕೃತಿ ಗಳು ಕನ್ನಡದ ಶಾಶ್ವತ ಸಂಪತ್ತಾಗಿ ಉಳಿದುಕೊಂಡವು. ಎರಡನೆಯ ದಾಗಿ ನಾವು ಕೆಲವು ಸ ತ್ಸಂ ಪ್ರ ದಾ ಯ ಗ ಳ ನ್ನು ಬೆಳೆಸಿಕೊಳ್ಳಬೇಕಾಗಿದೆ. ಅನಂತರೂಪ, ಗು ಣ ವು ಳ್ಳ ಸಾಹಿತ್ಯ ಏಕಪ್ರಕಾರವಾಗಿ ಬೆಳೆಯಲು ಸಾಧ್ಯವಿಲ್ಲ. ವಿವಿಧಾನುಭವ, ಭಿನ್ನರುಚಿ, ವಿಶಿಷ್ಟನೋಟ, ವೈಯಕ್ತಿಕ ಹಾಗೂ ಸಾಮೂಹಿಕ ಪ್ರತಿಕ್ರಿಯೆಗಳ ಕನ್ನಡಿಯೇ ಸಾಹಿತ್ಯವಲ್ಲವೇ ? ಇಂದು ನಮಗೆ 'ರಾಮಾಯಣ' ದಂಥ ಕೃತಿಯ ಆವಶ್ಯಕತೆ ಎಷ್ಟಿದೆಯೋ 'ಯಾಮಾ'* ದಂಥ ಕೃತಿಯ ಅವಶ್ಯಕವೂ ಅಷ್ಟೇ ಇದೆ. ಎಲ್ಲರೂ ರಾಮಾಯಣ ಬರೆಯ ಬೇಕೆನ್ನುವ ಮನೋಭಾವ, ಎಲ್ಲರೂ ಯಾಮಾ ಬರೆಯಬೇಕೆನ್ನುವ ಮನೋ ಭಾವದಷ್ಟೇ ಸಂಕುಚಿತ ಹಾಗೂ ಅಪಾಯಕಾರಿ. ಸಾಹಿತ್ಯದಲ್ಲಿ ಪಕ್ಷಗಳ ರಚನೆಯನ್ನೂ ನಾನು ವಿರೋಧಿಸುವುದಿಲ್ಲ. ಒಂದು ಅಭಿಪ್ರಾಯ ಸಮರ್ಥಿಸಲು ಸಮಾನಧರ್ಮಿಗಳು ಒಟ್ಟುಗೂಡಿ ಕೆಲಸ ಮಾಡಬೇಕಾಗುತ್ತದೆ–ಆದರೆ ಒಂದು ಪಕ್ಷ ಇನ್ನೊಂದು ಪಕ್ಷವನ್ನು ಹೀಗಳೆಯುವ ವೃತ್ತಿ ಮಾತ್ರ ಅನಪೇಕ್ಷಣೀಯ. ಅಮೃತ ಹುಟ್ಟುವುದಕ್ಕೆ ಸಮುದ್ರಮಥನವಾಗಬೇಕು—ಅಮೃತ ಹುಟ್ಟಿದ ಮೇಲೆ ದೇವದಾನವರ ಸಂಗ್ರಾಮ ಅನಿವಾರ್ಯವಾಗುತ್ತದೆ—ಅ ಮೃ ತ ದ ಜ ತೆ ಯ ಲ್ಲಿ ಗರಳವೂ ಹುಟ್ಟುತ್ತದೆ. ಲೋಕಕಲ್ಯಾಣಕ್ಕಾಗಿ ಗರಳ ಕುಡಿಯುವ ಪರಶಿವನ ಅವತಾರವೂ ಆಗಬೇಕು. ಅಮೃತವಿನಿಯೋಗ ಬಲ್ಲ ಮೋಹಿನಿಯ ಅವತಾರವೂ ಆಗಬೇಕು."

*ರಷ್ಯಾದ ಸುಪ್ರಸಿದ್ಧ ಲೇಖಕ ಅಲೆಕ್ಸಾಂಡರ್ ಕುಪ್ರಿನ್ನನ "ಯಾಮಾ–ಆರ್ ದಿ ಪಿಟ್" (Yama or the Pit)

"ಇವರು ಕನ್ನಡದ ಶಿವನಾಗಿ ಗರಳ ಕುಡಿಯುತ್ತಿದ್ದಾರಣ್ಣಾ" ಎಂದಳು ಲಲಿತ.

"ನಿಜ ಮೇಥಾ—ಲಲಿತಾ ಶಿವೆಯಾಗಿ ಗರಳ ನನ್ನ ಹೊಟ್ಟೆ ಸೇರದಂತೆ ಕುತ್ತಿಗೆ ಹಿಡಿದಿದ್ದಾಳೆ. ಅದಕ್ಕೇ ಶಿವನಿಗಿಂತಲೂ ಶಿವೆ ಹೆಚ್ಚು."

"ಶಿವೆ ಹೆಚ್ಚೇ ?"

"ನಿಸ್ಸಂದೇಹವಾಗಿ—ಸಮುದ್ರಮಥನ ಕಾಲದಲ್ಲಿ ಶಿವ ಕುಡಿದ ಗರಳ ಅವನ ಹೊಟ್ಟೆ ಸೇರಿದ್ದರೆ ಲೋಕದಲ್ಲಿ ಶಿವಾಂಶವೇ* ನಾಶವಾಗುತ್ತಿತ್ತು."

"ಇವರ ವಿಷಯ ಇದೇ ಕಷ್ಟ ಮೇಥಾಜಿ. ನಮ್ಮ ಆಕ್ಷೇಪಣೆಗಳಿಗೆಲ್ಲಾ ಸಮಾಧಾನ ಹೇಳಿ ನಮ್ಮ ಕಣ್ಣೊರೆಸಿಬಿಡುತ್ತಾರೆ. ಮಧ್ಯೆ ಮಧ್ಯೆ ನನ್ನನ್ನು ಅಟ್ಟಕ್ಕೇರಿಸಿ ತಮ್ಮ ಮಾರ್ಗವನ್ನೇ ತಾವು ಅನುಸರಿಸುತ್ತಾರೆ."

"ನಮ್ಮೆಲ್ಲರಲ್ಲಿರುವಂತೆ ಪ್ರಸಾದನಲ್ಲಿಯೂ ದೋಷಗಳಿರಬಹುದು ತಂಗಿ—ಆದರೆ ಅವನೆಂದಿಗೂ ಆತ್ಮವಂಚನೆ ಮಾಡಿಕೊಳ್ಳುವುದಿಲ್ಲ. ನಿಮ್ಮ ಬಗ್ಗೆ ಅವನಾಡುವ ಮಾತುಗಳು ಅವನ ಹೃದಯಾಂತರಾಳದಿಂದ ಬಂದುವೆಂಬುದನ್ನು ನಾನು ಚೆನ್ನಾಗಿ ಬಲ್ಲೆ."

"ಅವರು ಅಸತ್ಯ ನುಡಿಯುತ್ತಾರೆಂದು ನಾನು ಆರೋಪಿಸುತ್ತಿಲ್ಲಣ್ಣ" ಎಂದು ಲಲಿತ ಸೂಚಿಸಿದಳು.

ಊಟ ಮುಗಿದ ಮೇಲೆ ಎಲ್ಲರೂ ದಿವಾನಖಾನೆಯಲ್ಲಿ ಕುಳಿತಾಗ "ಪ್ರಸಾದ್, ನೀನು ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಬೇಕು" ಎಂದ.

"ಅದಿರಲಿ ಮೇಥಾ—ಮೊದಲು ನಿನ್ನ ಚಿತ್ರ ಸಂಪುಟ ತೋರಿಸು."

"ಇನ್ನು ಎರಡುವಾರ ನನ್ನ ಸ್ಟೂಡಿಯೋ ಒಳಗೆ ನಿನಗೆ ಪ್ರವೇಶವಿಲ್ಲ."

"ಏಕಪ್ಪಾ—ನಾನೇನು ಅನ್ಯಾಯ ಮಾಡಿದೆ."

"ಆರೋಗ್ಯ ನಿರ್ಲಕ್ಷಿಸುವ ಅನ್ಯಾಯ."

"ಎರಡು ವಾರಗಳ ತರುವಾಯವಾದರೂ ತೋರಿಸುವೆಯೋ ಇಲ್ಲವೋ ?"

"ತೋರಿಸದೇ ಉಂಟೆ ?—ನಿನ್ನಿಂದ ಕೆಲಸವಾಗಬೇಕಾಗಿದೆಯಲ್ಲ !"

ಲಲಿತಮ್ಮ ಬಾಗಿಲ ಕಡೆ ನೋಡುತ್ತಾ

---

* ಶಿವ = ಮಂಗಳ, ಶುಭ, ಮಹೇಶ್ವರ, ಧವಳ, ಶುಭ್ರ.

"ಸರ್ದಾರ್ ಬರಲೇ ಇಲ್ಲ" ಎಂದಳು.

"ಸಂಜೆಗೆ ಖಂಡಿತ ಬರುತ್ತಾರೆ ತಂಗಿ—ಯೋಚಿಸಬೇಡಿ."

ಸೆಲೀನ್ ಲಲಿತಮ್ಮನನ್ನೂ ನಿರ್ಮಲನನ್ನೂ ಒಳಕ್ಕೆ ಕರೆದೊಯ್ದಳು.

ಮೇಥಾ, ಮೂರ್ತಿ ಹಜಾರದಲ್ಲಿದ್ದ ಸೋಫಾಗಳ ಮೇಲೆ ಕಾಲು ಚಾಚಿ ಮಲಗಿದರು.

ಇಬ್ಬರಿಗೂ ನಿದ್ರೆ ಬರಲಿಲ್ಲ.

ಇಬ್ಬರಿಗೂ ನೂರಾರು ಚಿಂತೆಗಳು !

"ಮೇಥಾ...."

"ಏನು ಪ್ರಸಾದ್."

"ಕಲೆ ವಿಶ್ವವ್ಯಾಪಿ—ಅದಕ್ಕೆ ದೇಶಕೋಶಗಳ ಬಂಧನವಿಲ್ಲ ಎನ್ನುವ ಮಾತು ನೀನು ಒಪ್ಪುವೆಯಾ ?"

"ಶಾಂತಿನಿಕೇತನ ನೆನಪಿದೆಯೇ ಪ್ರಸಾದ್."

"ಅದನ್ನು ಮರೆಯಲು ಸಾಧ್ಯವೇ ?"

"ಅಲ್ಲಿ ಊಟವಾದ ಮೇಲೆ ಒಂದೆರಡು ಗಂಟೆ ನಾವು 'ಮೌನಕಾಲ' (Silent hour) ಆಚರಿಸುತ್ತಿದ್ದೆವು—ನೆನಪಿದೆಯೇ ?"

"ಬಾಯಿ ಮುಚ್ಚಿಕೊಂಡು ಸ್ವಲ್ಪ ಹೊತ್ತು ಬಿದ್ದುಕೋ ಎಂದು ಹೇಳುತ್ತಿರುವೆಯಲ್ಲವೇ ?"

"ಹೂ ಅದೇ ಅರ್ಥ—ಸ್ವಲ್ಪ ನಯವಾಗಿ ಹೇಳಿದೆ."

ಮೂರ್ತಿ ನಕ್ಕು 'ಹಾಗೇ ಆಗಲಪ್ಪಾ' ಎಂದ.

೧೯

ಮೂರ್ತಿ, ಮೇಥಾ ಇಬ್ಬರಿಗೂ ಸುಖವಾದ ನಿದ್ರೆ ಹತ್ತಿತು.

ಶಬ್ದ ಮಾಡದಂತೆ ಒಳಗೆ ಪ್ರವೇಶಿಸಿದ ಸರ್ದಾರ್ ತಾರಾಸಿಂಗ್ 'ಇಲ್ಲಸ್ಟ್ರೇಟೆಡ್ ವೀಕ್ಲಿ' (Illustrated Weekly) ಪತ್ರಿಕೆಯ ಚಿತ್ರಗಳನ್ನು ನೋಡುತ್ತ ಕುಳಿತ.

"ಯಾವಾಗ ಬಂದಿರಿ ಸರ್ದಾರ್" ಎಂದು ಕೇಳಿದ.

"ಒಂದು ಗಂಟೆಯಾಗಿರಬಹುದು."

"ನನ್ನ ಎಬ್ಬಿಸಬಾರದಾಗಿತ್ತೇ!"

"ನಿಮ್ಮ ಸುಖನಿದ್ರೆ ಕೆಡಿಸಲು ಮನಸ್ಸಾಗಲಿಲ್ಲ."

"ಪ್ರಸಾದನಿಗೆ ವಿಶ್ರಾಂತಿ ಕೊಡಲು ನಾನೂ ನಿದ್ರೆ ಮಾಡಬೇಕಾಯಿತು."

"ಆಗಲಿ—ಅದರಲ್ಲೇನು ತಪ್ಪು–ಪ್ರಸಾದರಿಗೆ ಮೈಯಲ್ಲಿ ಸೆಟ್ಟಗಿಲ್ಲವೇ?"

ಮೂರ್ತಿಯ ಆರೋಗ್ಯದ ವಿಷಯ ವಿವರಿಸಿ ಮೇಥಾ

"ಇವನ ಆರೋಗ್ಯ ನಾವು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾಗಿದೆ" ಎಂದ.

"ಈ ಭಾವಜೀವಿಗಳಿಗಿಂತ ನನ್ನಂತೆ ಕಲ್ಲುಮಣ್ಣು ಹೊರುವ ಶ್ರಮಜೀವಿಗಳೇ ಸುಖಿಗಳು ಮೇಥಾಜಿ."

ಮೂರ್ತಿ ಮೆಲ್ಲನೆ ಕಣ್ಣು ಬಿಟ್ಟು ನೋಡಿ, ಸರ್ದಾರ್ ಬಂದಿರುವುದನ್ನು ತಿಳಿದು, ಎದ್ದು ಬಂದು

"ಯಾವಾಗ ಬಂದೆ ಸರ್ದಾರ್" ಎಂದು ಅಪ್ಪಿದ.

"ಸ್ವಲ್ಪ ಹೊತ್ತಾಯಿತು. ಬೆಳಿಗ್ಗೆ ಸ್ಟೇಷನ್ನಿಗೆ ಬರಲಾಗಲಿಲ್ಲ—ಕ್ಷಮಿಸಿ."

"ಊರಿನಲ್ಲಿರಲಿಲ್ಲವೇ ?"

"ಸ್ವಲ್ಪ ಹಣ ಬರುವುದಿತ್ತು—ಬಾಂದ್ರಾಕ್ಕೆ ಹೋಗಿದ್ದೆ."

"ಹೋಗಿದ್ದ ಕೆಲಸವಾಯಿತೇ ?"

"ಅರ್ಧ ಆಯಿತು. ಲಲಿತಾ ಬಹೆನ್ ಬಂದಿರುವರೇ ?"

"ಬಂದಿದ್ದಾಳೆ—ನಿರ್ಮಲನೂ ಬಂದಿದ್ದಾಳೆ."

"ಮುಂಬಯಿಗೆ ನಿಮ್ಮನ್ನು ಬರಮಾಡಿಕೊಳ್ಳಬೇಕೆಂಬ ನಮ್ಮ ಕನಸು ನನಸಾಯಿತು."

"ಪುನರ್ಮಿಲನ ಅಗಲಿಕೆಯ ನೋವನ್ನು ಮರೆಸುವುದೇ ಸರ್ದಾರ್."

"ನಿಮ್ಮೆಲ್ಲಾ ಚಿಂತೆಗಳನ್ನೂ ಮರೆತು ಕೆಲವು ದಿನವಾದರೂ ನೀವು ಸುಖವಾಗಿರಬೇಕು."

"ಇರುತ್ತೇನೆ ಸರ್ದಾರ್. ಅದಕ್ಕಾಗಿ ನಿಮ್ಮಲ್ಲಿಗೆ ಧಾವಿಸಿಬಂದೆ."

ಮೇಥಾ ಸುದ್ದಿ ಮುಟ್ಟಿಸಿದ ಕೂಡಲೇ ಸೆಲೀನ್, ಲಲಿತಮ್ಮ ಬಂದು ಸರ್ದಾರನಿಗೆ ಸ್ವಾಗತ ಬಯಸಿದರು. ಸರ್ದಾರನ ಕಣ್ಣುಗಳು ನಿರ್ಮಲನನ್ನು ಹುಡುಕಿದುದನ್ನು ಕಂಡ ಲಲಿತಮ್ಮ

"ಇಲ್ಲಿಯೇ ಬಾ ನಿರ್ಮಲಾ–ನೋಡು, ಯಾರು ಬಂದಿದ್ದಾರೆ" ಎಂದಳು.

ನಸುನಗುತ್ತಾ ಬಂದ ನಿರ್ಮಲ ಸರದಾರನಿಗೆ ಕೈಮುಗಿದಳು.

ಮೇಥಾ, ಮೂರ್ತಿ ಮುಖಮಾರ್ಜನೆ ಮುಗಿಸಿಕೊಂಡು ಬಂದ ಮೇಲೆ ಚಹಾ ವಿನಿಯೋಗವಾಯಿತು.

ಸಂಜೆಯ ಕಾರ್ಯಕ್ರಮ ಚರ್ಚೆಯಾಗಿ ಕೊನೆಗೆ ಎಲ್ಲರೂ ಜುಹೂ ಬೀಚಿಗೆ (Juhu Beach) ಹೋಗುವುದೆಂದು ನಿಶ್ಚಯವಾಯಿತು.

ಜತೆಗೆ ಡ್ರೈವರ್ ಬಂದರೆ, ಮೇಥನ ಕಾರಿನಲ್ಲಿ ಎಲ್ಲರಿಗೂ ಸ್ಥಳವಾಗುವುದಿಲ್ಲವೆಂದು ಗ್ರಹಿಸಿದ ಸರ್ದಾರ್ ತಾನೇ ಕಾರ್ ನಡೆಸಲು ಮುಂದುವರಿದ.

'ಸಂಧ್ಯಾರಾಗ' ಮೂಡಿರುವಂತೆಯೇ ಕಾರು ಜುಹೂ ಬೀಚ್ ಸೇರಿತು. ಕಾರನ್ನು ಒತ್ತಟ್ಟಿಗೆ ಬಿಟ್ಟು ಎಲ್ಲರೂ ಮಳಲುರಾಶಿಯ ಮೇಲೆ ನಡೆದು ಹೋದರು.

ಲಲಿತ, ನಿರ್ಮಲಾ ಅಲ್ಲಲ್ಲಿ ಬಿದ್ದಿದ್ದ ಕಪ್ಪೆಯಚಿಪ್ಪುಗಳನ್ನಾರಿಸಿಕೊಂಡರು.

ಮಳಲುರಾಶಿಯ ಮೇಲೆ ಸಮುದ್ರವೆದುರು ಕುಳಿತ ಮೂರ್ತಿ ತನ್ನ ಮುಂದಿದ್ದ ಭವ್ಯ ದೃಶ್ಯ ಕಂಡು ಪರವಶನಾದ. ಮಿಸುನಿಬಣ್ಣ ತಳೆದಿದ್ದ ಸಂಧ್ಯಾಸೂರ್ಯ ಅದೇ ಅಸ್ತಮಿಸುತ್ತಿದ್ದ. ಭಗವಂತನಿಗೆ ಸ್ವಾಗತ ಬಯಸುವ ಚೇಟಿಯರಂತೆ ಸಮುದ್ರದ ಅಲೆಗಳು ಧೀರಗಂಭೀರವಾಗಿ ನೃತ್ಯ ಮಾಡುತ್ತಿದ್ದವು. ನೀಲನಭವೆದುರು ಆಗಾಗ್ಗೆ ಶ್ವೇತಬಕಗಳ ಸಾಲು ಹಾರಿ ಹೋಗುತ್ತಿದ್ದವು. ಪ್ರಶಾಂತ ಪ್ರಕೃತಿ ತನ್ನ ಸಂಧ್ಯಾಮೀಯಕ್ಕೆ ಹೊರಟಿದ್ದಳು. ರೊಯ್ಯನೆ ಬೀಸುತ್ತಿದ್ದ ಮಾರುತ ಅಲೆಗಳ ಮಂಜುಳನಾದವನ್ನು ನಲ್ಲನ ನಳಿತೋಳನ್ನಪ್ಪುವ ನಲ್ಲೆಯಂತೆ ಅಪ್ಪಿತ್ತು.

ಭಾವಸಮಾಧಿಯಿಂದ ಬಹಿರ್ಮುಖನಾದ ಮೂರ್ತಿ

"ಈ ವರ್ಣವೈಖರಿಯನ್ನು ನಿನ್ನ ಕುಂಚ ಚಿತ್ರಿಸಬಲ್ಲುದೇ ಮೇಥಾ" ಎಂದು ಕೇಳಿದ.

"ಈ ಸೌಂದರ್ಯರಾಶಿಯ ಒಂದಂಶವನ್ನು ನಾನು ವೇಶ್ಮದ ಮೇಲೆ ಸೆರೆಹಿಡಿಯಲು ಸಾಧ್ಯವಾದ ದಿನ ನನ್ನ ಕಲೆ ಸಾರ್ಥಕವಾಯಿತೆಂದು ಭಾವಿಸುತ್ತೇನೆ."

"ತತ್-ತ್ವಂ-ಅಸಿ-ಆದರೆ ಆ ಶಿಲ್ಪಿ ನಮ್ಮನ್ನೇಕೆ ಸೋಲಿಸುತ್ತಾನೆ."

"ತ್ವಂ ಇನ್ನೂ ತತ್ ಆಗಿಲ್ಲದಿರುವುದರಿಂದ!"

"ಎಂದಿಗಾದರೂ ಆಗಬಲ್ಲುದೇ ಮೇಥಾ."

"ನಮ್ಮ ಯಶಸ್ಸು ಪ್ರಯತ್ನಶೀಲತೆಯ ಪ್ರಮಾಣವನ್ನನುಸರಿಸುವುದೆಂದು ಕಾಣುತ್ತದೆ."

ತಾವು ಅಲ್ಲಿರುವುದನ್ನು ಮರೆತು ನಿಸರ್ಗ ಸೌಂದರ್ಯದಲ್ಲಿ ಅನುರಕ್ತರಾಗಿದ್ದ ಗೆಳೆಯರನ್ನು ನೋಡಿ ಲಲಿತಾ

"ಕವಿ, ಕಲಾವಿದರು ಬಹಳ ಸ್ವಾರ್ಥಿಗಳಪ್ಪಾ!" ಎಂದಳು.

"ಏಕೆ ಲಲಿತಾ?" ಎಂದು ಮೂರ್ತಿ ಕೇಳಿದ.

"ಹೋದೆಡೆ ನಿಮ್ಮ ಪ್ರಪಂಚ ಸೃಷ್ಟಿಮಾಡಿಕೊಂಡು, ನಮ್ಮನ್ನು ಹೊರಬಾಗಿಲಿನಲ್ಲಿ ನಿಲ್ಲಿಸುತ್ತೀರಿ."

"ಕ್ಷಮಿಸಿ—ಲಲಿತಾ ಬಹೆನ್"

ಎಂದು ಮೇಥಾ ತನ್ನ ಪರವಾಗಿ, ಮೂರ್ತಿಯ ಪರವಾಗಿ ಕ್ಷಮೆ ಯಾಚಿಸಿದ.

ಮೂರ್ತಿ ಸರ್ದಾರರನ ಕಡೆ ತಿರುಗಿ

"ಈಗ ಬಿಸಿನೆಸ್ (Business) ಹೇಗೆ ನಡೆದಿದೆ ಸರ್ದಾರ್."

"ಮುಂಬಯಿ ವಿಷಯ ನಿನಗೆ ಒಂದೂ ಗೊತ್ತೇ ಇಲ್ಲ ಪ್ರಸಾದ್."

"ನೀವು ತಿಳಿಸಿದಲ್ಲದೆ ಹೇಗೆ ಗೊತ್ತಾಗಬೇಕು."

"ಬಾಂದ್ರಾದಲ್ಲಿ ಸರ್ದಾರ್ ಮನೆ ಕಟ್ಟಿದ್ದಾರೆ."

"ನಿಜವೇ ?"

"ನಿಜ ಪ್ರಸಾದ್. ಬೆಂಗಳೂರಿನಿಂದ ನಾನು ಹಿಂದಿರುಗಿದ ಮೇಲೆ ಕೆಲವು ಭಾರಿ ಕಂಟ್ರಾಕ್ಟುಗಳು (Contract) ಸಿಕ್ಕಿದವು—ಕೈತುಂಬ ಹಣ ಬಂತು. ನಾನು ಮನೆ ಕಟ್ಟುವಂತೆ ಮಾಡಿದವರೇ ಮೇಥಾಜಿ, ಸೆಲೀನ್ ಬಹೆನ್."

"ನಮಗೆ ನಿಮ್ಮ ಮನೆ ತೋರಿಸುವುದಿಲ್ಲವೇ ಸರ್ದಾರ್‌ಜೀ"

ಎಂದು ಲಲಿತಮ್ಮ ಕೇಳಿದಳು.

"ಅದೇ ಕಾರಣಕ್ಕಾಗಿಯೇ ನಾನು ಬೆಳಿಗ್ಗೆ ಸ್ಟೇಷನ್ನಿಗೂ ಬರದೆ ಓಡಿ ಹೋದುದು."

"ಮನೆ ದೊಡ್ಡದೇ."

"ಮೂರು ಅಂತಸ್ತಿದೆ—ಕೆಳಗಿನ ಎರಡು ಅಂತಸ್ತುಗಳನ್ನು ಬಾಡಿಗೆಗೆ ಕೊಟ್ಟಿದ್ದೇನೆ. ಮೇಲಿನ ಅಂತಸ್ತನ್ನು ಸ್ವಂತಕ್ಕಾಗಿ ಉಳಿಸಿಕೊಂಡಿದ್ದೇನೆ."

"ನಾವು ಮುಂಬಯಿಯಲ್ಲಿ ನೆಲಸುವುದಾದರೆ ಮನೆ ಬಾಡಿಗೆ ಕೊಡಬೇಕಾದ್ದಿಲ್ಲ ಲಲಿತಾ"

ಎಂದು ಮೂರ್ತಿ ಸಂತೋಷದಿಂದ ಹೇಳಿದ.

ಒಂದು ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದ ನಿರ್ಮಲನನ್ನು ನೋಡಿ ಸೆಲೀನ್

"ಬೆಂಗಳೂರಿಗೆ ಹೋದಮೇಲೆ ಮಾತಾಡುವುದನ್ನೇ ಮರೆತೆಯಾ ನಿರ್ಮಲಾ ಬಹೆನ್" ಎಂದು ಕೇಳಿದಳು.

ನಿರ್ಮಲಾ ನಸುನಾಚಿ

"ಇಲ್ಲ ಇಲ್ಲ" ಎಂದಳು.

ತನ್ನ ಹೃದಯದಲ್ಲಾಗುತ್ತಿದ್ದ ಆಂದೋಲನದ ಮೇಲೆ ಅವಕುಂಠನ ಹಾಕಲು ಸರ್ದಾರ್

"ಬನ್ನಿ, ಫ್ರೆಂಚ್ ಕೆಫೆಗೆ ಹೋಗಿ ತಂಪಾದ ಪಾನೀಯಗಳನ್ನಾದರೂ ಕುಡಿದು ಬರೋಣ" ಎಂದ.

"ನಮಗೇನೂ ಬೇಡ—ಹೆಣ್ಣುಮಕ್ಕಳಿಗೆ ಐಸ್‌ಕ್ರೀಮ್ ಕೊಡಿಸೋಣ ಸರ್ದಾರ್"

ಎಂದು ಮೇಥಾ ಹೇಳಿದ.

"ಐಸ್‌ಕ್ರೀಮ್ ಕೋನ್‌ಗಳೇ (Cone) ಸಿಕ್ಕುತ್ತವೆ. ನಾನು ಹೋಗಿ ಇಲ್ಲಿಗೇ ತರುತ್ತೇನೆ."

"ನೀವೊಬ್ಬರೇ ಹೊರಡುವುದಕ್ಕಾಗುವುದಿಲ್ಲ ಸರ್ದಾರ್–ನಿರ್ಮಲನನ್ನೂ ಜತೆಯಲ್ಲಿ ಕರೆದುಕೊಂಡುಹೋಗಿ"

ಎಂದು ಸೆಲೀನ್ ಹೇಳಿ

"ಹೋಗು—ನಿರ್ಮಲಾ" ಎಂದಳು.

ಸಂಕೋಚ ವ್ಯಕ್ತಮಾಡಿದ ನಿರ್ಮಲನನ್ನು ಲಲಿತಮ್ಮನೂ ಉಪಚರಿಸಿದ ಮೇಲೆ ಅವಳು ಎದ್ದು ಸರ್ದಾರನ ಜತೆ ಹೋದಳು.

ಸರ್ದಾರ್, ನಿರ್ಮಲಾ ಹೋದಮೇಲೆ ಕ್ಷಣಕಾಲ ಮೌನವಾವರಿಸಿತು. ಆಡುವ ಮಾತು ಬಹಳವಿದ್ದರೂ ಯಾರೂ ಅರಂಭಿಸಲೊಲ್ಲರು.

ಸ್ವಲ್ಪಕಾಲ ಕಳೆದಮೇಲೆ ಸೆಲೀನ್ ತನಗೆ ತಾನೇ ಮಾತನಾಡಿ ಕೊಳ್ಳುವಂತೆ

"ನಿರ್ಮಲಾ ದಾಂಪತ್ಯ ಜೀವನಕ್ಕೇ ಮಾಡಿದ ಹೆಣ್ಣು ಎಂದು ಲಲಿತಾ ಬಹೆನ್ ಹೇಳಿದ ಮಾತು ನಿಜ" ಎಂದಳು.

"ನೀನೂ, ಲಲಿತಾಬಹೆನ್ ಸರ್ದಾರನ ವಿವಾಹ ನಿಶ್ಚಯಿಸಿದಂತಿದೆ !"

"ಜವಾಬ್ದಾರಿಯನ್ನು ನಮ್ಮ ಮೇಲೆ ಹಾಕಿ ನೀವು ಪಾರಾಗಲು ಸಾಧ್ಯ ವಿಲ್ಲ. ಈ ಒಳಸಂಚಿನಲ್ಲಿ ನಾವು ನಾಲ್ವರೂ ಪಾಲುಗಾರರು."

"ನಿನ್ನ ಅಭಿಪ್ರಾಯವೇನು ಪ್ರಸಾದ್ ?"

"ಈ ಯೋಚನೆ ಶೀಘ್ರವಾಗಿ ಕಾರ್ಯಮುಖವಾಗಲಿ ಎಂದೇ ನನ್ನ ಹಾರೈಕೆ."

"ಇದರಲ್ಲಿ ಕೆಲವು ಧರ್ಮಸೂಕ್ಷ್ಮಗಳಿವೆ ಪ್ರಸಾದ್."

"ಯಾವವು ?"

"ನಿರ್ಮಲನ ಪೂರ್ವಚರಿತ್ರೆ ನಾವು ಸ್ಮರಿಸಿಕೊಳ್ಳಬೇಕು."

"ಆ ನಿರ್ಮಲ ಈ ನಿರ್ಮಲ ಅಲ್ಲ."

"ನಿಜ. ಆದರೆ ಆ ಕಸರು ಇನ್ನೂ ಮೈಗಂಟಿಕೊಂಡಿದೆ."

"ಸ್ಪಷ್ಟವಾಗಿ ಹೇಳು ಮೇಥಾ."

"ನಿರ್ಮಲನ ವಿವಾಹಿತ ಪತಿ ಮಂಗೂಭಾಯ್ ಇನ್ನೂ ಜೀವಂತನಾಗಿದ್ದಾನೆ."

"ಇರಲಿ—ನೂರುವರ್ಷಕಾಲ ಚೆನ್ನಾಗಿ ಬದುಕಿರಲಿ. ಕೈ ಹಿಡಿದ ಹೆಂಡತಿಯನ್ನು ಮಾತಾಜಿಯ ವಿಲಾಸಮಂದಿರಕ್ಕೆ ದೂಡಿದ ಈ ಮಹನೀಯನ ಹೆಸರು ಚಿರಸ್ಮರಣೀಯ."

"ನಾನು ಯೋಚಿಸುತ್ತಿದ್ದುದು ಅವನ ವಿಷಯವಲ್ಲ—ನಿರ್ಮಲನ ವಿಷಯ. ನಿರ್ಮಲ ಪುನರ್ವಿವಾಹವಾದರೆ ಮಂಗೂಭಾಯ್ ಗಲಭೆ ಎಬ್ಬಿಸಬಹುದು."

"ಮಂಗೂಭಾಯ್ ಹೆಂಡತಿ ನಿರ್ಮಲ ಸತ್ತು ಅನೇಕ ವರ್ಷಗಳಾದವು."

"ನಾವು ಹಾಗೆ ಭಾವಿಸಿದರೂ ಕಾಯಿದೆ ಹಾಗೆ ಭಾವಿಸುವುದಿಲ್ಲವಲ್ಲ."

"ಇದೆಂಥ ಅಮಾನುಷ ಕಾಯಿದೆ ಮೇಥಾ. ಮಾತಾಜಿಯ ಮನೆಯಲ್ಲಿ ನಿರ್ಮಲ ದೇಹ ವಿಕ್ರಯಿಸಿಕೊಂಡು ಬಾಳುವುದಕ್ಕೆ ಕಾಯಿದೆ ಅಡ್ಡಿ ಬರುವುದಿಲ್ಲ—ಅವಳು ಗೌರವವಾಗಿ ವಿವಾಹವಾಗಿ, ಉತ್ತಮ ಗೃಹಿಣಿಯಾಗಿ ಬಾಳ್ವೆ ನಡೆಸಲು ಕಾಯಿದೆ ಅಡ್ಡ ಬರುವುದೇ ?"

"ಕಾಯಿದೆಗೂ ಅಂತಃಕರಣಕ್ಕೂ ಸಂಬಂಧವಿಲ್ಲ ಪ್ರಸಾದ್."

"ಕಾನೂನು ಕಾಯಿದೆಗಳು ನಿರ್ಮಾಣವಾಗಿರುವುದೂ ಮಾನವಕಲ್ಯಾಣಕ್ಕಾಗಿ ಅಲ್ಲವೇ ?"

"ಹೌದು."

"ಒಮ್ಮೊಮ್ಮೆ ಕಾಯಿದೆ ಕಾನೂನಿನ ಅತಿಕ್ರಮಣದಿಂದ ಮಾನವ ಕಲ್ಯಾಣ ಸಾಧ್ಯವಾಗುವುದಾದರೆ ?"

"ಅತಿಕ್ರಮಿಸಬೇಕು—ಅನವಶ್ಯಕವಾಗಿ ತೊಂದರೆಗೀಡಾಗಬಾರದೆಂದು ನಾನು ಮುನ್ನೆಚ್ಚರಿಕೆಕೊಡುತ್ತಿದ್ದೇನೆ."

"ಈ ರುದ್ರನಾಟಕದಲ್ಲಿ ಮಂಗೂಭಾಯ್-ಅವನ ತಾಯಿ ಭದ್ರಾಬಹೆನ್ ಇಬ್ಬರೂ ಖಳನಾಯಕರಾಗಿದ್ದಾರೆ. ನನ್ನ ಲೆಕ್ಕ ಸರಿಯಾದರೆ ಅವರಿಂದ ಯಾವ ತೊಂದರೆಯೂ ಬರುವುದಿಲ್ಲ."

"ಹೇಗೆ ?"

"ನಿರ್ಮಲ ಜೀವಂತಳಾಗಿರುವಾಗಲೇ ಮಂಗೂಭಾಯ್ ದ್ವಿತೀಯ ವಿವಾಹ ಮಾಡಿಕೊಂಡಿದ್ದಾನೆ. ಈಗವನು ಗಲಭೆಮಾಡಿದರೆ 'ದ್ವಿಪತ್ನೀ ವಿವಾಹ ಕಾಯಿದೆ ಭಂಗ' ದ ಆರೋಪಕ್ಕೆ ಗುರಿಯಾಗುತ್ತಾನೆ. ಅವನ ಅಮಾನುಷಕೃತ್ಯದ ಚರಿತ್ರೆ ಬಯಲಿಗೆ ಬರುವುದಲ್ಲದೆ, ನಿರ್ಮಲ ಮಾತಾಜಿಯ ಮನೆಯಲ್ಲಿದ್ದ ಸಂಗತಿಯೂ ಹೊರಬೀಳುತ್ತದೆ. ಇಷ್ಟೊಂದು ಅಪಮಾನದ ಹೊರೆ ಹೊರಲು ಮಂಗೂಭಾಯ್ ಸಿದ್ಧನಾಗಿದ್ದಾನೆಯೇ ?"

ಮೇಥಾ ಯೋಚಿಸಿ

"ನಿಜನಿಜ—ಮಂಗೂಭಾಯ್ ಎರಡನೆಯ ಲಗ್ನಮಾಡಿಕೊಂಡಿರುವುದು ಸಮಸ್ಯೆಯನ್ನು ತಾನೇ ತಾನಾಗಿ ಬಗೆಹರಿಸಿದೆ" ಎಂದ.

ಸೆಲೀನ್, ಲಲಿತಮ್ಮ ಇಬ್ಬರೂ ಹರ್ಷಚಿತ್ತರಾದರು.

"ನಿಶ್ಚಿತಾರ್ಥ ಇಂದೇ ಮುಗಿಸಿಬಿಡೋಣ ಮೇಥಾಭಾಯ್"

ಎಂದಳು ಲಲಿತಮ್ಮ.

"ನಿರ್ಮಲ ಹೊಸ ಸಂಸಾರ ಹೂಡಿದುದನ್ನು ಕಂಡೇ ಊರಿಗೆ ಹಿಂದಿರುಗ ಬೇಕೆಂದು ಲಲಿತಾಬಹೆನ್ ನಿಶ್ಚಯಿಸಿದ್ದಾರೆ"

ಎಂದು ಸೆಲೀನ್ ಹೇಳಿದಳು.

"ನೀವು ಎಲ್ಲವನ್ನೂ ನಿಶ್ಚಯಿಸಿಕೊಂಡೇ ನಿರ್ಮಲನನ್ನು ಜತೆಯಲ್ಲಿ ಕರೆದುಕೊಂಡು ಬಂದಿರಲ್ಲವೇ ಲಲಿತಾಬಹೆನ್"

ಎಂದು ಮೇಥಾ ಕೇಳಿದ.

"ಹೌದು ಅಣ್ಣ, ವಿಧಿ ನನ್ನನ್ನು ವಿಮಲೆಯಂಥ ಕೆಲವು ಅಭಾಗಿನಿಯರ ಸೋದರಿಯರನ್ನಾಗಿ ಮಾಡಿದೆ. ಹೆಣ್ಣು ಹೆತ್ತ ತಾಯಂದಿರು ಪರಿತಪಿಸುವಂತೆ ನಾನು ಅವರಿಗಾಗಿ ಪರಿತಪಿಸುತ್ತಿದ್ದೇನೆ. ನಿರ್ಮಲನ ಜೀವನ ಸಮಸ್ಯೆ ಒಂದು ಬಗೆಹರಿದರೆ ಉಳಿದವರ ಸಮಸ್ಯೆ ಪರಿಹರಿಸುವ ಶಕ್ತಿ ನನಗೆ ಬರುತ್ತದೆ."

"ನಿಮ್ಮ ಇಚ್ಛೆಯಿದ್ದಂತಾಗಲಿ ತಂಗಿ"

ಎಂದು ಮೇಥಾ ಹಾರ್ದಿಕವಾಗಿ ಒಪ್ಪಿಗೆ ಸೂಚಿಸಿದ.

ಸರ್ದಾರ್, ನಿರ್ಮಲ ಐಸ್‌ಕೋನ್‌ಗಳನ್ನು ಹಿಡಿದು ಬಂದರು. ಅವಳ ಕೈಯಿಂದ ಕೋನ್‌ಗಳನ್ನು ತೆಗೆದುಕೊಳ್ಳುತ್ತಾ ಸೆಲೀನ್

"ಮೇಥಾಜಿಗೆ ಚಹಾ ಬೇಕಾಗಿತ್ತೇನೋ ?" ಎಂದಳು.

"ಹೌದು–ನನಗೆ ಚಹಾ ಬೇಕು. ನೀವು ಐಸ್‌ಕೋನ್ ತೆಗೆದುಕೊಳ್ಳಿ-ನಾನೂ ಪ್ರಸಾದ್ ಹೋಗಿ ಚಹಾ ಕುಡಿದು ಬರುತ್ತೇವೆ."

"ಏಕೆ ? ಜತೆಯಲ್ಲಿ ನಾವು ಬರಬಾರದೇ ?"

ಎಂದು ಸೆಲೀನ್ ಕೇಳಿದಳು.

"ನಿಮ್ಮ ರಹಸ್ಯ ಸಂಭಾಷಣೆಗೆ ನಾವೇಕೆ ಭಂಗತರಬೇಕು."

"ಇವರೆಷ್ಟು ಬುದ್ಧಿವಂತರು ನೋಡು ಲಲಿತಾ—ನಮಗೆ ಉಪಕಾರ ಮಾಡುವಂತೆ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುತ್ತಿರುವರು."

ಮೇಥಾ, ಮೂರ್ತಿಯ ಜತೆಯಲ್ಲಿ ಸರ್ದಾರ್ ಹೊರಡಲಿಲ್ಲ.

ಐಸ್‌ಕ್ರೀಂ ಕೋನ್ ಸವಿನೋಡುತ್ತಿದ್ದ ಲಲಿತಮ್ಮ ಮೇಥಾ, ಮೂರ್ತಿ ಹೋದ ಮೇಲೆ

"ನಿಮ್ಮ ಮನೆ ಯಾವಾಗ ತೋರಿಸುತ್ತೀರಿ ಸರ್ದಾರ್" ಎಂದು ಕೇಳಿದಳು.

"ಇನ್ನು ನಾಲ್ಕೈದು ದಿನಗಳಲ್ಲಿ ಮನೆಯ ಒಳಗೆಲಸ ಮುಗಿಯುತ್ತದೆ. ನಾನು ಗೃಹಪ್ರವೇಶಮಾಡುವವೇಳೆಗೆ ನೀವು ಬಂದುದು ನನಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದೆ."

"ಸರ್ದಾರ್, ಇನ್ನೂ ಎಷ್ಟುದಿನ ಒಂಟಿಬಾಳುವೆ ನಡೆಸಲು ನಿರ್ಧರಿಸಿರುವಿರಿ ?"

ಅನಿರೀಕ್ಷಿತವಾದ ಈ ಪ್ರಶ್ನೆಗೆ ಉತ್ತರ ಹೇಳಲು ಸರ್ದಾರನಿಗೆ ಸಾಧ್ಯವಾಗಲಿಲ್ಲ.

"ಸರ್ದಾರ್, ಲಲಿತಾಬಹೆನ್ ನಿಮ್ಮನ್ನೊಂದು ಪ್ರಶ್ನೆ ಕೇಳಬೇಕೆಂದಿದ್ದಾರೆ. ಅದಕ್ಕಿದು ಪೂರ್ವಪೀಠಿಕೆ."

"ಸಂಕೋಚವಿಲ್ಲದೆ ಹೇಳಿ ಲಲಿತಾಬಹೆನ್."

"ನಿಮ್ಮ ವಿಷಯದಲ್ಲಿ ನಾನೂ, ಅವರೂ, ಮೇಥಾಜಿ, ಸೆಲೀನ್ ಬಹೆನ್ ಒಂದು ನಿರ್ಧಾರಕ್ಕೆ ಬಂದಿದ್ದೇವೆ. ಅದನ್ನು ನೀವು ಒಪ್ಪಿಕೊಳ್ಳಬೇಕು."

"ಈಗ ಎಂಟು ಹತ್ತು ವರ್ಷಗಳ ಹಿಂದೆ ನನಗೂ ಪ್ರಸಾದ್‌ಭಾಯ್‌ಗೂ ಪರಿಚಯವಾದಾಗಲೇ ನಮ್ಮಿಬ್ಬರ ಜೀವನ ಬೆಸೆದುಹೋಯಿತು. ತಮ್ಮ ಮನೆಯ ನೌಕರಿಮಾಡುವುದಕ್ಕೆ ಬಂದ ನನ್ನನ್ನು ಮೇಥಾಜಿ ಸೋದರರಂತೆ ಅಪ್ಪಿಕೊಂಡರು—ನಿಮ್ಮ ನಿರ್ಧಾರವೇ ನನ್ನ ನಿರ್ಧಾರ."

"ನಿಮ್ಮ ಮದುವೆಯ ವಿಷಯ ಯಾವಾಗಲಾದರೂ ಯೋಚಿಸಿರುವಿರಾ ?"

"ಯೋಚಿಸಿದ್ದೇನೆ. ಹೆಂಡತಿಯನ್ನು ಬಾಳಿಸುವ ಯೋಗ್ಯತೆ ಸಂಪಾದಿಸುವವರೆಗೆ ಮದುವೆಯಾಗಬಾರದೆಂದಿದ್ದೆ."

"ಈಗ ಆ ಸಮಸ್ಯೆ ಬಗೆಹರಿದಿದೆಯಲ್ಲವೇ ?"

"ನಿಮ್ಮ ವಿಶ್ವಾಸದಿಂದ-ಭಗವಂತನ ಕರುಣೆಯಿಂದ ನಾನು ಹೊಟ್ಟೆ ಬಟ್ಟೆಗೆ ಯೋಚನೆಮಾಡಬೇಕಾದುದಿಲ್ಲ. ಒಂದು ಮನೆಯನ್ನೂ ಮಾಡಿಕೊಂಡೆ."

"ಇನ್ನು ವಧುವನ್ನು ನಾವು ನಿಶ್ಚಯಿಸಬಹುದಲ್ಲವೇ ? ನಾನೂ, ಅವರೂ ನಿಮ್ಮ ಮದುವೆ ಮುಗಿಸಿಕೊಂಡೇ ಊರಿಗೆ ಪ್ರಯಾಣಮಾಡಬೇಕೆಂದಿದ್ದೇವೆ."

ಏನೂ ತಿಳಿಯದವಳಂತೆ ಸೆಲೀನ್

"ವಧೂ ಯಾರು ಲಲಿತಾಬಹೆನ್"

ಎಂದು ಕೇಳಿದಳು.

"ನನ್ನ ತಂಗಿ ನಿರ್ಮಲನ ಕೈಹಿಡಿಯಲು ಸರ್ದಾರರು ಒಪ್ಪಿದರೆ ನಾನು ಧನ್ಯಳಾಗುತ್ತೇನೆ."

ನಾಚಿಕೆಯಿಂದ ನಿರ್ಮಲನ ಮುಖ ಬಣ್ಣವೇರಿ, ಅವಳ ಹಣೆಯ ಮೇಲೆ ಬೆವರುಸಾಲು ಕಾಣಿಸಿಕೊಂಡಿತು.

"ವಧುವಿನ ಅಭಿಪ್ರಾಯ ಕೇಳಬೇಡವೇ ?"

ಎಂದು ಸರ್ದಾರ್ ಸೂಚಿಸಿದ.

"ನೀನು ಏನು ಹೇಳುವೆ ನಿರ್ಮಲಾ ?"

ಎಂದು ಲಲಿತಾ ಕೇಳಿದಳು.

ಮೌನಗೌರಿಯ ಹಾಗೆ ಕುಳಿತಿದ್ದ ನಿರ್ಮಲಾ

"ನಾನು ಮದುವೆಗೆ ಸಮ್ಮತಿಸುವುದಿಲ್ಲ ಲಲಿತಕ್ಕ" ಎಂದಳು.

ಸರ್ದಾರ್ ಚಕಿತನಾದ.

ಸಿಡಿಲುಹೊಡೆದಂತೆ ನಿರ್ಮಲ ಹೇಳಿದಮಾತು ಕೇಳಿ ಲಲಿತ, ಸೆಲೀನ್ ಅವಾಕ್ಕಾದರು.

ಲಲಿತ ಚೇತರಿಸಿಕೊಳ್ಳುವುದು ಒಂದೆರಡು ನಿಮಿಷಗಳು ಬೇಕಾದವು. ತನ್ನ ಮನಸ್ಸಿಗಾಗಿದ್ದ ವ್ಯಥೆಯನ್ನು ತೋರಗೊಡದೆ

"ಏಕೆ ನಿರ್ಮಲಾ"

ಎಂದು ಕೇಳಿದಳು.

"ನನ್ನ ಜೀವನವೃತ್ತಾಂತ ನಿಮ್ಮೆಲ್ಲರಿಗೂ ಸುಪರಿಚಯವಾಗಿದೆ. ಬೀದಿಯ ವೇಶ್ಯೆಯಂತೆ ಬಾಳುವೆ ನಡೆಸುತ್ತಿದ್ದ ನನ್ನನ್ನು ಸೆಲೀನ್ ಬಹೆನ್, ಸರ್ದಾರಜೀ ರಕ್ಷಿಸಿ ಕಾಪಾಡಿದರು. ನೀವು ನನ್ನ ಜವಾಬ್ದಾರಿ ವಹಿಸಿಕೊಂಡು ನನ್ನನ್ನು ಮನುಷ್ಯಳನ್ನಾಗಿ ಮಾಡಿದಿರಿ. ಸುಂದರಮ್ಮನವರ ಮಡಿಲಿನಲ್ಲಿ, 'ಅಭಯಾಶ್ರಮ'ದ ಪವಿತ್ರ ವಾತಾವರಣದಲ್ಲಿ, ಜ್ವಾಲಾ, ವೀರಮ್ಮ, ಸುನಂದ, ಕೌಸಲ್ಯಾ ಇವರ ಸಸ್ನೇಹಸಹವಾಸದಲ್ಲಿ ಬೆಳೆದ ನನಗೆ ಜೀವನದ ಅಂತರಾರ್ಥದ ಅರಿವಾಗಿದೆ. ಸ್ವಸುಖಸಾಧನೆಗೆ ಮನಸ್ಸನ್ನು ಮುಡಿಪಾಗಿಡುವುದು ನ್ಯಾಯ ವಲ್ಲ ಎಂಬುದು ಚೆನ್ನಾಗಿ ಅರ್ಥವಾಗಿದೆ—ಸರ್ದಾರ್ ನನಗೆ ಮಾಡಿರುವ ಉಪಕಾರಕ್ಕೆ ನಾನು ಪ್ರತ್ಯುಪಕಾರಮಾಡಲು ಸಮರ್ಥಳಾಗಿಲ್ಲ; ಅದರೆ ಪ್ರತ್ಯಪಕಾರಮಾಡಲು ಸಮರ್ಥಳಾಗಿದ್ದೇನೆ. ಪರಿಶುದ್ಧರಾಗಿರುವ ಸರ್ದಾರರಿಗೆ ಹಲವರಿಂದ ಹೊಲಬುಗೊಂಡಿರುವ ಈ ಮಲಿನದೇಹವನ್ನು ಹೇಗೆ ಬಡಿಸಲಿ. ಅವರ ಶುದ್ಧಜೀವನಕ್ಕೆ ಅನುರೂಪಳಾದ ಸತಿ ದೊರೆಯುವುದು ಕಷ್ಟವಾಗಿಲ್ಲ. ಅಂಥ ಒಬ್ಬ ಕನ್ಯೆಯನ್ನು ನೋಡಿ, ನಾವೆಲ್ಲರೂ ನಿಂತು ವಿವಾಹಮಾಡಿ, ಸಂತೋಷಪಡೋಣ."

ನಿರ್ಮಲನ ವಾದಸರಣಿಯನ್ನರ್ಥಮಾಡಿಕೊಳ್ಳುತ್ತಾ ಲಲಿತಮ್ಮ ನಿರುತ್ತರಳಾಗಿ ಕುಳಿತಳು.

ಸೆಲೀನ್ ಮಳಲಿನ ಮೇಲೆ ಗೆರೆಗಳನ್ನು ಕೊರೆಯುತ್ತಾ ಕುಳಿತಳು.

ಸರ್ದಾರನೇ ಮನಸ್ಸುಗಟ್ಟಿಮಾಡಿಕೊಂಡು

"ನಿರ್ಮಲಾ–ಈ ವಿಷಯದಲ್ಲಿ ನನ್ನದೂ ಒಂದು ಅಭಿಪ್ರಾಯವಿದೆ—ಕೇಳುವೆಯಾ" ಎಂದ.

"ಹೇಳಿ, ಸರ್ದಾರ್‌ಜೀ."

"ಇದುವರೆಗೆ ನಿನ್ನ ಜೀವನದಲ್ಲಿ ನಡೆದಿರುವ ಯಾವ ಘಟನೆಗೂ ನೀನು ಉತ್ತರವಾದಿಯಲ್ಲ. ಗಂಡನನ್ನು ಬಿಟ್ಟು ನೀನು ಓಡಿಹೋಗಿ ಮಾತಾಜಿಯ ಆಶ್ರಮದಲ್ಲಿ ನಿಲ್ಲಲಿಲ್ಲ. ನಿನ್ನನ್ನು ಆ ರೌರವನರಕಕ್ಕೆ ತಳ್ಳಿದ ಕೀರ್ತಿ ಅವನಿಗೇ ಸಲ್ಲಬೇಕು. ಹೋಗಲಿ—ಆತನನ್ನು ಆಕ್ಷೇಪಿಸಿ ಏನು ಪ್ರಯೋಜನ. ಕಳೆದು ಹೋದ ಕೆಟ್ಟಕನಸನ್ನು ಸ್ಮರಿಸಿಕೊಂಡೇನು ಸಾರ್ಥಕ ?—ನಾನು ಮದುವೆಯ ಯೋಚನೆಯನ್ನೇ ಮಾಡಿದವನಲ್ಲ. ನಿನ್ನನ್ನು ಕಂಡೆ—ನಿನ್ನ ಜತೆ ಬೆಂಗಳೂರಿಗೆ ಹೋಗಿ ಬಂದೆ—ಆ ಸಂದರ್ಭದಲ್ಲಿಯೇ ನನಗೆ ನಿನ್ನ ಸ್ವಭಾವ ಪರಿಚಯವಾದುದು. ನನ್ನ ಹೃದಯದ ಅನುಕಂಪ ಅನುರಾಗವಾಗಿ ಪರಿಣಮಿಸಿದುದೂ ಆಗಲೇ—ನಿನ್ನನ್ನು ಬೆಂಗಳೂರಿನಲ್ಲಿ ಬಿಟ್ಟು ನಾನು ಮುಂಬಯಿಗೆ ಹೊರಟಾಗ ಮನಸ್ಸಿಗೆ ತುಂಬ ವ್ಯಥೆಯಾಯಿತು. ನಿನ್ನ ಜೀವ ನನ್ನ ಜೀವಕ್ಕೆ ಬಹಳ ಸಮೀಪಗತವಾದುದೆಂಬುದನ್ನೂ ನಾನು ಆಗಲೇ ತಿಳಿದುದು—ಬೇರೊಬ್ಬಳನ್ನು ನಾನು ಕೈಹಿಡಿಯಬೇಕೆಂದು ನೀನು ಸೂಚಿಸುತ್ತಿರುವೆ. ನನ್ನ ಹೃದಯಸಿಂಹಾಸನದಲ್ಲಿ ನೀನು ಮಂಡಿಸಿರುವಾಗ, ನಾನು ಬೇರೊಬ್ಬಳಲ್ಲಿ ಅನುರಕ್ತನಾಗುವುದು ಸಾಧ್ಯವೇ ? ಹಾಗೆ ನಾನು ಮಾಡಿದಲ್ಲಿ ನಿನಗೆ–ನನಗೆ–ಅವಳಿಗೆ ಅನ್ಯಾಯಮಾಡಿದಂತಾಗುವುದಿಲ್ಲವೇ ?"

"ಅನುಕಂಪಕ್ಕೂ ಒಂದು ಎಲ್ಲೆಯಿದೆ ಸರ್ದಾರ್–ನನ್ನ ಮೇಲಣ ಮರುಕದಿಂದ ನಿಮ್ಮ ಜೀವಿತವನ್ನೇ ಹಾಳುಮಾಡಿಕೊಳ್ಳುವಿರಾ ?"

"ಇಲ್ಲ—ನಿನ್ನ ಮೇಲಣ ಅನುರಾಗದಿಂದ ನನ್ನ ಜೀವಿತವನ್ನು ಸಾರ್ಥಕ ಪಡಿಸಿಕೊಳ್ಳುತ್ತೇನೆ."

"ಸ್ವಲ್ಪ ಶಾಂತವಾಗಿ ಆಲೋಚಿಸಿ ಸರ್ದಾರ್. ನನ್ನ ಪೂರ್ವಬಾಳುವೆಯ

ಕರಿನೆರಳು ನಮ್ಮಿಬ್ಬರ ಜೀವಿತದಿಂದ ಎಂದಿಗಾದರೂ ಮರೆಯಾಗಲು ಸಾಧ್ಯವೇ ? ನೀವು ನನ್ನನ್ನು ಮುಟ್ಟುವಾಗಲೆಲ್ಲಾ 'ಇದು ಹಲವರು ಮುಟ್ಟಿದ ದೇಹ' ಎಂಬ ಭಾವನೆ ಬರುವುದಿಲ್ಲವೇ ?"

"ಬರಬಹುದು-ಆದರಿದು ಯಾರೂ ಮುಟ್ಟದ ಆತ್ಮ-ಎಂಬ ಭಾವನೆಯೂ ಬರುತ್ತದೆ."

"ಸರ್ದಾರ್, ನನ್ನನ್ನು ಮರೆತುಬಿಡಿ. ನೀವು ನನ್ನನ್ನು ಮದುವೆಯಾಗದಿದ್ದರೂ ನಾನು ಸುಖವಾಗಿರಬಲ್ಲೆ. ನನ್ನ ಜೀವನಕ್ಕೆ ಈಗ ಒಂದು ಗುರಿಯಿದೆ. 'ಅಭಯಾಶ್ರಮ'ದ ಸೋದರಿಯರ ಮಧ್ಯೆ ನಾನು ನೆಮ್ಮದಿಯಾಗಿರಬಲ್ಲೆ !"

"ನಾನೂ ನೆಮ್ಮದಿಯಾಗಿರಬೇಕೆಂದು ನೀನು ಬಯಸುವೆಯಲ್ಲವೇ ?"

"ನಿಸ್ಸಂದೇಹವಾಗಿ."

"ನಿನ್ನನ್ನು ಬಿಟ್ಟು ನಾನು ನೆಮ್ಮದಿಯಾಗಿರಲು ಶಕ್ಯವೇ ?"

"ಕಾಲಾನುಕ್ರಮದಲ್ಲಿ ಈ ಮೋಹಾಗ್ನಿ ಉಪಶಮನವಾಗುತ್ತದೆ."

"ಇದು ಮೋಹವಲ್ಲ ನಿರ್ಮಲಾ-ನಿಷ್ಕಲ್ಮಷವಾದ ಪ್ರೇಮ."

"ಸರ್ದಾರ್, ನಿಜವಾಗಿ ಹೇಳಿ-ನೀವು ಅನುಕಂಪದಿಂದ ನನ್ನನ್ನು ಮದುವೆಯಾಗಲು ಸಿದ್ಧರಾಗಿಲ್ಲವೇ ?"

"ಇಲ್ಲ—ನನಗೂ ಸ್ವಲ್ಪ ಸ್ವಾರ್ಥವಿದೆ—ನಾನೇನು ನಾನಕ ಬಾಬಾ ಅವರಂತೆ ತ್ಯಾಗಿಯೂ ಅಲ್ಲ, ಗುರು ಅರ್ಜುನಸಿಂಗರಂತೆ ಹುತಾತ್ಮನೂ ಅಲ್ಲ."

"ಇದರಲ್ಲಿ ನಿಮ್ಮದೇನು ಸ್ವಾರ್ಥ ?"

"ನನ್ನ ಜೀವನಯಾತ್ರೆ ಸುಗಮವೂ ಸುಮಧುರವೂ ಆಗುವಂತೆ ಮಾಡಬಲ್ಲ ಜತೆಗಾತಿ ಬೇಕೆಂದು ಬಯಸುವುದು ಸ್ವಾರ್ಥವಲ್ಲವೇ ?"

"ನಾನು ಆ ಜತೆಗಾತಿ ಆಗಬಲ್ಲನೇ ?"

"ನೀನಲ್ಲದೆ ಬೇರೆ ಯಾರೂ ಆಗಲಾರರು."

"ನಿಮ್ಮ ಮನೋನಿರ್ಧಾರ ಬದಲಿಸುವ ಸಂಭವವಿಲ್ಲವೇ ?"

"ಎಲ್ಲವನ್ನೂ ಅಳೆದು ಸುರಿದು ನೋಡಿ ನಾನು ಈ ಅಂತಿಮ ನಿರ್ಧಾರಕ್ಕೆ ಬಂದಿದ್ದೇನೆ."

"ನಾನು ಸ್ವಲ್ಪ ಯೋಚಿಸಲು ಅವಕಾಶಕೊಡಿ"

ಎಂದು ಹೇಳಿಬಿಟ್ಟಳು.

ಸೆಲೀನ್, ಲಲಿತಮ್ಮ ಮುಖ ಚಿಕ್ಕದುಮಾಡಿಕೊಂಡರು.

ಒಳಗೆ ತುಂಬಿದ ದುಃಖವನ್ನು ಹತ್ತಿಕ್ಕಲು ಸರ್ದಾರ್ ವಿಶ್ವಪ್ರಯತ್ನ ಮಾಡತೊಡಗಿದ.

ಮೇಥಾ, ಮೂರ್ತಿ ಬರುತ್ತಿರುವುದನ್ನು ಕಂಡ ಸೆಲೀನ್ ಎದ್ದು ನಿಂತು

"ಅವರೂ ಬರುತ್ತಿದ್ದಾರೆ. ಇನ್ನು ಹೊರಡೋಣ" ಎಂದಳು.

ನಿಶ್ಚಿತಾರ್ಥದ ಮಾತುಕತೆ ಸುಮುಖವಾಗಿ ಆಗಿಲ್ಲವೆಂಬುದನ್ನರಿಯಲು ಮೂರ್ತಿ, ಮೇಥನಿಗೆ ತಡವಾಗಲಿಲ್ಲ.

ಮನೆಬಿಟ್ಟು ಜುಹೂಬೀಚಿಗೆ ಹೊರಡುವಾಗ ಎಲ್ಲರ ಮನಸ್ಸಿನಲ್ಲಿದ್ದ ಉತ್ಸಾಹ, ಸಂತೋಷ ಈಗ ನಿರುತ್ಸಾಹಕ್ಕೆ ಎಡೆಕೊಟ್ಟಿತು.

ಎಲ್ಲರನ್ನೂ 'ಮಲಬಾರ್ ಹಿಲ್' ಮನೆಗೆ ತಂದಿಳಿಸಿದ ಸರ್ದಾರ್

"ನಾನು ಹೋಗಿ ಬರುತ್ತೇನೆ"

ಎಂದು ಹೇಳಿದಾಗ 'ಬೇಡ–ಇಲ್ಲಿಯೇ ಇರು' ಎಂದು ಹೇಳುವ ಧೈರ್ಯ ಯಾರಿಗೂ ಆಗಲಿಲ್ಲ.

## ೨೦

ಮಾರನೆಯ ಬೆಳಿಗ್ಗೆ ಎದ್ದವಳೇ ಲಲಿತ

"ದಾದಾ, ಆಯಿ, ವೀಣೆಯನ್ನು ನೋಡಿಬರಬೇಡವೇ ?" ಎಂದಳು.

"ನಡೀ—ಈಗ ಹೋಗಿ ಬರೋಣ. ಬೇಗ ಹೋದರೆ ದಾದನೂ ಸಿಕ್ಕುತ್ತಾನೆ."

ಉಪಹಾರ ಮುಗಿದ ಮೇಲೆ ಮೂರ್ತಿ, ಲಲಿತ ಹೊರಟುನಿಂತರು. ಮೇಥಾ ತನ್ನ 'ಹಿಂದೂಸ್ಥಾನ್ ಕಾರ್' ಅವರಿಗೆ ಒಪ್ಪಿಸುತ್ತಾ

"ಈ ಕಾರ್ ನಿಮಗೆ ಮೀಸಲು. ನೀವು ಎಲ್ಲಿಗೆ ಬೇಕಾದರೂ ಹೋಗಿ ಬರಬಹುದು. ಪರಶುರಾಮ್ ನಿಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತಾನೆ" ಎಂದ.

ಕಾರಿನಲ್ಲಿ ಕುಳಿತಮೇಲೆ ಲಲಿತಮ್ಮ

"ಮೊದಲು ಕ್ರಾ ಫ ರ್ಡ್ ಮಾ ರ್ಕೆ ಟ್ಟ ಗೆ (Crawford market) ಹೋಗೋಣ" ಎಂದಳು.

ಕಾರು ಕ್ರಾಫರ್ಡ್ ಮಾರ್ಕೆಟ್ ಹಾದಿ ಹಿಡಿದಿದ್ದಂತೆ ಮೂರ್ತಿ

"ನಿರ್ಮಲಾ ಮತ್ತೇನನ್ನಾದರೂ ಹೇಳಿದಳೇ " ಎಂದು ಕೇಳಿದ.

"ಇಲ್ಲ. ನಾನೂ ಆ ವಿಷಯ ಪ್ರಸ್ತಾಪಿಸಲಿಲ್ಲ."

"ನಿನ್ನೆ ಸರ್ದಾರನ ನಿಸ್ತೇಜಮುಖಕಂಡು ನನಗೆ ಬಹುವ್ಯಸನವಾಯಿತು."

"ನಿರ್ಮಲನ ಹಟಕಂಡು ನನಗೆ ಬೇಸರವಾಗಿದೆ."

"ಯಾವ ಕಾರಣಕ್ಕೂ ನಾವು ಆವಳನ್ನು ಈ ಮದುವೆಗೆ ಸಮ್ಮತಿಸುವಂತೆ ಬಲಾತ್ಕಾರಮಾಡಬಾರದು."

"ನಾವು ಬಲಾತ್ಕಾರಮಾಡುತ್ತಿದ್ದೇವೆಯೇ ?"

"ನೀನೂ ಸೆಲೀನ್ ಮುಖಚಿಕ್ಕದುಮಾಡಿಕೊಂಡರೆ ಬಲಾತ್ಕಾರವಾಗುತ್ತದೆ. ನಿಮ್ಮ ಮನಸ್ಸಿಗೆ ಬೇಸರವಾಗುವುದೆಂದು ಅವಳು ಒಪ್ಪಿಕೊಳ್ಳುತ್ತಾಳೆ."

"ಸರ್ದಾರನ ಗತಿಯೇನು ?"

"ಅವನ ಶಿಶುಹೃದಯಕ್ಕಿದು ದೊಡ್ಡ ಆಘಾತವಾಗುವುದರಲ್ಲಿ ಸಂದೇಹವಿಲ್ಲ. ಆದರೆ ನಿರ್ಮಲನ ಅಂತರಂಗವನ್ನು ಅವನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ."

"ಅಣ್ಣ ಮೇಥಾ ನಿಮ್ಮನ್ನು ಸಂಧಾನಚತುರರೆಂದು ಕರೆದುದು ತಪ್ಪಾಯಿತು."

"ಏಕೆ ?"

"ನಮ್ಮ ಸಂಧಾನ ನೀವೇ ಮುರಿಯುತ್ತಿರುವಿರಿ !"

"ಸಂಧಾನ ಅನುಸಂಧಾನಗಳಿಲ್ಲದೆ ಈ ಮೈತ್ರಿ ಕೂಡಬೇಕು ಲಲಿತಾ."

"ನಿಜವಾಗಿ ನನಗೆ ಬಹು ದುಃಖವಾಗಿದೆ."

"ನಾನು ಬಲ್ಲೆ ಲಲಿತಾ—ನಿನ್ನ ದುಃಖಕ್ಕಿಂತಲೂ ನಿರ್ಮಲ, ಸರ್ದಾರ್ ಇವರ ಸುಖ ಹೆಚ್ಚಿನದೆಂದು ನೀನು ತಿಳಿಯಬೇಕು."

"ನಾನೊಮ್ಮೆ ಈ ವಿಷಯ ನಿರ್ಮಲನ ಸಂಗಡ ಮಾತನಾಡಲೇ—ತಿಳುವಳಿಕೆಯಿಲ್ಲದ ಹುಡುಗಿ ತನ್ನ ಜೀವನವನ್ನೇ ಹಾಳುಮಾಡಿಕೊಳ್ಳುತ್ತಿರುವಳಲ್ಲಾ !—ಸರ್ದಾರನಂಥ ಗಂಡ ಸಿಕ್ಕುವುದು ಅವಳ ಪೂರ್ವಸುಕೃತ—ಸರ್ದಾರನ ತ್ಯಾಗದ ಪೂರ್ಣಕಲ್ಪನೆಯೇ ಅವಳಿಗೆ ಬಂದಂತಿಲ್ಲ."

"ಸರ್ದಾರನ ತ್ಯಾಗದ ಪೂರ್ಣಕಲ್ಪನೆ ಅವಳಿಗೆ ಬಂದಿರುವುದರಿಂದಲ್ಲವೇ ಅವಳವನನ್ನು ನಿರಾಕರಿಸುತ್ತಿರುವುದು. ಅವಳಾಗಿಯೇ ಈ ವಿಷಯ ಪ್ರಸ್ತಾಪಿಸುವವರೆಗೆ ನೀನು ಮಾತನಾಡಬೇಡ."

ಲಲಿತಮ್ಮ ನಿರ್ವಾಹವಿಲ್ಲದೆ ಗಂಡನ ಸಲಹೆಯನ್ನಂಗೀಕರಿಸಿದಳು.

ಕ್ರಾಫರ್ಡ್ ಮಾರ್ಕೆಟ್ಟಿನಲ್ಲಿ ಲಲಿತಮ್ಮ ಮೊದಲು ತರಕಾರಿ, ಹಣ್ಣು ಕೊಂಡಳು. ಅಂಗಡಿಯವನಿಗೆ ಹಣಕೊಡಲು ಪರ್ಸ್ ತೆಗೆದು ಆಶ್ಚರ್ಯದಿಂದ "ಇಲ್ಲಿ ನೋಡಿ" ಎಂದಳು.

ಮೂರ್ತಿ ಅವಳ ಪರ್ಸಿನಲ್ಲಿ ತುಂಬಿದ್ದ ನೋಟಿನ ಕಂತೆ ಕಂಡು

"ಇದು ಸೆಲೀನ್ ಕೆಲಸ."

"ನಮ್ಮ ಸುಲಿಗೆ ಸೇವೆ ಚೆನ್ನಾಗಿ ಸಾಗುತ್ತಿದೆ."

"ಈ ಮಾತು ನೀನು ಹೇಳಿದರೆ ಸೆಲೀನ್, ಮೇಥಾ ಅನ್ನಾನೀರುಬಿಟ್ಟು ಬಿಡುತ್ತಾರೆ."

"ಇದನ್ನು ತಪ್ಪಿಸಿಕೊಳ್ಳುವುದು ಹೇಗೆ ?"

"ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ."

ಲಲಿತಮ್ಮ ವೀಣಳಿಗೆ ಸಿಲಲಾಯಿಡ್ ಬೊಂಬೆ, ಕೆಲವು ಆಟದ ಯಂತ್ರಗಳು, ರಿಬ್ಬನ್, ಕ್ಲಿಪ್, ಕುಚ್ಚು, ಲಂಗಕ್ಕೆ ಸಿಲ್ಕುಬಟ್ಟೆ, ಮಿಠಾಯಿ, ಚಾಕಲೇಟ್ ಆಯಿಗೆ ರೇಷ್ಮೆಸೀರೆ, ಚೋಳಿ ಕೊಂಡುಕೊಂಡಳು.

"ನನ್ನ ಬಡದಾದಾ ಏನು ಪಾಪಮಾಡಿದ-ಅವನಿಗೇನೂ ಕೊಡಬೇಡವೇ?"

ಎಂದು ಮೂರ್ತಿ ಕೇಳಿದ.

"ದಾದನಿಗೊಂದು ಷೀಫರ್ ಪೆನ್ (Sheaffer pen) ಕೊಂಡುಕೊಳ್ಳಿ."

ಷೀಫರ್ ಮೇಜರ್ ಪೆನ್ ಕೊಂಡು ಮೂರ್ತಿ ಕಿಸೆಯಲ್ಲಿಟ್ಟುಕೊಂಡ.

ದಾದನ ಮನೆಯ ಗುರುತು ಹೇಳಿ ಮೂರ್ತಿ ಕಾರನ್ನು ಅತ್ತಕಡೆ ಓಡಿಸಿದ.

ಕಾರು ನಿಲ್ಲಲು ಲಲಿತಮ್ಮ ಸಣ್ಣಪುಟ್ಟ ಸಾಮಾನುಗಳ ಪ್ಯಾಕೆಟ್ಟನ್ನು ಕೈಗೆತ್ತಿಕೊಂಡಳು. ಮೂರ್ತಿ ಬಟ್ಟೆಯ ಗಂಟು, ತಿಂಡಿಯ ಪೊಟ್ಟಣ ಕೈಗೆತ್ತಿಕೊಂಡ. ಹಣ್ಣು ತರಕಾರಿಯ ಬುಟ್ಟಿಗಳನ್ನು ಪರಶುರಾಮ ಹೊತ್ತುಕೊಂಡ.

ಆಯಿಯ ಮನೆ ಬಾಗಿಲಲ್ಲೇ ನಿಂತು ಲಲಿತ ಕ್ಷಣಕಾಲ ಆಲೈಸಿ ಕೇಳಿ

"ವೀಣಾ—ಸ್ಕೂಲಿಗೆ ಹೋಗುವ ಸಡಗರದಲ್ಲಿದ್ದಾಳೆ" ಎಂದಳು.

ಬಾಗಿಲು ಬಡಿದ ಶಬ್ದವಾಗಲು ಅಡಿಗೆಯ ಮನೆಯಲ್ಲಿದ್ದ ಆಯಿ ಬಂದು ಬಾಗಿಲು ತೆರೆದು

"ಯಾರು ? ಲಲಿತಾಬಾಯಿಯೇ !!"

ಎಂದು ಬೆಕ್ಕಸಬೆರಗಾಗಿ 'ವೀಣಾ' ಎಂದು ಕೂಗಿದರು.

ವೀಣಾ ಬಂದವಳೇ ಲಲಿತನನ್ನು ನೋಡಿ ಅವಳಿಗೆ ತೆಕ್ಕೆಬಿದ್ದಳು. ಅವಳ ಹರ್ಷೋದ್ಗಾರ ಕೇಳಿ ಊಟಕ್ಕೆ ಕುಳಿತಿದ್ದ ದಾದನೂ ಎದ್ದು ಬಂದು ಮೂರ್ತಿಯನ್ನಪ್ಪಿದರು.

"ಒಳಕ್ಕೆ ಬನ್ನಿ"

ಎಂದು ಆಯಿ ಎಲ್ಲರನ್ನೂ ಒಳಕ್ಕೆ ಕರೆದುಕೊಂಡು ಹೋದರು.

ಕುಶಲಪ್ರಶ್ನೆಗಳಾದ ಮೇಲೆ ಲಲಿತಮ್ಮ ವೀಣಾಳನ್ನೇ ದಿಟ್ಟಿಸಿ ನೋಡುತ್ತಾ

"ವೀಣಾ ಎಷ್ಟು ಉದ್ದವಾಗಿ ಬೆಳೆದುಬಿಟ್ಟಳಮ್ಮ—ಇವಳಿಗೆ ಗಂಡು ನೋಡಿದ್ದೀರಾ ಆಯಿ."

"ಹೋಗಿ ಕಕ್ಕಿ."

ದಾದಾ ಅರ್ಧ ಮುಗಿಸಿದ್ದ ಊಟವನ್ನು ಮುಂದುವರಿಸಿದರು.

"ನಿಮ್ಮ ತಾಯಿ ಚೆನ್ನಾಗಿದ್ದಾರೆಯೇ ?"

ಎಂದು ಆಯಿ ಕೇಳಿದರು.

"ಚೆನ್ನಾಗಿದ್ದಾರೆ."

"ಯಾವಾಗ ಬಂದಿರಿ ?"

"ನಿನ್ನೆ ಬೆಳಿಗ್ಗೆ."

"ಕಕ್ಕ—ಕಕ್ಕಿಯನ್ನು ಮಾತಾಡಿಸಬೇಡ ಮಾಯಿ"

ಎಂದು ವೀಣಾ ಹೇಳಿದಳು.

"ಏಕೆ ವೀಣಾ—ನಾವೇನು ತಪ್ಪು ಮಾಡಿದೆವು ?"

"ನೀವು ಬಂದು ಎಷ್ಟು ದಿವಸವಾಯಿತು—ಬೇಗ ಬರುತ್ತೇವೆ ಎಂದು ನನಗೆ ಸುಳ್ಳು ಹೇಳಿ ಹೋದಿರಿ."

"ತಪ್ಪಾಯಿತು ಕ್ಷಮಿಸು ವೀಣಾ. ಬರಬೇಕೆಂದು ಎಷ್ಟೋ ಸಲ ಅಂದುಕೊಂಡೆವು—ಸಾಧ್ಯವಾಗಲಿಲ್ಲ."

"ಊಟಕ್ಕೆ ಕುಳಿತುಕೋ ವೀಣಾ—ಸ್ಕೂಲಿಗೆ ಲೇಟಾಗುತ್ತದೆ."

"ನಾನೀಗ ಸ್ಕೂಲಿಗೆ ಹೋಗುವುದಿಲ್ಲ ದಾದಾ—ಕಕ್ಕ ಕಕ್ಕಿ ಜತೆ ಇರುತ್ತೇನೆ."

"ಬಿಡು—ಇನ್ನು ನಿನ್ನ ಹಿಡಿಯುವವರು ಯಾರು ? ನಿನ್ನ ಕಕ್ಕ ಕಕ್ಕಿ ಬಂದು ಬಿಟ್ಟಿದ್ದಾರೆ."

ದಾದಾ ಮೂರ್ತಿಯನ್ನು ದಿಟ್ಟಿಸಿನೋಡಿ

"ಪ್ರಸಾದ್‌ಭಯ್ಯ ಅವರಿಗೆ ಮೈಯಲ್ಲಿ ಸರಿಯಾಗಿರಲಿಲ್ಲವೇ ಲಲಿತಾ ಬಾಯ್ ?"

"ಇಲ್ಲ—ಕಾಹಿಲೆ ಬಿದ್ದಿದ್ದರು—ಹವ ಬದಲಾವಣೆಯಾಗಲೆಂದೇ ಇತ್ತ ಬಂದೆವು."

ವೀಣಾ ಬಂದು ಮೂರ್ತಿಯ ಪಕ್ಕದಲ್ಲಿ ಕುಳಿತು ಅವನ ಕೆನ್ನೆಯ ಮೇಲೆ ಕೈಯಾಡಿಸುತ್ತಾ

"ಏನಾಗಿತ್ತು ಕಾಕಾ ?" ಎಂದಳು,

"ಎರಡು ದಿನ ಸ್ವಲ್ಪ ಜ್ವರ ಬಂದಿತ್ತಷ್ಟೆ ಸ್ವೀಟ್ (Sweet)."

"ಇಲ್ಲ ಕಾಕಾ—ತುಂಬ ಕಾಹಿಲೆಯಾಗಿದ್ದಿರಿ—ನೀವು ತುಂಬ ಸೊರಗಿದ್ದೀರಿ."

ಮೂರ್ತಿಯ ಅಂತಃಕರಣ ಕಲಕಿಹೋಗಿ ಕಣ್ಣುಗಳಿಂದ ನೀರಿಳಿಯಿತು. ವೀಣಾ ಮೂರ್ತಿಯನ್ನಪ್ಪಿ

"ಇನ್ನು ಆ ಕೆಟ್ಟ ಊರಿಗೆ ಹೋಗಬೇಡಿ ಕಾಕಾ—ಇಲ್ಲೇ ಇದ್ದುಬಿಡಿ—ನಾನು ನಿಮ್ಮನ್ನು ನೋಡಿಕೊಳ್ಳುತ್ತೇನೆ" ಎಂದಳು.

ಪರಿಸ್ಥಿತಿಯ ಗಭೀರತೆ ನಿವಾರಿಸಲು ಲಲಿತಮ್ಮ ಸಿಲಲಾಯಿಡ್ ಬೊಂಬೆ ತಂದು ವೀಣಾಳ ಕೈಗಿತ್ತಳು. ವೀಣಾ ಅದನ್ನೊಮ್ಮೆ ನೋಡಿ, ಪಕ್ಕಕ್ಕೆ ಸರಿಸಿ ಮೂರ್ತಿಯ ಕೈಹಿಡಿದು ಕುಳಿತಳು.

ದಾದಾ ಅಂಗಿ, ಟೋಪಿ ಧರಿಸಿ

"ನಾನು ಸ್ಕೂಲಿಗೆ ಹೋಗಬೇಕಾಗಿದೆ-ಕೆಲವು ದಿನವಾದರೂ ನೀವು ಇಲ್ಲಿ ಇರುವಿರಷ್ಟೆ !" ಎಂದರು.

"ಮೂರು ನಾಲ್ಕುವಾರ ಇರಬೇಕೆಂದಿದ್ದೇನೆ ದಾದಾ"

"ಎಲ್ಲಿ ಇಳಿದುಕೊಂಡಿದ್ದೀರಿ ?"

"ಮೇಥಾಜಿಯ ಮನೆಯಲ್ಲಿ."

"ಭಾನುವಾರ ನನಗೂ ರಜವಿದೆ. ಇಲ್ಲಿಗೇ ಬಂದುಬಿಡಿ."

"ಅಗತ್ಯವಾಗಿ ಅಗಲಿ."

ದಾದಾ ಹೋದ ಮೇಲೆ ಆಯಿ

"ಇಲ್ಲಿಂದ ನೀವು ಹೋದಮೇಲೆ ಇಂದಿನವರೆಗೆ ಏನೇನಾಯಿತು, ಎಲ್ಲವನ್ನೂ ವಿಶದವಾಗಿ ಹೇಳಿ" ಎಂದರು.

ಲಲಿತಮ್ಮ ಚಾಚೂ ತಪ್ಪದೆ ಎಲ್ಲವನ್ನೂ ವಿವರಿಸಿ

"ಕೊನೆಗೂ ನೀವು ಬೆಂಗಳೂರಿಗೆ ಬರಲ್ಲಿಲ್ಲ" ಎಂದಳು.

"ನಿಮಗೆ ತಿಳಿಯದೆ ಇರುವುದು ಯಾವದು ಲಲಿತಾಬಾಯಿ—ವೊರ್ಲಿಗೆ ಹೋಗಿದ್ದಿರಾ ?"

"ಇಲ್ಲ—ಈ ಸಂಜೆಗೋ ನಾಳೆಯೊ ಹೋಗಿ ಬರುತ್ತೇವೆ. ಮಾಯಿ ಹೇಗಿದ್ದಾರೆ ?"

"ಈಗ ಚೆನ್ನಾಗಿದ್ದಾಳೆ. ಮಗ ಕೈಗೆ ಬಂದ—ಅವನೂ ಸಂಪಾದಿಸುತ್ತಿದ್ದಾನೆ."

"ಮಾಯಿ ಇಲ್ಲಿಗೆ ಯಾವಾಗಲಾದರೂ ಬರುವರೇ ?"

"ಪ್ರತಿವಾರವೂ ಬರುತ್ತಾಳೆ. ಕಳೆದವಾರ ನಾನೂ ವೀಣಾ ವೊರ್ಲಿಗೆ ಹೋಗಿ ಬಂದೆವು—ನೀವು ಮುಂಬಯಿ ಬಿಟ್ಟು ಹೋದುದು ನಮ್ಮೆಲ್ಲರ ಜೀವನವೂ ಬರಿದಾಗಿದೆ. ದಿನಕ್ಕೆ ಹತ್ತುಸಲವಾದರೂ ವೀಣಾ ನಿಮ್ಮ ಹೆಸರೆತ್ತದಿರುವುದಿಲ್ಲ. ನಾನು ಬಯ್ದರೆ ಗಂಟುಮೂಟೆ ಕಟ್ಟಿಕೊಂಡು 'ನಾನು ಬೆಂಗಳೂರಿಗೆ ಕಕ್ಕ ಕಕ್ಕಿಯ ಹತ್ತಿರ ಹೋಗಿಬಿಡುತ್ತೇನೆ' ಎಂದು ಹೆದರಿಸುತ್ತಾಳೆ."

ಲಲಿತಮ್ಮ ಎದ್ದುಹೋಗಿ ಮಿಠಾಯಿಪೊಟ್ಟಣ ತಂದು ವೀಣಳ ಕೈಗಿತ್ತಳು. ವೀಣಾ ಪೊಟ್ಟಣ ಬಿಚ್ಚಿ

"ನೋಡು ಮಾ—ಎಷ್ಟೊಂದಿದೆ"

ಎಂದು ತಾಯಿಗೆ, ಲಲಿತಮ್ಮನಿಗೆ, ಮೂರ್ತಿಗೆ ಮಿಠಾಯಿ ತಿನ್ನಿಸಿ ತಾನೂ ತಿನ್ನಲಾರಂಭಿಸಿದಳು.

"ಇಲ್ಲಿಗೆ ಬರುವಾಗಲೆಲ್ಲಾ ಕೈತುಂಬ ಮಿಠಾಯಿ, ಆಟದಸಾಮಾನು ತರುತ್ತೀರಿ. ನಾವು ನಿಮಗೆ ಏನನ್ನೂ ಕೊಡುವುದಿಲ್ಲ."

"ನಿಮ್ಮ ಪ್ರೇಮಕ್ಕಿಂತ ಹೆಚ್ಚಿನದಾವುದು ಆಯಿ ?"

"ಕಕ್ಕ ಕಕ್ಕೀಗೆ ಚಹಾ ಮಾಡಿಕೊಡಮ್ಮ"

ಎಂದು ವೀಣಾ ಸೂಚಿಸಿದಳು.

"ನಿಮ್ಮನ್ನು ಕಂಡ ಸಂತೋಷದಲ್ಲಿ ಚಹಾಕೊಡುವುದನ್ನೂ ನಾನು ಮರೆತೆ"

ಎಂದು ಆಯಿ ಒಲೆಯಮೇಲೆ ನೀರಿಟ್ಟರು.

"ನಿಮ್ಮ ಹಾಗೆ ನಾನು ಬಾಸುಂದಿ ಮಾಡುವುದನ್ನು ಕಲಿಯಬೇಕು ಆಯಿ. ಇವರಿಗೆ ಬಾಸುಂದಿಯೆಂದರೆ ಪ್ರಾಣ."

"ಅದು ಯಾವ ಘನವಿದ್ಯೆ ಲಲಿತಾಬಾಯಿ. ಭಾನುವಾರ ನಿಮ್ಮೆದುರಿನಲ್ಲೇ ಬಾಸುಂದಿ ಮಾಡುತ್ತೇನೆ—ಒಮ್ಮೆ ನೀವು ನೋಡಿಕೊಂಡರೆ ಬರುತ್ತದೆ."

"ಮ್ಮಾ, ಕಕ್ಕಕಕ್ಕೀಗೆ ಪೋಳಿ ಮಾಡಿಕೊಡಮ್ಮ."

ಎಂದು ವೀಣಾ ಸೂಚಿಸಿದಳು.

"ನಿನ್ನ ಕಕ್ಕಕಕ್ಕೀಗೆ ಏನು ಕೊಟ್ಟರೂ ಸಾಲದಲ್ಲವೇ ವೀಣಾ"

ಎಂದು ಮೂರ್ತಿ ಕೇಳಿದ.

ಆಯಿ ನೀರಿಗೆ ಚಹಾಪುಡಿ ಹಾಕಿ ಮೂರು ಕಪ್ಪುಗಳಿಗೆ ಕಷಾಯ ಸುರಿದರು. ವೀಣಾ

"ನನಗೂ ಚಹಾ ಬೇಕು" ಎಂದಳು.

"ಇವಳು ಚಹಾ ಕುಡಿಯುವುದನ್ನು ನೀವಾದರೂ ಬಿಡಿಸಿ ಲಲಿತಾಬಾಯಿ-ಕುಡಿಯುವವರ ಜತೆಗೂ ಕುಡಿಯುತ್ತಾಳೆ."

"ಇವತ್ತು ಸ್ವಲ್ಪ ಕೊಟ್ಟುಬಿಡಿ ಆಯಿ"

ಎಂದು ಮೂರ್ತಿ ವೀಣಳ ಪರವಾಗಿ ಪ್ರಾರ್ಥಿಸಿದ-

ವೀಣಾ ಹರ್ಷಚಿತ್ತಳಾಗಿ

"ಕಕ್ಕ ಯಾವಾಗಲೂ ನನ್ನ ಕಡೆ—ನನಗೆ ಗೊತ್ತು" ಎಂದಳು.

ನಾಲ್ಕು ಕಪ್ಪುಗಳಿಗೆ ಚಹಾ ಸುರುವಿ ಆಯಿ ಎಲ್ಲರಿಗೂ ಕೊಟ್ಟರು.

ಚಹಾ ಕುಡಿದುದು ಮುಗಿದಮೇಲೆ ಲಲಿತ ಗಡಿಯಾರ ನೋಡಿ

"ಹನ್ನೆರಡಾಯಿತು—ಇನ್ನು ನಾವು ಹೊರಡೋಣವೇ ?" ಎಂದಳು .

"ಊಹೂ—ನೀವು ಹೋಗಕೂಡದು."

ಎಂದು ವೀಣಾ ಹಟಹಿಡಿದಳು.

"ನೀನೂ ಶಾಲೆಗೆ ಹೋಗಬೇಕಲ್ಲವೇ ?"

"ನಾನೂ ಹೋಗುವುದಿಲ್ಲ—ನೀವೂ ಹೋಗಬೇಡಿ."

"ಈಗ ನಾವು ಹೋಗುತ್ತೇವೆ—ನೀನೂ ಶಾಲೆಗೆ ಹೋಗು. ಭಾನುವಾರ ಬೆಳಿಗ್ಗೆ ನೀನು ಹಾಸಿಗೆಬಿಟ್ಟು ಏಳುವ ಹೊತ್ತಿಗೇ ಇಲ್ಲಿಗೆ ಬಂದು ಬಿಡುತ್ತೇವೆ."

ಎಂದು ಮುದ್ದು ಮಾಡಿದಮೇಲೆ ವೀಣಾ ಗೊಣಗುಟ್ಟುತ್ತಲೇ ಒಪ್ಪಿಕೊಂಡಳು.

"ಊಟಮಾಡಿಕೊಂಡು ಹೋಗು ವೀಣಾ"

ಎಂದು ಆಯಿ ಹೇಳಲು

"ಹಸಿವಿಲ್ಲ ಬೇಡ ಮಾ—ಶಾಲೆಯಿಂದ ಬಂದು ಊಟ ಮಾಡುತ್ತೇನೆ"

ಎಂದು ಹೇಳಿ ತನ್ನ ಪುಸ್ತಕಗಳನ್ನು ಜೋಡಿಸಿಕೊಂಡಳು.

ಲಲಿತ ವೀಣೆಯನ್ನು ಮೆಚ್ಚಿಕೊಳ್ಳುತ್ತ

"ನನ್ನ ಮಗು ಎಷ್ಟು ಒಳ್ಳೆಯದು ನೋಡಿ ಮಾಯಿ" ಎಂದಳು.

"ಹೌದಮ್ಮ ಹೌದು–ಅದನ್ನು ನೀವೇ ಮೆಚ್ಚಿಕೊಳ್ಳಬೇಕು."

ಲಲಿತ ಹೊರಡುವ ಮುನ್ನ ವೀಣಾ ಆಯಿಗಾಗಿ ತಂದಿದ್ದ ಬಟ್ಟೆಗಳನ್ನು ಆಯಿಗೆ ಕೊಟ್ಟಳು. ಮೂರ್ತಿ ತನ್ನ ಕಿಸೆಯಿಂದ ಫೌಂಟನ್ ತೆಗೆದು

"ಇದನ್ನು ದಾದಾಜಿಗೆ ಕೊಡಿ ಆಯಿ" ಎಂದು ಹೇಳಿದ.

ಆಯಿ ಮಾತನಾಡಲು ಸಾಧ್ಯವಾಗಲಿಲ್ಲ. ಹನಿಗೂಡಿದ ಅವರ ಕಣ್ಣು ಗಳೇ ಕೃತಜ್ಞತೆ ಸೂಚಿಸಿದವು.

ವೀಣಳನ್ನು ಅವಳ ಶಾಲೆಯ ಬಳಿ ಬಿಟ್ಟು ಮೂರ್ತಿ, ಲಲಿತಮ್ಮ ಮನೆ ಸೇರಿದ ಕೂಡಲೆ ಲಲಿತ, ಸೆಲೀನಳನ್ನು ಪ್ರತ್ಯೇಕವಾಗಿ ಕರೆದುಕೊಂಡು ಹೋಗಿ

"ಸರ್ದಾರ್ ಬಂದಿದ್ದರೇ"

ಎಂದು ಕೇಳಿದಳು.

"ಇಲ್ಲ. ಬರಲಿಲ್ಲ."

"ನಿರ್ಮಲಾ ಏನಾದರೂ ಹೇಳಿದಳೇ ?"

"ಬೆಳಿಗ್ಗೆಯಿಂದ ಅವಳು ರೂಮು ಬಿಟ್ಟೇ ಬಂದಿಲ್ಲ. ಒಂದೇ ಸಮನೆ ಅಳುತ್ತಿದ್ದಾಳೆ."

"ನೀವು ಮಾತನಾಡಿಸಲಿಲ್ಲವೇ ?"

"ಆಡಿಸಿದೆ. ಸುಮ್ಮನೆ ಅಳುತ್ತಾಳೆ."

ನಿರ್ಮಲನ ರೀತಿಯೇ ಲಲಿತನಿಗೆ ಅರ್ಥವಾಗಲಿಲ್ಲ.

"ಇವತ್ತು ಅವಳಪಾಡಿಗೆ ಅವಳನ್ನು ಬಿಡುವುದು ಒಳ್ಳೆಯದು ಲಲಿತಾ ಬಹೆನ್."

ಎಂದು ಸೆಲೀನ್ ಹೇಳಿದಳು.

# ೨೧

ಮಧ್ಯಾಹ್ನದ ಊಟ ಮುಗಿದಮೇಲೆ ಮೇಥಾ ವಿಧಿಸಿದ್ದ 'ಮೌನ ವಿಶ್ರಾಂತಿ'ಗೆ ಮೂರ್ತಿ ತೆರಳಬೇಕಾಯಿತು. ಮೇಥಾ ಸ್ಟುಡಿಯೋ ಸೇರಿದ. ಸೆಲೀನ್ ತನ್ನ ಪತ್ರವ್ಯವಹಾರ ಮುಗಿಸುವುದಕ್ಕೆ ಕುಳಿತಳು.

ಲಲಿತ ಎಮೀಲ್ ಜೋಲನ 'ಷೇಮ್' (Shame) ಕಾದಂಬರಿ ಓದುತ್ತ ತನ್ನ ಕೋಣೆಯೊಳ್ಲಿ ಮಲಗಿದಳು.

ಸುಮಾರು ನಾಲ್ಕು ಗಂಟೆಯ ವೇಳೆಗೆ ನಿರ್ಮಲಾ ಮೆಲ್ಲನೆ ಬಾಗಿಲು ಸರಿಸಿ ಒಳಕ್ಕೆ ಬಂದಳು.

ಮಲಗಿದ್ದೆಡೆಯಿಂದಲೇ ಲಲಿತ

"ಬಾ ನಿರ್ಮಲಾ" ಎಂದಳು.

ನಿರ್ಮಲಾ ತುಂಟಮಗುವಿನಂತೆ ಲಲಿತನ ಮಂಚದ ಬಳಿ ಬಂದು ನಿಂತಳು.

"ಬಾ—ಕುಳಿತುಕೊ."

ನಿರ್ಮಲಾ ಹಾಸಿಗೆಯ ಮೇಲೆ ಕುಳಿತು

"ನಿಮ್ಮ ಪಕ್ಕದಲ್ಲಿ ಮಲಗಲೇ ಲಲಿತಾ ಬಹೆನ್" ಎಂದಳು.

ಲಲಿತಾ ಪಕ್ಕಕ್ಕೆ ಸರಿದು, ನಿರ್ಮಲನಿಗೆ ಸ್ಥಳಮಾಡಿ, ಅವಳನ್ನು ಪಕ್ಕದಲ್ಲಿ ಮಲಗಿಸಿಕೊಂಡಳು.

ನಿರ್ಮಲಾ ಲಲಿತನನ್ನಪ್ಪಿ ಬಿಕ್ಕಿಬಿಕ್ಕಿ ಅಳಲಾರಂಭಿಸಲು, ಲಲಿತ ಗಾಬರಿಯಾಗಿ

"ಏಕೆ—ಏನಾಯಿತು–ನಿರ್ಮಲಾ, ಏಕೆ ಅಳುತ್ತಿರುವೆ' ಎಂದಳು.

"ನೀವು ಎಷ್ಟು ಒಳ್ಳೆಯವರಕ್ಕಾ."

"ಅದಕ್ಕೆ ಅಳಬೇಕೇ ?"

"ನಾನು—ತುಂಬ ಕೆಟ್ಟವಳು."

"........................"

"ನಿಮ್ಮೆಲ್ಲರ ಮನಸ್ಸನ್ನೂ ನೋಯಿಸಿದೆ."

"ಹೋಗಲಿ ಬಿಡು—ನಿನಗಿಷ್ಟವಿಲ್ಲದಿರುವಾಗ ನಾವು ಒತ್ತಾಯ ಮಾಡುವುದಾದರೂ ಯಾವ ನ್ಯಾಯ. ಬೆಳಿಗ್ಗೆ ನಿನ್ನ ಅಣ್ಣನವರೂ ಹಾಗೇ ಹೇಳಿದರು."

"ನನಗೆ—ನನಗೆ ಇಷ್ಟವಿದೆ ಲಲಿತಕ್ಕ."

ಮಲಗಿದ್ದ ಲಲಿತ ಛಂಗನೆ ಹಾರಿ ಕುಳಿತು

"ಇಷ್ಟವಿದೆಯೇ ?!"

"ಖಂಡಿತವಾಗಿ ಇಷ್ಟವಿದೆ.

"ನಿನ್ನೆಯೇಕೆ ಹಾಗೆ ಹೇಳಿದೆ ?"

"ಸರ್ದಾರರಿಗೆ ನಾವು ತಕ್ಕವಳಲ್ಲ ಎಂದು."

ಲಲಿತ ಸಂತೋಷದ ಭರದಲ್ಲಿ ನಿರ್ಮಲನನ್ನಪ್ಪಿ

"ನಿರ್ಮಲಾ—ನನ್ನ ಮುದ್ದು ತಂಗಿ—ಬಾ, ಸೆಲೀನ್‌ಗೆ ಈ ಸಂತೋಷ ಸಮಾಚಾರ ತಿಳಿಸೋಣ"

ಎಂದು ದರದರನೆ ನಿರ್ಮಲನನ್ನು ಎಳೆದುಕೊಂಡು ಸೆಲೀನ್ ಬಳಿಗೆ ಕರೆತಂದು

"ನಿರ್ಮಲಾ ಒಪ್ಪಿದ್ದಾಳೆ ಸೆಲೀನ್‌ಬಹೆನ್." ಎಂದಳು.

"ಹೌದೇ ತಂಗೀ."

"ಹೌದಕ್ಕ."

ಸೆಲೀನ್ ಕೂಡಲೇ ಹೋಗಿ ಸ್ಟುಡಿಯೋದಲ್ಲಿದ್ದ ಮೇಥನನ್ನು ಕರೆದುಕೊಂಡು ಬಂದಳು.

"ಹೃತ್ಪೂರ್ವಕ ಅಭಿನಂದನೆಗಳು ನಿರ್ಮಲಾ."

"ಎಲ್ಲಾ ನಿಮ್ಮ ಆಶೀರ್ವಾದ ಅಣ್ಣಾ."

ಮಲಗಿ ನಿದ್ರಿಸುತ್ತಿದ್ದ ಮೂರ್ತಿಯನ್ನು ಎಚ್ಚರಗೊಳಿಸಲು ಯಾರೂ ಇಷ್ಟಪಡಲಿಲ್ಲ.

"ಮೇಥಾಭಾಯ್—ಸರ್ದಾರರಿಗೆ ಫೋನ್ ಇದೆಯೇ ?"

"ಇಲ್ಲ ತಂಗಿ."

"ಕೂಡಲೆ ಸರ್ದಾರರನ್ನು ಬರಮಾಡುವಿರಾ ?"

"ಕಾರ್ ಕೊಟ್ಟು ಪರಶುರಾಮನನ್ನು ಕಳಿಸಿಕೊಡುತ್ತೇನೆ."

"ಹಾಗೇ ಮಾಡಿ"

ಎಂದು ಲಲಿತ ಹೇಳಿದಳು.

ಸರ್ದಾರ್ ಬರುವವರೆಗೆ ಈ ವಿಷಯ ಮೂರ್ತಿಗೆ ತಿಳಿಯಕೂಡದೆಂದು ಮೇಥಾ, ಲಲಿತ, ಸೆಲೀನ್ ಒಪ್ಪಂದಮಾಡಿಕೊಂಡರು.

ಸರ್ದಾರ್ ಬರುವವೇಳೆಗೆ ಮೂರ್ತಿ ಎದ್ದು ಕುಳಿತ. ಸೆಲೀನ್, ಮೇಥಾ, ಲಲಿತ, ನಿರ್ಮಲ ಅವನ ಸುತ್ತ ಕುಳಿತರು. ಅವರು ಚಹಾಸೇವಿಸುತ್ತಿದ್ದಂತೆ ಸರ್ದಾರನೂ ಬಂದ. ಸೆಲೀನ್ ಒಂದು ಕಪ್ ಚಹಾ ಬಗ್ಗಿಸಿ ಸರ್ದಾರನ ಕೈಗಿತ್ತಳು.

ಕಪ್ಪು, ಬಸಿಗಳನ್ನು ಟ್ರೆಯಲ್ಲಿಟ್ಟ ಮೇಲೆ ಮೇಥಾ ಎದ್ದು ನಿಂತು ಗಂಭೀರವಾಗಿ

"ಸರ್ದಾರ್ ತಾರಾಸಿಂಗರನ್ನು ವಿವಾಹವಾಗಲೂ ಶ್ರೀಮತಿ ನಿರ್ಮಲಾದೇವಿ ಸಮ್ಮತಿಸಿರುವರೆಂದು ತಿಳಿಸಲು ಸಂತೋಷಿಸುತ್ತೇನೆ" ಎಂದ.

ಸೆಲೀನ್, ಲಲಿತ ಕರತಾಡನಮಾಡಿ ತಮ್ಮ ಸಂತೋಷವ್ಯಕ್ತಮಾಡಿದರು.

ಸರ್ದಾರ್ ಚಕಿತನಾಗಿ ಮೂರ್ತಿಯ ಕಡೆ ತಿರುಗಿ

"ಇದೇನು—ಪರಿಹಾಸ್ಯವೇ ?" ಎಂದ.

ಮೇಥಾ ಸರ್ದಾರನ ಸಮೀಪಕ್ಕೆ ಹೋಗಿ ಕುಳಿತು

"ಪರಿಹಾಸ್ಯವಲ್ಲ ಸರ್ದಾರ್—ಸತ್ಯ. ನನ್ನ ಸೋದರಿ ನಿರ್ಮಲನ ಕೈಹಿಡಿದು ನೀನು ಅವಳ ಜನ್ಮ ಪಾವನ ಮಾಡಬೇಕು."

ಮೂರ್ತಿ ಬೆಕ್ಕಸಬೆರಗಾಗಿ ಸುಮ್ಮನೆ ನೋಡುತ್ತ ಕುಳಿತ.

ನಿರ್ಮಲೆಯೇ ವಿನಯದಿಂದ

"ಸರ್ದಾರ್‌ಜೀ—ನಿನ್ನೆ ನಾನು ಆಡಿದ ತಪ್ಪುಮಾತುಗಳನ್ನು ಕ್ಷಮಿಸಿ" ಎಂದಳು.

ಸರ್ದಾರ್ ನಿರ್ಮಲೆಯನ್ನುದ್ದೇಶಿಸಿ

"ನಿರ್ಮಲಾ—ನೀನು ನಿಜವಾಗಿ ನನ್ನನ್ನು ಮದುವೆಯಾಗುವೆಯಾ ?" ಎಂದ.

"ಆಗುತ್ತೇನೆ ಸರ್ದಾರ್‌ಜೀ."

"ಮನಸ್ಸಿನಲ್ಲಿ ಯಾವ ಅಳಕೂ ಇಲ್ಲವೇ ?"

"ಇಲ್ಲ."

"ಇಲ್ಲಿರುವವರೇ ನನ್ನ ಗುರುಹಿರಿಯರು—ಇವರೇ ನನ್ನ ಪ್ರಾಣ-ಇವರ ಸಾಕ್ಷಿಯಾಗಿ ಹೇಳುತ್ತೇನೆ, ನಿನ್ನನ್ನು ಸುಖವಾಗಿಡಲು ಸರ್ವವಿಧದಿಂದಲೂ ಪ್ರಯತ್ನಿಸುತ್ತೇನೆ" ಎಂದ.

ನಿರ್ಮಲಾ ಎದ್ದುಹೋಗಿ ಸರ್ದಾರನ ಎರಡು ಪಾದಗಳನ್ನೂ ಹಿಡಿದು ನಮಸ್ಕರಿಸಿದಳು.

ಸರ್ದಾರ್ ನಿರ್ಮಲನನ್ನೆಬ್ಬಿಸಿ, ಅವಳೊಂದಿಗೆ ಮೂರ್ತಿ, ಲಲಿತಮ್ಮ, ಸೆಲೀನ್, ಮೇಥಾ ನಾಲ್ವರಿಗೂ ನಮಸ್ಕರಿಸಿದ.

"ಇದೇನು ಸರ್ದಾರ್ ?"

"ಹಿರಿಯರಾದ ನಿಮಗೆ ನಮಸ್ಕರಿಸುವುದರಲ್ಲೇನು ತಪ್ಪು ಪ್ರಸಾದ್ ಭಾಯ್ ?"

ಎಂದು ಸರ್ದಾರ್ ಕೇಳಿದ.

ವಾತಾವರಣ ಸ್ವಲ್ಪ ಶಾಂತವಾಗಲು ಮೂರ್ತಿ

"ಇದೆಲ್ಲಾ ಯಾರ ಪಿತೂರಿ" ಎಂದು ಕೇಳಿದ.

"ನಿರ್ಮಲನದೇ ಮುಂದಾಳುತನ—ಇದಕ್ಕೆ ನಾವು ಯಾರೂ ಜವಾಬ್ದಾರರಲ್ಲ" ಎಂದಳು ಲಲಿತಾ.

ಸೆಲೀನ್ ಅವಳ ಮಾತನ್ನು ಸಮರ್ಥಿಸಿದಳು.

ಹೊರಗೆ ಕಾರುಬಂದು ನಿಂತ ಶಬ್ದವಾಯಿತು.

ಮೂರ್ತಿ, ಮೇಥಾ ಎದ್ದು ಹೋಗಿ ದಸ್ತೂರ್, ನಾನಾ, ಪಾವ್ಲೆಯವರನ್ನು ಸ್ವಾಗತಿಸಿದರು.

ಸರ್ದಾರ್, ನಿರ್ಮಲ ಇವರ ಮದುವೆ ನಿಶ್ಚಯವಾದ ಸಂಗತಿ ಕೇಳಿ ಸೆಂಚುರಿ ಮಿತ್ರರು ಸಂತೋಷಭರಿತರಾಗಿ ವಧೂವರರಿಗೆ ಶುಭಾಶಯಗಳನ್ನು ತಿಳಿಸಿದರು.

"ಸರ್ದಾರ್, ನೀವು ನಮಗೆ ಎರಡು ದಾವತ್ (ಔತಣ) ಕೊಡಬೇಕಾಗಿದೆ"

ಎಂದು ದಸ್ತೂರ್ ಹೇಳಿದ.

"ಎರಡು ಯಾವದು ?"

ಎಂದು ದಾವ್ಲೆ ಕೇಳಲು

"ಮನೆಕಟ್ಟಿದ್ದಕ್ಕೊಂದು ; ಮದುವೆಯಾದುದಕ್ಕೊಂದು."

"ಮದುವೆ ಮುಗಿದಮೇಲೆ ತಾನೇ ದಾವತ್"

ಎಂದು ನಾನಾ ತಿದ್ದುಪಡಿ ಸೂಚಿಸಿದ.

'ಮೇಥಾ ಮ್ಯಾನ್‌ಷನ್ಸ್ (Mehta Mansions)' ಆವರಣದಲ್ಲಿದ್ದ ಸುಂದರ ಹಸಿರು ಹಾಸಿನಮೇಲೆ ಸೆಲೀನ್ ಉಪಾಹಾರ ವ್ಯವಸ್ಥೆಮಾಡಿದ್ದಳು. ಎಲ್ಲರಿಗೂ ಅಲ್ಲಿಗೆ ದಯೆಮಾಡಿಸಬೇಕೆಂದು ಅವಳೇ ಪ್ರಾರ್ಥಿಸಿದಳು.

ಹರಟೆಯ ಜತೆಯಲ್ಲಿಯೇ ಉಪಾಹಾರ ವಿಳಂಬವಾಗಿ ಸಾಗಿತು. ಅತಿಥಿಗಳಿಗೆ ಉಪಾಹಾರದ ತಟ್ಟೆಗಳನ್ನು ಆಳುಗಳು ನಿಶ್ಶಬ್ದವಾಗಿ ತಂದುಕೊಡುತ್ತ, ಅವರು ತಿಂದು ಮುಗಿಸುತ್ತಲೇ ತೆಗೆದುಕೊಂಡು ಹೋಗುತ್ತಿದ್ದರು.

"ಈಚೆಗೆ ನಮ್ಮ ಪ್ರಸಾದ್‌ಭಾಯ್ ಫ್ರೀ ಮೇಸನರಿ (Free Masonary) ಸೇರಿದಂತೆ ಕಾಣುತ್ತದೆ"

ಎಂದು ನಾನಾ ಕೀಟಲೆಮಾಡಿದ.

"ನಾನೇಕೆ ಫ್ರೀ ಮೇಸನರಿ ಸೇರಬೇಕು ನಾನಾ."

"ನಿಮ್ಮ ವಿಷಯಾನೇ ತಿಳಿಯುವಂತಿಲ್ಲ. ಎಲ್ಲಾ ಗೋಪ್ಯ. ನಿಮ್ಮಿಂದ ಕಾಗದಗಳೂ ಬರುವುದಿಲ್ಲ."

ಮೂರ್ತಿಯ ಸಾಹಿತ್ಯಪ್ರಗತಿಯನ್ನು ಲಲಿತಮ್ಮ ಸೂಕ್ಷ್ಮವಾಗಿ ವಿವರಿಸಿದಳು.

ನಾನಾ ನಗುತ್ತ

"ಪ್ರಸಾದ್‌ಭಾಯ್ ಕೈತುಂಬ ಹಣಮಾಡಿರಬೇಕು."

"ನನ್ನ ಕೈಯಲ್ಲಿ ಹಣದಗೆರೆ ಬರೆದಿಲ್ಲ ನಾನಾ. ಸಾಹಿತಿ ವ್ಯಾಪಾರಿಯಾದ ಹೊರತೂ ಹಣಮಾಡಲು ಸಾಧ್ಯವಿಲ್ಲ. ಕನ್ನಡದಲ್ಲಿ ಕೆಲವು ಸಾಹಿತಿಗಳು ಹಣಮಾಡಿದ್ದಾರೆ—ನಾನು ಆ ವರ್ಗಕ್ಕೆ ಸೇರಿಲ್ಲ. ಇಂದಿಗೂ ಆದಾಯ ವೆಚ್ಚ ಸರಿತೂಗಿಸುವ ಕಷ್ಟ ನನಗೆ ತಪ್ಪಿಲ್ಲ. ನಾನು ಐವತ್ತು ರೂಪಾಯಿ ಕೊಡಲಿ, ನೂರು ರೂಪಾಯ ಕೊಡಲಿ ಲಲಿತ ಹೇಗೋ ತೂಗಿಸಿಕೊಂಡು ಹೋಗುವುದರಿಂದ ನನ್ನ ಕಥೆ ನಡೆದಿದೆ."

"ಇನ್ನಾದರೂ ನೀವು ನಾಲ್ಕುಕಾಸು ಕೂಡಿಡುವ ಪ್ರಯತ್ನಮಾಡಬೇಕು ಪ್ರಸಾದ್. ಎಷ್ಟುಕಾಲ ಹೀಗೆ ಒಂದೇ ಸಮನಾಗಿ ದುಡಿಯಲು ಸಾಧ್ಯ?"

"ನನ್ನ ಪುಸ್ತಕಗಳ ಪ್ರಕಾಶಕರು, ವಿಶ್ವೇಶ್ವರಯ್ಯನವರೂ ಹಣವಂತರಲ್ಲ ನಾನಾ. ನಾನು 'ಜನಸಂದೇಶ' ದೈನಂದಿನ ಪತ್ರಿಕೆಯ ಸಂಪಾದಕನಾಗಿದ್ದಾಗ ಅವರು ಉಪಸಂಪಾದಕರಾಗಿದ್ದರು. ತತ್ತ್ವಕ್ಕೆ ಕಟ್ಟುಬಿದ್ದು ಅವರೂ ಪತ್ರಿಕೆಗೆ ಕೈಮುಗಿದು ಸ್ವಾತಂತ್ರ ವ್ಯವಹಾರ ಆರಂಭಿಸಿದರು. ಮೊದಮೊದಲು ಅವರು ಪ್ರಕಟಿಸಿದ ನನ್ನ ಪುಸ್ತಕಗಳಿಂದ ಹಣ ಬರಲಿಲ್ಲ—ಈಗ ಅಲ್ಪಸ್ವಲ್ಪ ಹಣ ಕಾಣುತ್ತಿದ್ದಾರೆ. ಈ ಮಿತ್ರರು ಶಕ್ತಿಮೀರಿ ನನಗೆ ಸಹಾಯಮಾಡುತ್ತಿದ್ದಾರೆ. ಯಾವಾಗ ಹಣಕೇಳಲಿ 'ಇಲ್ಲ'ವೆನ್ನುವುದಿಲ್ಲ. ವಿಶ್ವೇಶ್ವರಯ್ಯನವರು ನನಗೆ ಕೊಡುತ್ತಿರುವುದಕ್ಕಿಂತ ನಾಲ್ಕುಕಾಸು ಹೆಚ್ಚಾಗಿ ಇತರ ಪ್ರಕಾಶಕರು ಕೊಡಬಹುದು. ಅದರ ಕಷ್ಟಕ್ಕಾಗಿರುವ ವಿಶ್ವೇಶ್ವರಯ್ಯನವರ ಉಪಕಾರ ಹೇಗೆ ಮರೆಯಲಿ?"

"ಪ್ರಸಾದನ ಸರ್ವಯಶಸ್ಸಿಗೂ ಈ ಪ್ರಾಮಾಣಿಕತೆಯೇ ಮೂಲಕಾರಣ" ಎಂದು ಮೇಥಾ ಅಭಿಮಾನಪೂರ್ವಕವಾಗಿ ನುಡಿದ.

"ನಿಮ್ಮಿಂದ ನನಗೊಂದು ಉಪಕಾರವಾಗಬೇಕು ದಸ್ತೂರ್."

"ಉಪಕಾರದ ಮಾತೇಕೆ? ನೀವು ಹೇಳಿದುದನ್ನು ನಿರ್ವಹಿಸಲು ನಾವು ಸದಾಸಿದ್ಧ."

"ವಿಶ್ವೇಶ್ವರಯ್ಯನವರಲ್ಲಿ ಒಂದು ಹಳೆಯ ಮುದ್ರಣಯಂತ್ರವಿದೆ. ಅದರಲ್ಲಿ ಕೆಲಸ ಬೇಗ ಆಗುವುದಿಲ್ಲ—ಚೆನ್ನಾಗಿಯೂ ಆಗುವುದಿಲ್ಲ. ಈಗವರು ಹೊಸ ಯಂತ್ರ ಕೊಳ್ಳಲು ಸಿದ್ಧರಾಗಿದ್ದಾರೆ. ಅರ್ಧಹಣ ಯಂತ್ರ ಕೈಸೇರಿದೊಡನೆಯೇ ಕೊಡುತ್ತಾರೆ—ಉಳಿದುದನ್ನು ತಿಂಗಳು ಕಂತಿನಲ್ಲಿ ಕೊಡುತ್ತಾರೆ. ಡಬ್ಬಲ್ ಕ್ರೌನ್ (Double Crown) ಸೈಜಿನ ಯಂತ್ರ ಆಯ್ದು ಕಳುಹಿಸುವ ಕೆಲಸ ನೀವು ಮಾಡಿಕೊಡಬೇಕು."

"ನಾಳೆಯೇ ಇದರ ವ್ಯವಸ್ಥೆಮಾಡುತ್ತೇನೆ. ಕಂತುಗಳಲ್ಲಿ ಹಣತೆಗೆದುಕೊಳ್ಳಲು ಪೀರ್‌ಭಾಯ್ ಒಪ್ಪುತ್ತಾನೆ."

"ಈಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು."

"ಮುದ್ರಣಸಂಬಂಧವಾದ ಯಾವ ಸಾಮಾನು ಬೇಕಾದರೂ ವಿಶ್ವೇಶ್ವರಯ್ಯನವರು ನಮಗೆ ಬರೆಯಲಿ—ನಾವು ಕಳಿಸಿಕೊಡುತ್ತೇವೆ"

ಎಂದು ನಾನಾ ಸೂಚಿಸಿದ.

"ಪ್ರಸಾದ್ ಕನ್ನಡದಲ್ಲಿ ಬರೆಯಲು ನನ್ನ ಅಭ್ಯಂತರವಿಲ್ಲ–ಮಧ್ಯೆ ಮಧ್ಯೆ ಇಂಗ್ಲಿಷಿನಲ್ಲಿ ಏಕೆ ಬರೆಯಬಾರದು. ಅವನು ತನ್ನ ಕೃತಿಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿದರೂ ಎಷ್ಟೋ ಕೆಲಸವಾಗುತ್ತದೆ"

ಎಂದು ಮೇಥಾ ಅಭಿಪ್ರಾಯಪಟ್ಟ.

"ಸಾಹಿತ್ಯ ಅಸೂಯಾಗ್ರಸ್ತ ಹೆಂಗಸಿನಂತೆ ಮೇಥಾ. ಒಂದು ಭಾಷೆ ಸಿದ್ಧಿಸಬೇಕಾದರೆ ಅದರ ಜಾಡನ್ನೇ ಹಿಡಿದುಹೋಗುತ್ತಿರಬೇಕು. ಕನ್ನಡದ ಭಾಷಾಶೈಲಿಗೂ ಇಂಗ್ಲೀಷ್ ಭಾಷಾ ಶೈಲಿಗೂ ಸ್ವಲ್ಪವೂ ಸಂಬಂಧವಿಲ್ಲ. ನನ್ನ ಸಮಕಾಲೀನ ಸಾಹಿತಿಗಳು ಕೆಲವರು ತಮ್ಮ ಕೃತಿಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದಾರೆ–ಸ್ವಲ್ಪವೂ ತೃಪ್ತಿಕರವಾಗಿಲ್ಲ. ಅವೂ ಇಂಗ್ಲಿಷ್ ಹೊದಿಕೆ ಧರಿಸಿದ ಕನ್ನಡ ಕೃತಿಗಳಾಗಿವೆ. ಕನ್ನಡ ಕನ್ನಡದಂತಿದ್ದರೆ, ಇಂಗ್ಲಿಷ್ ಇಂಗ್ಲಿಷಿನಂತಿದ್ದರೇ ಚೆನ್ನು."

"ಲೇಖಕರೆಲ್ಲಾ ಈ ಅಭಿಪ್ರಾಯ ತಳೆದರೆ ಒಂದು ಭಾಷೆಯ ಸಾಹಿತ್ಯದ ಪರಿಚಯ ಇನ್ನೊಂದು ಭಾಷೆಯ ಜನಕ್ಕೆ ಆಗುವುದು ಹೇಗೆ ?"

"ಮೂಲಲೇಖಕ ಆ ಕೆಲಸ ಕೈಗೊಳ್ಳುವುದಕ್ಕಿಂತಲೂ ಉಳಿದವರು ಕೈಗೊಳ್ಳುವುದು ಲೇಸು. ಅನುವಾದಕ ಲೇಖಕನ ಒಂದು ಕೃತಿಯ ಪರಿಚಯವುಳ್ಳವನಾಗಿದ್ದರೆ ಸಾಲದು ; ಲೇಖಕನ ಸಮಸ್ತಕೃತಿಗಳನ್ನೂ ಅನುವಾದಕ ಅಭ್ಯಾಸಮಾಡಿದ್ದರೆ ಅವನ ಸಮಗ್ರ ಮನೋಭಾವವನ್ನರಿಯಲು ಸಮರ್ಥನಾಗುತ್ತಾನೆ. ಈ ವಿಷಯದಲ್ಲಿ ಜೊವೆಟ್, ಆಮುರ್ ಮಾಡ್, ಗಿಲ್ಬರ್ಟ್ ಮರ್ರೆ ನಮಗೆ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ."

"ನಿಮ್ಮ ಕೃತಿಗಳನ್ನು ದಕ್ಷತೆಯಿಂದ ಅನುವಾದಮಾಡಬಲ್ಲವರ ಕೊರತೆಯಿಲ್ಲವಲ್ಲಾ !" ಎಂದು ದಾವ್ಲೆ ಹೇಳಿದ.

"ಯಾರವರು ?"

"ಲಲಿತಾಬಾಯಿಯವರು."

"ಏನು ಹೇಳುತ್ತಿರುವರಿ ದಾವ್ಲೆಅಣ್ಣ."

"'ಸೆಂಚುರಿ'ಗೆ ನೀವು ಬರೆಯುತ್ತಿದ್ದ ಇಂಗ್ಲಿಷ್ ಲೇಖನಗಳನ್ನು ನಾನು ಓದುತ್ತಿದ್ದೆ ಲಲಿತಾಬಾಯಿ."

"ಇಂಗ್ಲಿಷಿನಲ್ಲಿ ಒಂದು ಲೇಖನ ಬರೆಯುವುದಕ್ಕೂ, ಸಾಹಿತ್ಯದ ಒಂದು ಶ್ರೇಷ್ಠಕೃತಿ ಅನುವಾದಮಾಡುವುದಕ್ಕೂ ವ್ಯತ್ಯಾಸವಿಲ್ಲವೇ ?"

"ಇದೆ—ನೀವು ಪ್ರಯತ್ನಮಾಡಿದರೆ ಈ ಕೆಲಸ ಯಶಸ್ವಿಯಾಗುತ್ತದೆ."

"ಅಟ್ಟಕ್ಕೆ ಹಾರಲಾಗದ ಬಡ್ಡಿ ಬೆಟ್ಟಕ್ಕೆ ಹಾರುವುದೇ ?"

"ನೀವು ಅನುವಾದಮಾಡಿದ ಅಧ್ಯಾಯಗಳನ್ನು ಇಲ್ಲಿ ಕಳುಹಿಸುತ್ತ ಬನ್ನಿ. ಪರಿಷ್ಕರಣ ಕೆಲಸ ಸೆಲೀನ್ ಮಾಡುತ್ತಾಳೆ. ಏನು ಸೆಲೀನ್ ?"

"ಅವಶ್ಯಕವಾಗಿ ಆಗಲಿ. ಹಸ್ತಪತ್ರಿಕೆಯನ್ನು ಅಚ್ಚಿಗೆ ಸಿದ್ಧಗೊಳಿಸುವ ಕೆಲಸ ನನಗಿರಲಿ."

"ಪುಸ್ತಕ ಪ್ರಕಟಿಸುವ ಜವಾಬ್ದಾರಿ ನಮಗಿರಲಿ. 'ಸೆಂಚುರಿ ಪಬ್ಲಿಕೇಷನ್ಸ್' (Century publications) ಸಂಸ್ಥೆಯಿಂದ ಹೊರಬೀಳುವ ಮೊದಲನೆಯ ಪುಸ್ತಕ ಪ್ರಸಾದನಾಗಿರಬೇಕು."

ಅಧೀರಳಾಗಿದ್ದ ಲಲಿತಾ ಸಂಕೋಚಪಟ್ಟುಕೊಂಡೇ

"ಆಗಲಿ ಪ್ರಯತ್ನಿಸುತ್ತೇನೆ. ನನ್ನ ಅನುವಾದ ಸಮರ್ಪಕವಾಗಿಲ್ಲದಿದ್ದರೆ ಆಕ್ಷೇಪಿಸಬೇಡಿ—ಇದು ನನ್ನ ಶಕ್ತಿಮೀರಿದ ಕೆಲಸ" ಎಂದಳು.

ಎಂಟು ಗಂಟೆಯವರೆಗೆ ಸೆಂಚುರಿ ಗೆಳೆಯರು ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತಿದ್ದು ಹೊರಡಲನುವಾದರು.

ಸರ್ದಾರನೂ ಎದ್ದುನಿಂತ.

"ಮದುವೆ ಯಾವಾಗ ಸರ್ದಾರ್ ?" ಎಂದು ನಾನಾ ಕೇಳಿದ.

"ಅದನ್ನು ನೀವು ಹೇಳಬೇಕು. ಮುಹೂರ್ತ ಎಂದು ನೀವು ಗೊತ್ತು ಮಾಡಿ, ನನ್ನ ಕರೆದರೆ ಬರುವುದಷ್ಟೇ ನನ್ನ ಕೆಲಸ."

"ಸರಿಯಾಗಿ ಹೇಳಿದೆ ಸರ್ದಾರ್"

ಎಂದು ಮೇಥಾ ಮೆಚ್ಚಿಕೊಂಡ.

ಸೆಂಚುರಿ ಗೆಳೆಯರನ್ನು ಕಳುಹಿಸಿಕೊಟ್ಟಮೇಲೆ

"ಪುನಃ ನಿಮ್ಮ ದರ್ಶನ ಯಾವಾಗ ಸರ್ದಾರ್"

ಎಂದು ಮೂರ್ತಿ ಕೇಳಿದ.

"ಇನ್ನು ಆ ಪ್ರಶ್ನೆ ಕೇಳಬೇಕಾದ ಅಗತ್ಯವೇ ಇಲ್ಲ ಪ್ರಸಾದ್. ನಿರ್ಮಲ ಇಲ್ಲಿರುವವರಿಗೆ ಸರ್ದಾರ್‌ಜೀ ನಮ್ಮನ್ನು ದುರ್ಲಕ್ಷಿಸುವುದಿಲ್ಲ."

ಸರ್ದಾರ್ ನಸುನಗುತ್ತ

"ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲಲ್ಲವೇ ಮೇಥಾಜಿ."

"ಈಗ ಹಳ್ಳಕ್ಕೆ ಬಿದ್ದಿರುವುದು ತೋಳವಲ್ಲ ಸರ್ದಾರ್—ಸಿಂಹ—ವನರಾಜ"

ಎಂದು ಮೇಥಾ ನಗೆಯಾಡಿದ.

## ೨೨

ಸಂಜೆ ವೊರ್ಲಿಗೆ (Worli) ಹೊರಡಲು ಸಿದ್ಧನಾದ ಮೂರ್ತಿ, ಮೇಥನ ಬಳಿಗೆ ಬಂದು

"ವೊರ್ಲಿಗೆ ಬರುತ್ತಿಯಾ ಮೇಥಾ ?" ಎಂದು ಕೇಳಿದ.

"ನನಗೆ ಸ್ವಲ್ಪ ಕೆಲಸವಿದೆ—ನೀವು ಹೋಗಿ ಬನ್ನಿ. ಇದನ್ನು ಈಗಲೇ ಮುಗಿಸದಿದ್ದರೆ ಬಣ್ಣಗಳು ಒಣಗಿಹೋಗುತ್ತವೆ."

"ನಿನ್ನ 'ಗೀತಾ ಚಿತ್ರಮಾಲೆ' ನನಗೆ ತೋರಿಸಬಾರದೆಂದು ಸಂಕಲ್ಪ ಮಾಡಿರುವೆಯಾ ?"

"ನಿನ್ನ ವಿಶ್ರಾಂತಿಯ ಅವಧಿ ಕಳೆಯುವವರೆಗೆ ಚಿತ್ರಗಳನ್ನು ಖಂಡಿತವಾಗಿ ತೋರಿಸುವುದಿಲ್ಲ."

"ನಿನ್ನ ಸಂತೋಷ"

ಕಾರಿನ ಬಳಿಗೆ ಲಲಿತ ಒಬ್ಬಳೇ ಬಂದುದನ್ನು ಕಂಡು ಮೂರ್ತಿ

"ನಿರ್ಮಲಾ ಬರುವುದಿಲ್ಲವೇ ?" ಎಂದು ಕೇಳಿದ.

"ಅವಳು ಇಲ್ಲಿಯೇ ಇರಲಿ—ಸರ್ದಾರ್ ಬಂದರೂ ಬರಬಹುದು" ಎಂದಳು.

ಮೂರ್ತಿ, ಲಲಿತಮ್ಮ ಇಬ್ಬರೇ ವೊರ್ಲಿಗೆ ಹೊರಡಬೇಕಾಯಿತು.

ದಾರಿಯಲ್ಲಿ ಲಲಿತಮ್ಮ ತಿಂಡಿ ತಿನಿಸುಗಳನ್ನೂ ಆಯಿ ಮಕ್ಕಳಿಗೆ ಬಟ್ಟೆ ಬರೆಯನ್ನು ಕೊಂಡಳು.

ವೊರ್ಲಿಗೆ ಬಂದು ಲಲಿತಮ್ಮ ಆಯಿಯ ಜಾಲಿನ ಬಾಗಿಲು ತಟ್ಟಿದಾಗ ಆಯಿಯೇ ಬಂದು ಬಾಗಿಲು ತೆಗೆದು

"ಯಾರು ?" ಎಂದಳು.

"ನಾನು ಆಯಿ—ಗುರುತು ಸಿಕ್ಕಲಿಲ್ಲವೇ ?"

"ಇಲ್ಲ. ಈಚೆಗೆ ನನಗೆ ಕಣ್ಣು ಚೆನ್ನಾಗಿ ಕಾಣುತ್ತಿಲ್ಲ—ನೀವು ಯಾರು ?"

"ನಾನು ಲಲಿತ—ಇವರು ಪ್ರಸಾದರು."

"ಓಹೋಹೋ ! ಅಣ್ಣಾ ಸಾಹೇಬರೇ"

ಎಂದು ಆಯಿ ತನ್ನೆರಡು ಬಾಹು ಬಾಚಿ ಮೂರ್ತಿಯನ್ನಪ್ಪಿಕೊಂಡಳು.

ಆಯಿ ಅದೇ ಜಾಲಿನಲ್ಲಿ ವಾಸಿಸುತ್ತಿದ್ದರೂ ಮೊದಲಿನ ದಟ್ಟದಾರಿದ್ರ್ಯ ವಿರಲಿಲ್ಲ. ಗೋಡೆಯ ಮೇಲೆ ನೇತುಹಾಕಿದ್ದ ಬಟ್ಟೆಗಳು ನೂಲಿನವಾದರೂ ಶುಭ್ರವಾಗಿದ್ದವು.

"ಮಕ್ಕಳೆಲ್ಲಿ ಆಯಿ"

ಎಂದು ಲಲಿತ ಕೇಳಿದಳು.

"ತುಲಸೀ, ತುಕಾ ಕೆಲಸದಮೇಲೆ ಹೋಗಿದ್ದಾರೆ—ಶೋಭಾ ಇಲ್ಲೇ ಎಲ್ಲೋ ಆಡಿಕೊಳ್ಳುತ್ತಿದ್ದಾಳೆ. ಎಷ್ಟು ದಿವಸವಾಯ್ತು ನಿಮ್ಮನ್ನು, ನೋಡಿ—ಬಡವಿಯನ್ನು ಮರೆತರೇನೋ ಎಂದುಕೊಳ್ಳುತ್ತಿದ್ದೆ."

"ನೀವೀಗ ಕೆಲಸದ ಮೇಲೆ ಹೋಗುವುದಿಲ್ಲವೇ ಆಯಿ ?"

"ಇಲ್ಲ ಬಾಯಿ-ದೃಷ್ಟಿಪಾಟ ಚೆನ್ನಾಗಿಲ್ಲವೆಂದು ಗಿರಣಿಯವರು ನನ್ನನ್ನು ಕೆಲಸದಿಂದ ತೆಗೆದುಹಾಕಿದರು. ತುಕಾ ಈಗ ಚೆನ್ನಾಗಿ ಸಂಪಾದಿಸುತ್ತಿದ್ದಾನೆ—ತುಲಸಿಯೂ ಪಗಾರ ತರುತ್ತಾಳೆ. ನಿಮ್ಮ ದಯದಿಂದ ಯಾವ ತೊಂದರೆಯೂ ಇಲ್ಲ ತಾಯಿ."

"ತುಲಸಿ, ತುಕಾ ಈಗ ತುಂಬ ಬೆಳೆದಿರಬೇಕು."

"ನಿಮಗೆ ಗುರುತು ಸಿಕ್ಕದಷ್ಟು ಬೆಳೆದಿದ್ದಾರೆ ಬಾಯಿ."

ಕುಣಿದು ಕುಪ್ಪಳಿಸುತ್ತ ಬಂದ ಶೋಭಾ ಹೊಸಬರ ಮುಖ ಕಂಡು ಬಾಗಿಲಲ್ಲೇ ನಿಂತಳು.

"ಯಾರು ಶೋಭಾನೇ ?"

"ಹೌದು ಆಯಿ."

"ಇಲ್ಲಿ ಬಾ."

ಶೋಭಾ ಬಂದು ತಾಯಿಯ ಬಳಿ ವಿನಮ್ರ ಭಾವದಿಂದ ಕುಳಿತಳು.

"ಇವರು ಯಾರು ಗೊತ್ತೇ ಶೋಭಾ."

"ಇಲ್ಲ ಮಾ"

"ಈ ಅಣ್ಣ—ಈ ಅಕ್ಕ ಅವರೇ ನನ್ನ ಭಾಗ್ಯದೇವತೆಗಳು. ನಾನು ದುಃಖದಲ್ಲಿದ್ದಾಗ ಸಮಾಧಾನಮಾಡಿದರು; ಕಷ್ಟದಲ್ಲಿದ್ದಾಗ ಧೈರ್ಯ ಹೇಳಿದರು. ತಾವು ತಿನ್ನುವ ರೊಟ್ಟಿ ನಮಗಿಟ್ಟು ಸಾಕಿದರು."

ಲಲಿತ ಶೋಭಾಳನ್ನು ಹತ್ತಿರ ಕರೆದು ಕೂಡಿಸಿಕೊಂಡು

"ಶಾಲೆಗೆ ಹೋಗುತ್ತಿದ್ದೀಯಾ ಶೋಭಾ" ಎಂದು ಕೇಳಿದಳು.

"ರಾತ್ರಿಶಾಲೆಗೆ ಹೋಗುತ್ತಿದ್ದೇನೆ ಬಾಯಿ."

"ಓದಲು ಆಸೆಯಾಗುತ್ತದೆಯೋ ?"

"ತುಂಬ ಆಸೆಯಾಗುತ್ತದೆ ಬಾಯಿ."

"ನಮ್ಮೂರಿಗೆ ಬರುವೆಯಾ ?"

"ಓದಿಸುವುದಾದರೆ ಬರುತ್ತೇನೆ."

"ನಮ್ಮೂರಿನಲ್ಲಿ ಮರಾಟಿಶಾಲೆ ಇಲ್ಲ."

"ಇನ್ನೇನಿದೆ ?"

"ಕನ್ನಡ—ಇಂಗ್ಲಿಷ್."

"ಅದನ್ನೇ ಕಲಿಯುತ್ತೇನೆ."

"ಮಾಯಿ ಕಳಿಸುತ್ತಾರೇನು ಕೇಳು. ಕರೆದುಕೊಂಡು ಹೋಗಲು ನಾನು ಸಿದ್ಧವಾಗಿದ್ದೇನೆ."

ಮಾಯಿ ಅಂತಃಕರಣ ಕಲಕಿತು. ಒಮ್ಮೆ ಪ್ರಸಾದನ ಮುಖ, ಒಮ್ಮೆ ಲಲಿತಮ್ಮನ ಮುಖ ನೇವರಿಸಿ

"ಪಂಡೋಬಾ, ರುಕ್ಮಾಯಿಯನ್ನು ನೋಡಿದಂತಾಯಿತು." ಎಂದು.

"ಅಣ್ಣಾಸಾಹೇಬ್, ಈಚೆಗೆ ಏನು ಬರೆದಿದ್ದಾರೆ" ಎಂದು ಕೇಳಿದಳು.

"ಬಹಳ ಪುಸ್ತಕಗಳನ್ನು ಬರೆದಿದ್ದಾರೆ ಆಯಿ."

"ಅದನ್ನೆಲ್ಲಾ ಮರಾಟಿಗೆ ಮಾಡಿಸಿ ನನಗೆ ತಂದುಕೊಡುವುದಾಗಿ ಅಣ್ಣಾ ಸಾಹೇಬ್ ಹೇಳಿದ್ದರು—ಮರೆತೇ ಬಿಟ್ಟರೇನೋ ?"

"ಇಲ್ಲ ಆಯಿ—ಮರೆತಿಲ್ಲ. ಪುರಸತ್ತಾಗಿಲ್ಲ ಅಷ್ಟೆ !"

"ಅಣ್ಣಾಸಾಹೇಬ್, ನನಗೂ ವಯಸ್ಸಾಯಿತು—ನನ್ನಕಾಲ ಮುಗಿಯುತ್ತ ಬಂದಿದೆ. ಮಕ್ಕಳು ದೊಡ್ಡವರಾದರು, ಇನ್ನು ಯೋಚನೆಯಿಲ್ಲ.

ತುಕಾ ಸಂಸಾರ ನಡೆಸಬಲ್ಲ. ನಾನು ಕಣ್ಣು ಮುಚ್ಚಿಕೊಂಡರೆ ನನ್ನ ಮಕ್ಕಳನ್ನು ಮರೆಯಬೇಡಿ."

"ಎಂದೆಂದಿಗೂ ಮರೆಯುವುದಿಲ್ಲ ಆಯಿ."

"ದಾದಾನ್ನ ನೋಡಿದ್ದಿರಾ ?"

"ನಿನ್ನೆ ನೋಡಿದ್ದೆವು."

"ವೀಣಾ, ವೀಣಾತಾಯಿ ಇಲ್ಲಿಗೆ ಬರುತ್ತಿರುತ್ತಾರೆ. ವೀಣೆಗೂ ಶೋಭೆಗೂ ತುಂಬ ಸ್ನೇಹ"

ಎಂದು ಮೇಲಕ್ಕೇಳಲು ಆಯಿ ಪ್ರಯತ್ನಿಸಿದಳು.

"ಏಕೆ ಏಳುತ್ತಿರುವಿರಿ ಆಯಿ."

"ಚಹಾ ಮಾಡಿಕೊಡುತ್ತೇನೆ."

"ನೀನು ಕುಳಿತುಕೊಳ್ಳಮ್ಮ—ನಾನು ಮಾಡಿಕೊಡುತ್ತೇನೆ"

ಎಂದು ಶೋಭಾ ಛಂಗನೆ ಹಾರಿದಳು.

"ಚಹಾ ಮಾಡುವುದಕ್ಕೂ ಶೋಭನಿಗೆ ಬರುತ್ತದೆ !"

ಎಂದು ಲಲಿತ ಕೇಳಲು

"ರೊಟ್ಟಿ, ಭಾಜಿ, ಝುಣಕ ಎಲ್ಲಾ ಮಾಡುತ್ತಾಳೆ ಬಾಯಿ. ಬಡವರ ಮಕ್ಕಳಾದ ಮೇಲೆ ಅಡಿಗೆ, ಕೆಲಸ ಕಲಿಯದಿದ್ದರಾಗುತ್ತದೆಯೇ ?"

"ತುಲಸೀಗೆ ಮದುವೆ ವಯಸ್ಸಲ್ಲವೇ ಆಯಿ."

"ಹೌದು."

"ಮದುವೆ ಪ್ರಯತ್ನಮಾಡಿರುವಿರಾ ?"

"ತುಕಾ ಜತೆಯಲ್ಲಿ ಒಬ್ಬ ಹುಡುಗ ಕೆಲಸಮಾಡುತ್ತಿದ್ದಾನೆ. ಅವನಿಗೇ ತುಲಸಿಯನ್ನು ಕೊಟ್ಟು ಲಗ್ನ ಮಾಡಬೇಕೆಂದಿದ್ದೇನೆ."

"ಹುಡುಗ ಚೆನ್ನಾಗಿದ್ದಾನೆಯೇ ?"

"ಚೆನ್ನಾಗಿದ್ದಾನೆ."

"ಅನುಕೂಲವಾಗಿದ್ದಾನೆಯೇ ?"

"ಗಿರಣಿಯಲ್ಲಿ ದುಡಿಯುತ್ತಾನೆ—ಅವನಿಗೂ ಪಗಾರ ಬರುತ್ತದೆ."

"ಒಳ್ಳೆಹುಡುಗಿ ನೋಡಿ ತುಕೋಜಿಗೂ ಮದುವೆಮಾಡಿಬಿಡಿ ಆಯಿ."

"ಹೇಗೆ ಸಾಧ್ಯ ತಾಯಿ. ನಾನೂ ಶೋಭಾ ಇಬ್ಬರೂ ದುಡಿಯುತ್ತಿಲ್ಲ.

ತುಲಸೀಗೆ ಮದುವೆಯಾದರೆ ಅವಳ ಸಹಾಯವೂ ತಪ್ಪಿಹೋಗುತ್ತದೆ. ತುಕಾ ಎಷ್ಟು ಜನಕ್ಕೆ ತಂದು ಹಾಕಬಲ್ಲ!"

"ಶೋಭೆಯನ್ನು ನನ್ನ ಜತೆ ಏಕೆ ಕಳಿಸಿಕೊಡಬಾರದು?—ಒಮ್ಮೆ ನಾನು ಮಾಸ್ತರಿಣಿಯಾಗಿದ್ದೆ ಆಯಿ—ಶೋಭನಿಗೆ ಚೆನ್ನಾಗಿ ಪಾಠ ಹೇಳಿ ಕೊಡುತ್ತೇನೆ. ಅವಳ ಬಗ್ಗೆ ನೀವು ಚಿಂತೆಮಾಡುವ ಕಾರಣವೇ ಇರುವುದಿಲ್ಲ."

"ನಿಮ್ಮ ವಿಶ್ವಾಸವಿದ್ದರೆ ಸಾಕು ತಾಯಿ—ನನ್ನ ಹೊರೆ ನಿಮ್ಮ ಮೇಲೆ ಏಕೆ ಹಾಕಲಿ?"

ಶೋಭಾ ಚಹಾ ಮಾಡಿತಂದು ಎಲ್ಲರಿಗೂ ಕೊಟ್ಟಳು. ಮೂರ್ತಿ ಚಹಾ ಚಪ್ಪರಿಸುತ್ತ

"ಸೊಗಸಾಗಿದೆ—ನಿನ್ನ ಕೈಹಿಡಿಯುವನು ತುಂಬ ಪುಣ್ಯಶಾಲಿ—ಇಲ್ಲಿ ಬಾ ತಂಗೀ" ಎಂದು ಕರೆದ.

ಶೋಭಾ ನಾಚಿ ನಿಂತ ಸ್ಥಳದಿಂದ ಅಲುಗಾಡಲಿಲ್ಲ.

"ಹೋಗು ಶೋಭಾ—ಅಣ್ಣಾ ಸಾಹೇಬರ ಬಳಿ ಕುಳಿತುಕೋ."

ಎಂದು ಆಯಿ ಹೇಳಲು ಶೋಭಾ ಮೆಲ್ಲನೆ ಬಂದು ಮೂರ್ತಿಯ ಬಳಿ ಕುಳಿತಳು.

ಮೂರ್ತಿ ಅವಳ ಗಲ್ಲ ಹಿಡಿದು ಪ್ರೀತಿಯಿಂದ

"ಹಾಡು ಬರುತ್ತದೆಯೇ?"

"ಇಲ್ಲ ಸಾಹೇಬ್."

"ಭಜನೆಯ ಹಾಡೂ ಬರುವುದಿಲ್ಲವೇ?"

"ಒಂದೆರಡು ಬರುತ್ತದೆ—"

"ಹೇಳು ನೋಡೋಣ."

ಶೋಭಾ ಬಡಪೆಟ್ಟಿಗೆ ಬಾಯಿ ತೆಗೆಯಲಿಲ್ಲ. ಮೂರ್ತಿ, ಲಲಿತಮ್ಮ ಅವಳನ್ನು ಹೊಗಳಿ, ಮುದ್ದಿಸಿ, ಉಪಚರಿಸಿದ ಮೇಲೆ ಶೋಭಾ ಒಂದು ಅಭಂಗ ಹಾಡಿದಳು.

ಮೂರ್ತಿಯ ಕಣ್ಣಲ್ಲಿ ಥಟ್ಟನೆ ಹನಿಜಾರಿತು.

ಹಳೆಯ ನೆನಪು ಮರುಕಳಿಸಿ ಅವನ ಹೃದಯಕ್ಕೆ ಅಪಾರವೇದನೆ ಯಾಯಿತು.

'ಬಹಳ ವರ್ಷಗಳ ಹಿಂದೆ—ಒಂದು ರಾತ್ರಿ ಮೂರ್ತಿ ಕೋಣೆಯಲ್ಲಿ ಬರೆಯುತ್ತ ಕುಳಿತಿದ್ದ—ಕೆಳಗಿನ ಸಾಲಿನಲ್ಲಿ ತಾಳ, ಮದ್ದಲೆಗಳ ಅವಾಂತರ—ತನ್ನ ಚಿತ್ತೈಕಾಗ್ರತೆಗೆ ಭಂಗಬಂದುದಕ್ಕೆ ಕೆರಳಿದ ಮೂರ್ತಿ ರೇಗಿ ಕೆಳಗಿಳಿದು ಬಂದ—ಮೂವತ್ತು ನಲವತ್ತು ಗಿರಣಿ ಕಾಮಗಾರರು ವೈಮರೆತು ಭಜನೆ ಮಾಡುತ್ತಿದ್ದರು. ನಿರ್ಮಲಾನಂದದಲ್ಲಿ ಜೀವನದ ಸಮಸ್ತ ಸಂಕಷ್ಟವನ್ನೂ ಮರೆತಿದ್ದ ಅವರನ್ನು ಕಂಡು ಮೂರ್ತಿ ನಾಚಿ ನಿಂತ—ಸಖಾರಾಮ ಒಳಗಿನಿಂದ ಎದ್ದು ಬಂದು ಮೂರ್ತಿಯನ್ನು ಸ್ವಾಗತಿಸಿದ—ಅಂದಿನಿಂದಲೇ ಸಖಾರಾಮನ ಗೆಳೆತನ ಆರಂಭವಾದುದು.

ಆಗಿನ್ನೂ ಶೋಭಾ ತೊಟ್ಟಿಲು ಕಂದ !

ಕೆಲವೇ ದಿನಗಳಲ್ಲಿ ದುರಂತ ನಡೆದುಹೋಯಿತು—ಗಿರಣಿಯ ಮುಷ್ಕರ—ವಿಧಿಯಿಲ್ಲದೆ ಸಖಾರಾಮ ಕೆಲಸಕ್ಕೆ ಹೋದುದು—ಕಾಮಗಾರರು ಅವನನ್ನು ಹೊಡೆದು ಹಾಕಿದುದು !

ಪತಿಯ ಶವವನ್ನಪ್ಪಿ ಹಲುಬಿದ ಆಯಿಯ ಗೋಳು !

ಮಂಗಳದ್ರವ್ಯಗಳನ್ನು ತೆಗೆದಾಗ ಅವಳ ಹೃದಯದಿಂದ ಹೊರಬಿದ್ದ ಆ ಘೋರ—ಭೀಕರ—ಆರ್ತಾಲಾಪ !!'

ಆಯಿಯ ಸ್ಮೃತಿಪಟಲದ ಮೇಲೂ ಅವೇ ದೃಶ್ಯಗಳು.

ಅವಳೂ ಅಳುತ್ತಿದ್ದಳು.

ಮೂರ್ತಿ ದುಃಖ ತಡೆಯಲಾಗದೆ ಮುಖ ಮುಚ್ಚಿಕೊಂಡ.

ಆಯಿಯೇ ಸಮಾಧಾನ ಹೇಳಬೇಕಾಯಿತು.

"ನಮಗಾಗಿ ಎಷ್ಟು ಕಣ್ಣೀರು ಸುರಿಸಿದರೂ ಸಾಲದಲ್ಲವೇ ಅಣ್ಣಾ ಸಾಹೇಬ್ ?"

"ಸ್ಮೃತಿಶೂನ್ಯರಷ್ಟೇ ಜಗತ್ತಿನಲ್ಲಿ ಸುಖಿಗಳು ಆಯಿ."

"ಈ ಮಕ್ಕಳಿಗಾಗಿ ನಾವಿನ್ನೂ ಬದುಕಬೇಕಾಗಿದೆ ಅಣ್ಣಾ ಸಾಹೇಬ್."

"ಅಷ್ಟೇ ಅಲ್ಲ ಆಯಿ–ನಿಮ್ಮ ಬಾಳು ಬದುಕಿನಿಂದ ಹೆಚ್ಚಿನಕೆಲಸವಾಗಿದೆ."

"ಏನದು ?"

"ನನ್ನಂಥವರಿಗೆ ಆದರ್ಶ ಒದಗಿಸಿದೆ. ಶೀಲ, ಸ್ಥೈರ್ಯ, ತ್ಯಾಗಾದಿ ಗುಣಗಳನ್ನು ಬೆಳಸಿಕೊಳ್ಳುವುದಕ್ಕೆ ಬಡತನ ಅಡ್ಡಿಯಾಗುವುದಿಲ್ಲ ಎಂದು ನೀವು ತೋರಿಸಿಕೊಟ್ಟಿರುವಿರಿ."

"ಏನೂ ಅರಿಯದ ಈ ಮೂಢಳನ್ನು ಇಷ್ಟೇಕೆ ಹೊಗಳುವಿರಿ ಅಣ್ಣಾ."

ಮೂರ್ತಿ, ಲಲಿತಮ್ಮ ಇಬ್ಬರೂ ಹೊರಡಲನುವಾಗಿ ಎದ್ದು ನಿಂತರು. ಆಯಿಯೂ ಎದ್ದು ನಿಂತಳು.

ಲಲಿತಮ್ಮ ತಿಂಡಿಯ ಪೊಟ್ಟಣಗಳನ್ನೂ, ಬಟ್ಟೆಯ ಪ್ಯಾಕೆಟ್ಟನ್ನೂ ಶೋಭಳ ಕೈಯಲ್ಲಿಡಲು ಪ್ರಯತ್ನಿಸಿದಳು. ಅವಳು ತೆಗೆದುಕೊಳ್ಳದಿರಲು ಆಯಿ

"ತೆಗೆದುಕೋ ಶೋಭಾ–ಅಣ್ಣಾ ಸಾಹೇಬರ ಮನಸ್ಸಿಗೆ ವ್ಯಥೆಯನ್ನುಂಟು ಮಾಡಬಾರದು—ಇನ್ನೂ ಕೆಲವು ದಿನ ಇಲ್ಲೇ ಇರುವಿರಾ ?"

"ಇರುತ್ತೇವೆ ಆಯಿ. ಪುನಃ ಬರುತ್ತೇವೆ. ನಮ್ಮ ಸರ್ದಾರ್ ಜ್ಞಾಪಕ ವಿದೆಯೇ ?"

"ಹೂ—ನಿಮ್ಮ ರೂಮಿನ ಪಕ್ಕದಲ್ಲಿದ್ದವರು."

"ಅವರೇ–ಅವರ ಲಗ್ನ ನಿಶ್ಚಯವಾಗಿದೆ. ಲಗ್ನಮುಗಿಸಿಕೊಂಡೇ ಊರಿಗೆ ಪ್ರಯಾಣ."

"ವಧು ಯಾರು ?"

"ನಿರ್ಮಲ—ಅವಳೂ ಇದೇ ಊರಿನವಳು. ನೀವೂ ಮಕ್ಕಳೂ ಲಗ್ನಕ್ಕೆ ಬರಬೇಕು. ನಾನು ಮೊದಲೇ ತಿಳಿಸುತ್ತೇನೆ—ಅವತ್ತು ತುಲಸಿ, ತುಕಾರಾಮ ರಜಾ ತೆಗೆದುಕೊಳ್ಳಲಿ. ನಿಮ್ಮ ಅಳಿಯನನ್ನೂ ಕರೆದುಕೊಂಡು ಬನ್ನಿ ಆಯಿ."

"ಆಗಲಿ—ಖಂಡಿತ ಬರುತ್ತೇವೆ."

ಹೊರಟು ನಿಂತ ದಂಪತಿಗಳ ಮುಖ ನೇವರಿಸಿ ಆಯಿ ಪ್ರೀತಿಯಿಂದ ಲಟಿಕೆ ಮುರಿದಳು.

ಕಾರಿನವರೆಗೂ ಬಂದ ಶೋಭೆಯನ್ನು ಲಲಿತ ಅಪ್ಪಿಮುದ್ದಿಟ್ಟು

"ಬೆಂಗಳೂರಿಗೆ ಬರುವುದಕ್ಕೆ ಬಟ್ಟೆಬರೆ ಜೋಡಿಸಿಕೊ" ಎಂದಳು.

ಶೋಭಾ ತನ್ನ ಮುಗ್ಧಮಧುರ ಲಾವಣ್ಯಬೀರುತ್ತಾ ನಕ್ಕಳು.

ಕಾರು ಮಲಬಾರ್ ಹಿಲ್ ಕಡೆಗೆ ಸಾಗಿತು.

೨೩

ಮೇಥಾ ತನ್ನ ನಿರ್ಧಾರವನ್ನು ಸ್ವಲ್ಪವೂ ಬದಲಿಸಲಿಲ್ಲ. 'ಗೀತಾ ಚಿತ್ರ ಸಂಗ್ರಹ' ನೋಡಲು ಮೂರ್ತಿ ಎಷ್ಟು ತವಕಪಡುತ್ತಿದ್ದರೂ ಅದನ್ನು ತೋರಿಸಲು ಮೇಥಾ ಒಪ್ಪಲಿಲ್ಲ. ಅವನ ಮನೋಧರ್ಮವನ್ನರಿತಿದ್ದ ಮೂರ್ತಿಗೆ ಇದರಿಂದ ಅಸಂತೋಷವಾಗಲಿಲ್ಲ.

ಮುಂಬಯಿ ಗೆಳೆಯರ ಮಧುರ ವಾತಾವರಣ ಮೂರ್ತಿಯ ಆರೋಗ್ಯದ ಮೇಲೆ ಅದ್ಭುತ ಪರಿಣಾಮವನ್ನುಂಟುಮಾಡಿತು. ನಿಸ್ತೇಜವಾಗಿದ್ದ ಅವನ ಮುಖ ಕಾಂತಿಯುತವಾಗುತ್ತಿತ್ತು. ಕೈಕಾಲುಗಳ ನಿಶ್ಶಕ್ತಿ ಕಡಿಮೆಯಾಗಿ ಶಕ್ತಿ ಕೂಡಿಕೊಳ್ಳುತ್ತಿತ್ತು. ಮೂರ್ತಿ ವಾರವಾರದ ಡಾಕ್ಟರ ಪರೀಕ್ಷೆ ತಪ್ಪಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. 'ಯಾವ ಭಯವೂ ಇಲ್ಲ' ಎಂದು ಡಾಕ್ಟರು ಖಚಿತವಾಗಿ ಹೇಳಿದ್ದಲ್ಲದೆ 'ಮುಂದೆಯಾದರೂ ಅಳತೆ ಮೀರಿ ದುಡಿಯಬೇಡಿ. ಮೆದುಳಿಗೆ ಸ್ವಲ್ಪ ವಿಶ್ರಾಂತಿ ಕೊಡಿ' ಎಂದು ಸಲಹೆಯಿತ್ತಿದ್ದರು.

ಮೂರ್ತಿಯ ಆರೋಗ್ಯ ಸುಧಾರಿಸುತ್ತಿದ್ದುದನ್ನು ಕಂಡಿದ್ದ ಲಲಿತಮ್ಮನ ಆರೋಗ್ಯವೂ ಸುಧಾರಿಸಿತು. ಮೊದಲೇ ಚಲುವೆಯಾಗಿದ್ದವಳು ಮತ್ತಷ್ಟು ಚೆಲುವನ್ನು ಸಂಗ್ರಹಿಸಿಕೊಂಡಳು.

ಒಂದು ದಿನ ಮನೆಯ ತೋಟದಲ್ಲಿ ಇಬ್ಬರೂ ತಿರುಗಾಡುತ್ತಿದ್ದಾಗ ಲಲಿತಮ್ಮ

"ಇನ್ನು ಮೇಲೆ ವರ್ಷಕ್ಕೆ ಮೂರು ತಿಂಗಳಾದರೂ ನಾವು ಮುಂಬಯಿಯಲ್ಲಿ ಕಳೆಯಬೇಕು."

"ಇದೇನು ವೀರಶಪಥವೋ?"

"ವೀರಶಪಥವೇ."

"ಕಾರಣ."

"ಈಚೆಗೆ ನಿಮ್ಮ ಮುಖ ಕನ್ನಡಿಯಲ್ಲಿ ನೋಡಿಕೊಂಡಿದ್ದೀರಾ ?"

"ಬೆಳಿಗ್ಗೆ ತಾನೇ ಮುಖಕ್ಷೌರ ಮಾಡಿಕೊಂಡೆನಲ್ಲಾ !"

"ಹೋಗಿ ದೊರೆ—ಎಲ್ಲಾ ನಿಮಗೆ ಹಾಸ್ಯ."

"ಇಲ್ಲ ಹೇಳು—ಗಂಭೀರವಾಗಿರುತ್ತೇನೆ."

"ನಿಮ್ಮ ಮುಖ ನೋಡುವಂತಾಯಿತು."

"ಮೊದಲು ನಾನು ಅಷ್ಟು ಕೆಟ್ಟದಾಗಿದ್ದೆನೇ ?"

"ನೋಡಿದಿರಾ ಮತ್ತೆ...."

"ಇಲ್ಲಇಲ್ಲ—ನನ್ನ ಆರೋಗ್ಯ ಸುಧಾರಿಸಿದೆ ಲಲಿತ—ಹೊಸ ಚೈತನ್ಯ ಬಂದಂತಾಗಿದೆ. ಮೊದಲು ಕೈಕಾಲು ಸೋತು ಸೋತು ಹೋಗುತ್ತಿದ್ದವು—ಈಗ ಹಾಗಿಲ್ಲ. ಮುಂಬಯಿ ಹವಾ ನನಗೆ ತುಂಬ ಹಿತವನ್ನುಂಟುಮಾಡಿದೆ."

"ಇದು ಹವಾದ ಪ್ರಭಾವವಲ್ಲ-ನಿಮ್ಮ ಮನಸ್ಸಿಗೆ ಮಧುರ ವಾತಾವರಣ ಬೇಕಾಗಿತ್ತು. ಹುನಗುಂದ, ರಾಘವಯ್ಯನ ಕಿರುಕುಳದಿಂದ ದೂರವಾಗ ಬೇಕಾಗಿತ್ತು."

"ನಿಜ ಡಿಯರ್ (Dear)—ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ನಾನು ನಿನ್ನನ್ನು ಕೇಳುತ್ತೇನೆ."

"ಏನು ?"

"ನಿನ್ನ 'ಹೆಂಗಸುತನ' ಕ್ಕೆ ಅವಮಾನ ಮಾಡಿದೆನೆಂದು ಕೋಪ ಮಾಡಿ ಕೊಳ್ಳುವೆಯೇನೋ ?"

"ಇಲ್ಲ—ಕೇಳಿ,"

"ಈಚೆಗೆ ನೀನು ಕನ್ನಡಿಯಲ್ಲಿ ಮುಖ ನೋಡಿಕೊಂಡಿರುವೆಯಾ ?"

"ಇದು ವಿಲಕ್ಷಣ ಪ್ರಶ್ನೆ."

"ಅದಕ್ಕೇ ನಾನುಪೂರ್ವಪೀಠಿಕೆ ಹಾಕಿದ್ದು. ನಿನ್ನ ಚೆಲುವು ಪುಟ ಹಾಕಿದ ಚಿನ್ನದಂತಾಗಿದೆ."

ಲಲಿತಮ್ಮ ನಸುನಾಚಿ 'ಹೋಗಿ—ದೊರೆ' ಎಂದರೂ, ಪತಿಯ ಪ್ರೇಮ ನುಡಿ ಅವಳ ಹೃದಯಕ್ಕೆ ಆಪ್ಯಾಯಮಾನವಾಗಿತ್ತು.

"ನಾವು ಊರಿಗೆ ಹೊರಡುವ ಮಾತು ಈಗಿನಿಂದಲೇ ಆರಂಭಿಸಬೇಕು."

"ಏಕೆ ?"

"ಈಗ ನಾವು ಆರಂಭಿಸದಿದ್ದರೆ ಈ ಊರು ಬಿಡುವುದೇ ಸಾಧ್ಯವಾಗುವುದಿಲ್ಲ.."

"ಆಗಲೇ ಬೆಂಗಳೂರು ಧ್ಯಾನ ಆರಂಭವಾಯಿತೇ ?"

"ಪಾಪ ! ವಿಶ್ವೇಶ್ವರಯ್ಯನವರ ಗತಿ ಏನಾಗಿದೆಯೋ ?"

"ಏನಾಗುತ್ತದೆ."

"ಹೊಸ ಮೆಷೀನ್ ಬೇರೆ ಕೊಂಡಿದ್ದಾರೆ."

"ಅದಕ್ಕೇನು ಮಾಡಬೇಕು. ನೀವು ಹೋಗಿ ಮೆಷೀನ್ ನಡೆಸಬೇಕೇ ?"

"ಹೂ—ಪ್ರಕಟನೆಯ ಯಂತ್ರ ಓಡಿಸಬೇಕು."

"ಮೇಥಾಜಿ, ನೀವೂ ಜತೆಯಲ್ಲಿ ಮಾಡಬೇಕಾಗಿರುವ ಕೆಲಸ !"

"ಈ ಕಡ್ಡಾಯದ ವಿಶ್ರಾಂತಿಯಿಲ್ಲದಿದ್ದರೆ ಈ ವೇಳೆಗೆ ಕೆಲಸ ಅರ್ಧ ಪೂರೈಸುತ್ತಿದ್ದೆ."

"ಅದನ್ನರಿತೇ ಮೇಥಾಜಿ ನಿಮಗೆ ಚಿತ್ರದರ್ಶನ ಮಾಡಿಸಿಲ್ಲ."

"ಈ ಮನೆಯಲ್ಲಿ ನನ್ನ ಪರ ವಕೀಲಿ ಮಾಡುವವರು ಒಬ್ಬರೂ ಇಲ್ಲವಲ್ಲಾ ! ಎಲ್ಲರೂ ನಿನ್ನ ಪಕ್ಷ ವಹಿಸಿದ್ದಾರೆ."

"ಈ ಮನೆಯಲ್ಲೇಕೆ—ಈ ಊರಿನಲ್ಲೇ ಯಾರೂ ನಿಮ್ಮ ಪರ ವಕೀಲಿ ಮಾಡುವುದಿಲ್ಲ."

"ಅದಕ್ಕೇ ನಾನು ಬೆಂಗಳೂರಿಗೆ ಹೋಗಬೇಕೆಂದಿರುವುದು."

"ಅಲ್ಲಿ ಯಾರು ನಿಮ್ಮ ವಕೀಲರು ?"

"ಹುನಗುಂದ—ರಾಘವಯ್ಯ—ವಶಿಷ್ಟ."

ನಗು ತಡೆಯಲಾರದೆ ಲಲಿತಮ್ಮ ಬಿದ್ದು ಬಿದ್ದು ನಕ್ಕಳು.

ಮೇಥಾ, ಸೆಲೀನ್ ಅವರನ್ನು ಹುಡುಕಿಕೊಂಡು ಅಲ್ಲಿಗೇ ಬಂದರು. ನಾಲ್ವರೂ ಹುಲ್ಲು ಹಾಸಿನ ಮೇಲೆ ಕುಳಿತರು.

"ಲಲಿತಾಬಹೆನ್ ಬಹಳ ನಗುತ್ತಿದ್ದಂತಿತ್ತು !"

ಲಲಿತಮ್ಮ ಮೂರ್ತಿಯ ವಕೀಲರ ವಿಷಯ ಮೇಥನಿಗೆ ವಿವರಿಸಿದಳು. ಮೇಥನೂ ನಗುತ್ತಾ

"ಪ್ರಸಾದ್, ನಾನಂತೂ ಬಂಡವಲಿಗ (Capitalist). ಕಮ್ಯೂನಿಸ್ಟರು

ನನ್ನನ್ನು ದ್ವೇಷಿಸಬೇಕಾದುದು ಸಹಜ. ನೀನು ಪಕ್ಕಾ ಸಾಮ್ಯವಾದಿ-ನಿನ್ನ ಬರವಣಿಗೆಗಳಲ್ಲೆಲ್ಲಾ ಶ್ರಮಜೀವಿಗಳನ್ನು ಎತ್ತಿಹಿಡಿದಿರುವೆಯಲ್ಲದೆ ಬಂಡವಳಿಗ ರನ್ನು ಎತ್ತಿ ಹಿಡಿದಿಲ್ಲ. ನ್ಯಾಯವಾಗಿ ಕಮ್ಯೂನಿಸ್ಟರು ಪಾರ್ಟಿಯಲ್ಲಿ ನಿನ ಗೊಂದು ದೊಡ್ಡ ಸ್ಥಾನ ಕೊಡಬೇಕಾಗಿತ್ತು. ನಿನ್ನನ್ನು ಕನ್ನಡದ ಮಯಾಕೊವಸ್ಕಿ, ಕನ್ನಡದ ಗಾರ್ಕಿ ಎಂದು ಸಾರಬೇಕಾಗಿತ್ತು."

"ಆ ಸ್ಥಾನಗಳು ಆಗಲೇ ಭರ್ತಿಯಾಗಿವೆ ಮೇಥಾ—ನೋ ವೇಕೆನ್ಸಿ (No Vacancy)."

"ಗುಜರಾತಿ ಮರಾಟಿಗಳಲ್ಲಿರುವಂತೆ ಕನ್ನಡದಲ್ಲಿಯೂ ಮಯಾಕೊವಸ್ಕಿ, ಗಾರ್ಕಿಗಳಿದ್ದಾರೆಯೇ ?"

"ನನ್ನ ಪರಮಮಿತ್ರ ಹುನಗುಂದನ ಈಶ್ವರರಾಯನೇ ಮಯಾಕೊವಸ್ಕಿ, ಸುತರಾಮಯ್ಯ ಗಾರ್ಕಿ—ಕಮ್ಯುನಿಸ್ಟ ಪಾರ್ಟಿಕಟ್ಟುವ ಚಿಂತೆ ಕಮ್ಯುನಿಸ್ಟರಿ ಗಿದ್ದಿದ್ದರೆ ಅವರು ನೀನು ಹೇಳಿದಂತೆ ನಮ್ಮ ಸೌಹಾರ್ದ ಬೆಳಸುತ್ತಿದ್ದರು. ಇತರರು ಅವರ ಪಾರ್ಟಿ ಕಟ್ಟುತ್ತಿರುವಾಗ ಅವರೇಕೆ ಕೆಲವು ದಿನ—ಸಾಮ್ಯವಾದೀ ಆರನೆಯ ಸ್ವರ್ಗ (Socialist Sixth World) ಭೂಮಿಗಿಳಿದು ಬರುವವರೆಗೆ ವಿಶ್ರಾಂತಿ ಸುಖವನ್ನನುಭವಿಸಬಾರದು."

"ಕಮ್ಯುನಿಸ್ಟ ಪಾರ್ಟಿ ಕಟ್ಟುತ್ತಿರುವವರು ಯಾರು ?"

"ಕಾಂಗ್ರೆಸ್ಸಿನವರು."

"ಹಾಗೆಂದರೆ........"

"ಅಸಹನೆ, ಅತೃಪ್ತಿ, ಅಜ್ಞಾನ ಹೆಚ್ಚಿದರೆ ತಾನೇ ಕಮ್ಯುನಿಸ್ಟ ಪಾರ್ಟಿ ವರ್ಧಿಸಲು ಸಾಧ್ಯ."

"ಹೌದು."

"ಇವುಗಳನ್ನು ಬೆಳಸುವ ಕೆಲಸ ನಮ್ಮ ಕಾಂಗ್ರೆಸ್ ಸರ್ಕಾರಗಳೂ, ಕಾಂಗ್ರೆಸ್ ಸಮಿತಿಗಳೂ ಯಶಸ್ವಿಯಾಗಿ ಮಾಡುತ್ತಿವೆ. ಉತ್ತರದಲ್ಲಿ ಪ್ರಾಂತ್ಯವಾರು ಭೇದಗಳಿಗೂ, ದಕ್ಷಿಣದಲ್ಲಿ ಜಾತಿಭೇದಗಳಿಗೂ ಮಣೆ ಹಾಕುತ್ತಿರುವ ಈ ಮಹನೀಯರು ಬ್ರಿಟಿಷರ ಆಳರಸರ ನೀತಿಯನ್ನೇ ಸಾರೋದ್ಧಾರವಾಗಿ ನಡೆಸಿಕೊಂಡು ಬರುತ್ತಿದ್ದಾರೆ."

"ಈ ವಿಷಯ ಕುರಿತು ನಾನೂ ವಿಚಾರಮಾಡುತ್ತಿದ್ದೇನೆ ಪ್ರಸಾದ್.

ನೀನು ಹೇಳುವುದು ಸತ್ಯ—ಇಂದಿನ ಆಡಳಿತ ವೈಖರಿ ಕಮ್ಯುನಿಸಂಗೆ ಮಹಾಸ್ವಾಗತ ನೀಡುತ್ತಿರುವುದಲ್ಲಾ ಎಂದು ನಾನೂ ವ್ಯಸನಪಟ್ಟಿದ್ದೇನೆ. ಸಾಹಿತಿಯಾಗಿ ನೀನು ಕಮ್ಯುನಿಸಂ ಬಗ್ಗೆ ಯಾವ ನಿರ್ಧಾರಕ್ಕೆ ಬಂದಿರುವೆಯೊ ಅದೇ ನಿರ್ಧಾರಕ್ಕೆ ಕಲಾವಿದನಾಗಿ ನಾನು ಬಂದಿದ್ದೇನೆ. ಶಿಲ್ಪಿ ಶ್ರೀಕಂಠನ* ಬಗ್ಗೆ ಕಮ್ಯುನಿಸ್ಟರು ತೋರಿದ ಧೋರಣೆಯನ್ನರಿತ ಯಾವ ಕಲಾವಿದನೂ ಈ ವಿಚಾರವೈಖರಿಯನ್ನಾಗಲಿ ಇದರ ಪ್ರತಿಪಾದಕರನ್ನಾಗಲಿ ಹತ್ತಿರಬಿಟ್ಟುಕೊಳ್ಳಲು ಸಾಧ್ಯವಿಲ್ಲ—ಆದರೆ ನಾವು ಕಮ್ಯುನಿಸಮ್ಮನ್ನು ತಡೆಗಟ್ಟಲು ಸಾಧ್ಯವೇ? ಮಹಾಪೂರದಂತೆ ಮುನ್ನುಗ್ಗಿ ಬರುತ್ತಿರುವ ಈ ಶಕ್ತಿ ಒಂದಲ್ಲ ಒಂದು ದಿನ ನಮ್ಮನ್ನು ಪೂರ್ಣಾಹುತಿ ತೆಗೆದುಕೊಳ್ಳುವುದೆನಿಸುತ್ತದೆ. ಆಂಧ್ರ, ಕೇರಳಗಳ ಇತಿಹಾಸವೇ ಇದಕ್ಕೆ ಸಾಕ್ಷಿ."

"ಭಾರತಶಕ್ತಿಯನ್ನು ನಾವು ಪೂರ್ಣವಾಗಿ ಅರ್ಥಮಾಡಿಕೊಂಡರೆ ಇಂಥ ಭಯಕ್ಕೆ ಕಾರಣವಿರುವುದಿಲ್ಲ. ಆತ್ಮಪ್ರಜ್ಞಾರಾಹಿತ್ಯವೇ ನಮ್ಮೆಲ್ಲ ಸಂಶಯ, ಕ್ಲೇಶಗಳಿಗೆ ಮೂಲ. ಗೀತಾಭಕ್ತನಾದ ನೀನೂ ಈ ರೀತಿ ಯೋಚಿಸುವುದು ನನಗೆ ಸಖೇದಾಶ್ಚರ್ಯವನ್ನುಂಟುಮಾಡಿದೆ. ಜಗತ್ತಿನ ಧಾರ್ಮಿಕ, ಸಾಮಾಜಿಕ ರಾಜಕೀಯ ಇತಿಹಾಸವನ್ನು ನಾವು ಸಿಂಹಾವಲೋಕನ ಮಾಡುವಾಗ ಒಂದು ವಿಷಯ ಸುಸ್ಪಷ್ಟವಾಗುತ್ತದೆ—ಸಹಬಾಳುವೆ (Community life) ಮತ್ತು ಪ್ರೇಮಕ್ಕೆ ಭಾರತ ಕೊಟ್ಟಿರುವ ಪ್ರಾಧಾನ್ಯವನ್ನು ಮತ್ತೆ ಯಾವ ರಾಷ್ಟ್ರವೂ ಕೊಟ್ಟಿಲ್ಲ. ಬುದ್ಧನಿಂದ ಗಾಂಧೀಜಿಯವರೆಗೆ ನಮ್ಮವರು 'ಅಹಿಂಸೆ'ಗೆ ಕೊಟ್ಟಿರುವ ಸ್ಥಾನಮಾನ ಈ ಪ್ರೇಮಭಾವನೆಯ ಒಂದು ಆವಿಷ್ಕಾರ. ಭಿನ್ನ ಅಭಿರುಚಿ, ಜೀವಿತಧ್ಯೇಯ, ದೃಷ್ಟಿಯುಳ್ಳವರೊಂದಿಗೆ ಅನ್ಯೋನ್ಯವಾಗಿ ಬಾಳಲು ಸಾಧ್ಯವೆಂಬುದನ್ನು ಉಪನಿಷತ್ತಿನ ಋಷಿಗಳು ಸ್ಥಾಪಿಸಿದರು. ಭಾಗವತ, ಭಾರತಗಳ ಶ್ರೀಕೃಷ್ಣ ಪ್ರೇಮಮೂರ್ತಿಯಾಗಿದ್ದ–ಮಹಾಯುದ್ಧವನ್ನು ತಡೆಗಟ್ಟಲು ಅವನು ಪಟ್ಟ ಶ್ರಮವೇ ಪೂರ್ವಭಾರತದ ಕಥಾವಸ್ತು. ಸರ್ವಜೀವರುಗಳನ್ನು ಅವನು ತನ್ನ ದಿವ್ಯಪ್ರೇಮದಿಂದ ಬೆಸೆದ ವೃತ್ತಾಂತವೇ ಭಾಗವತ. ತರುವಾಯ, ವೈದಿಕ ವಿಚಾರಶ್ರೇಣಿಯಿಂದ ಹೊರನಿಂತು ಬೌದ್ಧ,

* ಕಮ್ಯುನಿಷ್ಟರ ಕೈಗೆ ಸಿಕ್ಕಿಕೊಂಡು ಶಿಲ್ಪಿ ಶ್ರೀಕಂಠ ಅನುಭವಿಸಿದ ವೇದನೆಯನ್ನು ಇದೇ ಲೇಖಕರು 'ಸಂಗ್ರಾಮ' (ಕಾದಂಬರಿ) ಯಲ್ಲಿ ವಿವರಿಸಿದ್ದಾರೆ.

ಜೈನ ಧರ್ಮಗಳನ್ನು ಸ್ಥಾಪಿಸಿದ ಗೌತಮಬುದ್ಧ, ಮಹಾವೀರರೂ ಅಹಿಂಸೆಗೇ ಪ್ರಾಧಾನ್ಯಕೊಟ್ಟರು. ಈ ಪರಂಪರೆ ಘನೀಭೂತ ಸತ್ವವಾದುದು ಮಹಾತ್ಮ ಗಾಂಧಿಯವರಲ್ಲಿ. ವಿಶ್ವಶಾಂತಿ, ವಿಶ್ವಪ್ರೇಮ, ವಿಶ್ವೈಕ್ಯತೆಗೆ ಸಾವಿರಾರು ವರ್ಷಗಳಿಂದ ಶ್ರಮಪಟ್ಟಿರುವ ಭಾರತ ಇಂದೊ ನಾಳೆಯೊ ಹಿಂಸೆಯ ಅಸ್ತಿಭಾರದ ಮೇಲೇ ಕಟ್ಟಲ್ಪಟ್ಟಿರುವ ಕಮ್ಯುನಿಸಂಗೆ ವಶವಾಗುವುದೆಂದು ಊಹಿಸಲೂ ಸಾಧ್ಯವಿಲ್ಲ. ಈಹಿಕಜೀವನದ ಸಂತೃಪ್ತಿಗಾಗಿ ಏನುಮಾಡಿದರೂ ತಪ್ಪಿಲ್ಲವೆನ್ನುವ ಕಮ್ಯುನಿಸ್ಟ್ ಮನೋಭಾವಕ್ಕೂ, ಐಹಿಕಜೀವನದ ಸಂತೃಪ್ತಿ ಆಮುಷ್ಮಿಕ ಜೀವನಸಂತೃಪ್ತಿಗೆ ಅಧೀನವಾಗಿರಬೇಕು, ಗುರಿಯಷ್ಟೇ ಗಮ್ಯವೂ ಪರಿಶುದ್ಧವಾಗಿರಬೇಕು ಎನ್ನುವ ಗಾಂಧೀಜಿಯ ಮನೋಭಾವಕ್ಕೂ * (ಅಂದರೆ ಭಾರತದ ಮನೋಭಾವ) ಇರುವ ವ್ಯತ್ಯಾಸ ಸುಸ್ಪಷ್ಟವಾಗಿದೆ. ಎಲ್ಲರನ್ನೂ ಕೆ ಲ ಕಾ ಲ ಮರುಳುಮಾಡಬಹುದು—ಈ ಕೆಲಸ ಇಂದು ಕಮ್ಯುನಿಸಂ ಮಾಡುತ್ತಿದೆ. ಎಲ್ಲರನ್ನೂ ಎಲ್ಲ ಕಾಲವೂ ಮರುಳುಮಾಡಲು ಸಾಧ್ಯವಿಲ್ಲ. ಕಮ್ಯುನಿಸಂಗೆ ಅಪಜಯ ಕಟ್ಟಿಟ್ಟ ಮುಡಿಪೆಂದು ಸಾರುತ್ತಿದೆ."

ಸೆಲೀನ್ ಮುಜುಗರದಿಂದ

"ಏಳು ಲಲಿತಾಬಹೆನ್-ನಾವು ಬೇರೆ ಎಲ್ಲಿಗಾದರೂ ಹೋಗೋಣ. ಇವರಿಬ್ಬರೂ ವಾದಕ್ಕೆ ಕುಳಿತುಬಿಟ್ಟರೆ ಇವರಿಗೆ ಜಗತ್ತೇ ಮರೆತುಹೋಗುತ್ತದೆ" ಎಂದಳು.

---

* "The communist swears by dialectical materialism... Gandhi preached the supremacy of spirit and mind over matter. To the communist the end justifies the means; to Gandhi, the means were everything...Stalin, Malenkov and Mao preach the need to hate the class and national enemy; Gandhi the need to love all...The communist glorifies the State; Gandhi...stressed the individual as an end in himself. Indentifying himself with the lowliest in the scale of caste—the Harijan or Untouchable—Gandhi recalled the words of Him who said, 'Inasmuch as yo have done it unto one of the least of these, my brethern, ye have done it unto me.' "

Sri M. R. Masani in "The Communist Party of India"

ಮೂರ್ತಿ ನಸುನಗುತ್ತಾ

"ತಪ್ಪಾಯಿತು—ಕ್ಷಮಿಸಿ ಸೋದರಿ. ಮತ್ತೊಮ್ಮೆ ಇಂಥ ಅಪಚಾರಕ್ಕೆ ಅವಕಾಶಕೊಡುವುದಿಲ್ಲ."

"ಸರ್ದಾರರ ವಿವಾಹ ನಿಶ್ಚಯಿಸಿಬಿಟ್ಟರಿ—ಮುಂದಿನ ಯೋಚನೆ ಮಾಡಬೇಡವೇ?"

"ಇಚ್ಛಾಶಕ್ತಿ ನಮ್ಮದು—ಕ್ರಿಯಾಶಕ್ತಿ ನಿಮ್ಮದು."

"ಹಾ! ಹಾ!! ನೋಡಿದೆಯಾ ಲಲಿತ, ಕೆಲಸದ ವೇಳೆಯಲ್ಲಿ ಇವರು ಸುಲಭವಾಗಿ ಜಾರಿಕೊಳ್ಳುವುದು."

"ನಾನೇನು ಮಾಡಬೇಕು ಹೇಳಿ ಸೋದರಿ—ಚಪ್ಪರ ಹಾಕಲೇ, ಸತ್ತರಂಜಿ ಹಾಸಲೇ, ಸನಾಯ್ ನುಡಿಸಲೇ?"

ಮೂರ್ತಿಯ ಮಾತು ಕೇಳಿ ಎಲ್ಲರೂ ಬಿದ್ದು ಬಿದ್ದು ನಕ್ಕರು. ಮೇಥಾ ಗಂಭೀರವಾಗಿ

"ಸೆಲೀ಼ನ್ ಹೇಳುತ್ತಿರುವ ವಿಷಯ ನಾವು ಯೋಚಿಸಬೇಕು ಪ್ರಸಾದ್. ಸರ್ದಾರನ ಮದುವೆ ಎಲ್ಲಿ ಮಾಡೋಣ."

"ಹೇಗೂ ಹೊಸಮನೆ ಕಟ್ಟಿದ್ದಾನೆ—ಅಲ್ಲಿಯೇ ಮಾಡಿದರಾಯಿತು."

"ಬೇಡ—ವಿವಾಹವಿಲ್ಲಿ—ನಮ್ಮ ಮನೆಯಲ್ಲಿ ನೆರವೇರಿಸಿ, ವಧೂವರರನ್ನು ಸ್ವಗೃಹಕ್ಕೆ ಬೀಳ್ಕೊಡೋಣ. ನಾನೂ ಸೆಲೀನ್ ಗಂಡಿನ ಕಡೆಯವರು; ನೀನೂ ಲಲಿತಾಬಹೆನ್ ಹೆಣ್ಣಿನಕಡೆಯವರು. ಸೆಂಚುರಿ ಬಳಗ, ದಾದಾ ಅವರ ಸಂಸಾರ ಅತಿಥಿಗಳು."

"ನನ್ನ ಆಯಿ, ಅವಳ ಮಕ್ಕಳನ್ನು ಮರೆಯಬೇಡ ಮೇಥಾ."

"ಹೌದು ಹೌದು—ಅವರನ್ನು ಮರೆಯುವುದು ನ್ಯಾಯವಲ್ಲ."

"ವಧುವಿಗೆ ಬೇಕಾದ ಒಡವೆವಸ್ತ್ರಗಳ ವಿಷಯ ಸೋದರಿ ಸೆಲೀನ್, ಲಲಿತ ನೋಡಿಕೊಳ್ಳಲಿ—ವರನ ಯೋಗಕ್ಷೇಮ ನಾವು ನೋಡಿಕೊಳ್ಳೋಣ."

"ಎಂದು ಮುಹೂರ್ತ?"

"ನಾಳೆ ಗುರುವಾರ?"

"ಆರ್ಯಪದ್ಧತಿಯಂತೆ ವಿವಾಹ ನೆರವೇರಿಸಲು - ಸಾಧ್ಯವಿಲ್ಲ.

ಬ್ರಹ್ಮಸಮಾಜ, ಆರ್ಯಸಮಾಜದ ವಿಧಿಯಂತೆ ವಿವಾಹಮಾಡಿಸಲು ಯಾರನ್ನಾದರೂ ಬರಮಾಡಿದರೆ ನೂರೆಂಟು 'ಪ್ರಶ್ನೆಗಳಿಗೆ ಉತ್ತರ ಹೇಳಬೇಕಾಗುತ್ತದೆ."

"ಸತ್ಸಂಕಲ್ಪಕ್ಕಿಂತ ಹೆಚ್ಚಿನ ವಿಧಿ ಯಾವದು ಮೇಥಾ. ನಾನೇ ಪೌರೋಹಿತ್ಯ ನಡೆಸಿ ವಿವಾಹ ನೆರವೇರಿಸುತ್ತೇನೆ. ಗಂಡಿನ ಕಡೆಯ ಯಜಮಾನನಾದ ನೀನು ನನಗೇ ದಕ್ಷಿಣೆ ಕೊಟ್ಟುಬಿಡು."

"ಪೌರೋಹಿತ್ಯವನ್ನು ಉಪವೃತ್ತಿ ಮಾಡಿಕೊಳ್ಳಬೇಕೆಂದಿರುವೆಯಾ?"

"ಹೂ—ಉಪವೃತ್ತಿಯ ವರಮಾನದಿಂದಲಾದರೂ ಸಾಹಿತ್ಯ ಸೇವೆ ಮುಂದುವರಿಸುತ್ತೇನೆ" ಎಂದ.

ಸೆಲೀನ್, ಲಲಿತಮ್ಮ ಇಬ್ಬರಿಗೂ ತೃಪ್ತಿಯಾಯಿತು.

## ೨೪

ಸೆಲೀನ್, ಲಲಿತಮ್ಮ ಇಬ್ಬರಿಗೂ ಸ್ವಲ್ಪವೂ ಬಿಡುವಿಲ್ಲವಾಯಿತು. ವಿವಾಹವ್ಯವಸ್ಥೆಯಲ್ಲಿ ಉದ್ಯುಕ್ತರಾಗಿದ್ದ ಅವರು ಮೇಥಾ, ಮೂರ್ತಿಗೂ ಕೆಲಸ ಗಂಟುಹಾಕಿದ್ದರು.

ಆಹ್ವಾನಿತರ ಸಂಖ್ಯೆ ಅತ್ಯಲ್ಪವಾಗಿದ್ದುದಸಿಂದ ಲಗ್ನಪತ್ರಿಕೆ ಅಚ್ಚು ಹಾಕಿಸುವ ಆವಶ್ಯಕತೆಯಿರಲಿಲ್ಲ. ಲಲಿತ ಸುದೀರ್ಘವಾಗಿ ಸುಂದರಮ್ಮನವರಿಗೆ ಕಾಗದ ಬರೆದು ವಿವಾಹದ ವಿಷಯ ತಿಳಿಸಿದ್ದಳು.

ಸರ್ದಾರನ ನೂತನಗೃಹದ ಕೀಲಿಕೈಯಾಗಲೇ ನಿರ್ಮಲನ ಕೈವಶ ವಾಗಿತ್ತು. ಸರ್ದಾರ್ ಅವಳ ಕೈಗೆ ಎರಡುಸಾವಿರ ರೂಪಾಯಿ ಹಾಕಿ ಬೇಕಾದುದನ್ನು ಕೊಳ್ಳಲು ಹೇಳಿದ್ದ.

ಸ್ವಯಂ ಕಂಟ್ರ್ಯಾಕ್ಟರ್ ಆಗಿದ್ದ ಸರ್ದಾರ್ ತನ್ನ ಮನೆಯನ್ನು ಓರಣ ವಾಗಿ ಕಟ್ಟಿಕೊಂಡಿದ್ದ. ಕಾಂಪೌಂಡ್ ವಿಶಾಲವಾಗಿಲ್ಲದಿದ್ದರೂ ಸಣ್ಣತೋಟ ಬೆಳಸಲು ಅನುಕೂಲವಾಗಿತ್ತು. ಮನೆ ಒಳಹೊಕ್ಕ ಕೂಡಲೆ ಕಾಣುತ್ತಿದ್ದುದು ವಿಶಾಲವಾದ ಮಹಡಿಮೆಟ್ಟಲುಗಳು. ಮೊದಲನೆಯ ಸಾಲಿನಲ್ಲಿ ಅತ್ತಿತ್ತ ಎರಡು ಮನೆಗಳು; ಅದರ ಮೇಲಣ ಸಾಲನಲ್ಲೂ ಅಷ್ಟೇ; ಮೂರನೆಯ ಸಾಲಿನಲ್ಲಿ ತಾನೇ ಇರಬಯಸಿ ಸರ್ದಾರ್ ಒಂದೇ ಗೃಹನಿರ್ಮಾಣಮಾಡಿ ಕೊಂಡಿದ್ದ.

ಪ್ರತಿಸಾಲಿನ ಮನೆಗೂ ವೆರಾಂಡಾ ಇದ್ದಂತೆ ಸರ್ದಾನ ಮನೆಗೂ ಒಂದು ವೆರಾಂಡಾ ಇತ್ತು. ವೆರಾಂಡಾದಿಂದ ಒಳಗೆ ಪ್ರವೇಶಿಸಿದೊಡನೆಯೇ ವಿಶಾಲ ವಾದ ಹಜಾರ—ಹಜಾರದ ಎಡಭಾಗಕ್ಕೆ ವಿಸ್ತಾರವಾದ ರೂಮು, ಅದರ ಪಕ್ಕಕ್ಕೆ ಸ್ವಲ್ಪ ಚಿಕ್ಕದಾದ ರೂಮು. ವಿಸ್ತಾರವಾದ ರೂಮು ಶಯ್ಯಾಗೃಹ

ವಾಗಿ ಸಣ್ಣರೂಮು ವಸ್ತ್ರಾಗಾರವಾಗಿ ನಿರ್ದಿಷ್ಟವಾಗಿತ್ತು. ಬಲಗಡೆಯ ಮೊದಲನೆಯ ರೂಮೇ ಸರ್ದಾರರ ಆಫೀಸ್‌ರೂಮ್, ಅದರ ಬಧಿಗಿದ್ದುದೇ ಪಾಕಶಾಲೆ—ಪಾಕಶಾಲೆಯ ಮಗ್ಗುಲಿಗೇ ಸ್ನಾನಗೃಹ. ಶಯ್ಯಾಗೃಹ. ಆಫೀಸ್‌ರೂಮ್‌ಗಳೊಳಗೇ ಶೌಚಗೃಹವೂ ಅಡಕವಾಗಿತ್ತು. ಸ್ನಾನಗೃಹ ಸ್ಪ್ರೇ, ಎಲೆಕ್ಟ್ರಿಕ್ ಹೀಟರ್ (Electric heater) ಗಳಿಂದಲೂ ಪಾಕಶಾಲೆ ಎಲೆಕ್ಟ್ರಿಕ್ ಕುಕ್ಕರ್‌ನಿಂದಲೂ (Eleetric cooker) ಸಜ್ಜಾಗಿತ್ತು. ಹಜಾರ, ಶಯ್ಯಾಗೃಹ, ಆಫೀಸ್‌ರೂಮನ್ನು ಎಲೆಕ್ಟ್ರಿಕ್ ಫ್ಯಾನ್‌ಗಳಲಂಕರಿಸಿದ್ದವು.

ಹಜಾರದ ಮಧ್ಯೆಯಿದ್ದ ಸ್ಕ್ರೀನ್ (Screen) ಅದರ ಪೂರ್ವಭಾಗ ವನ್ನು ಬೈಠಕ್‌ಖಾನೆಯನ್ನಾಗಿಯೂ ಉತ್ತರಭಾಗವನ್ನು ಭೋಜನಗೃಹವನ್ನಾಗಿಯೂ ವಿಭಾಗಿಸಿತ್ತು.

ಆಯಾರೂಮಿನಾವಶ್ಯಕತೆಗನುಗುಣವಾಗಿ ಫರ್ನೀಚರ್ ಒದಗಿಸಲ್ಪಟ್ಟಿತ್ತು.

ಪಾಕಶಾಲೆಗೆ ಅವಶ್ಯಕವಾಗಿದ್ದ ಅಡಿಗೆ, ಊಟದ ಪಾತ್ರೆಗಳು, ಶಯ್ಯಾಗೃಹಕ್ಕೆ ಬೇಕಾಗಿದ್ದ ಹಾಸಿಗೆ, ಹೊದಿಕೆಗಳನ್ನು ಸಂಗ್ರಹಿಸಬೇಕಾಗಿತ್ತು.

ಮೂರು ದಿನ ಸತತವಾಗಿ ಲಲಿತ, ಸೆಲೀನ್, ನಿರ್ಮಲಾ ಇವರಿಗೆ ಇದೇ ಕೆಲಸವಾಯಿತು. ಕಿಟಕಿ, ಬಾಗಿಲುಗಳಿಗೆ ಅಂದವಾದ ತೆರೆಗಳನ್ನೊದಗಿಸುವುದರಲ್ಲಿ ಸೆಲೀನ್ ತನ್ನ ಸುರುಚಿಯನ್ನು ತೋರಿದಳು.

ನಿರ್ಮಲಾ ಸುಸಜ್ಜಿತವಾದ ತನ್ನ ಮನೆಯನ್ನು ಅಭಿಮಾನ, ಹೆಮ್ಮೆಯಿಂದ ನೋಡಿದಳು. ಹಿಂದೆ ತಾನು ವಾಸಮಾಡಿದ್ದ ಎಲ್ಲ ಮನೆಗಳ ನೆನಪೂ ಆಯಿತು. ಮಂಗೂಭಾಯಿಯ ಫ್ಲ್ಯಾಟು, ಮಾತಾಜಿಯ ಅರಮನೆ, ಅಭಯಾಶ್ರಮದ ಬಡಮನೆ—ಈಗ ಮಧ್ಯಮವರ್ಗಕ್ಕೆ ಸೇರಿದ್ದ ಈ ಮನೆ.

ತನ್ನ ಸೌಭಾಗ್ಯಕಂಡು ನಿರ್ಮಲನಿಗೆ ಅತುಲಾನಂದವಾಗಿದ್ದರೂ, ಮನಸ್ಸಿನಲ್ಲೊಂದು ಎಳೆನೋವು ಮಿಡಿಯುತ್ತಲೇ ಇತ್ತು.

ಸ್ಟೇನ್‌ಲೆಸ್ ಸ್ಟೀಲ್ (Stainless Steel) ಪಾತ್ರೆಗಳನ್ನು ಜೋಡಿಸುತ್ತಿದ್ದ ಸೆಲೀನ್, ಲಲಿತರ ಬಳಿಗವಳು ಬಂದು

"ಅಕ್ಕ........" ಎಂದಳು.

"ಏನು ನಿರ್ಮಲಾ ?"

"ಇಂಥ ಭಾಗ್ಯಕ್ಕೆ ನಾನು ಅರ್ಹಳಲ್ಲ."

"ಹುಚ್ಚಿ ! ಮೊದಲ ಪುರಾಣವನ್ನೇ ಮತ್ತೆ ಆರಂಭಿಸಿರುವೆಯಾ ?"

"ಸೆಲೀನ್‌ಬಹೆನ್ ಕೋಪಮಾಡಿಕೊಳ್ಳದಿದ್ದರೆ ಒಂದು ಮಾತು ಹೇಳ ಬಯಸುತ್ತೇನೆ."

"ಹೇಳು ನಿರ್ಮಲಾ—ವಿನಾಕಾರಣ ನಾನೇಕೆ ಕೋಪಮಾಡಿಕೊಳ್ಳಲಿ."

"ನೀವು ಮುಂಬಯಿಗೆ ಬಂದಾಗ ಇಲ್ಲೇ ಬಂದಿರಬೇಕು."

"ಅದಕ್ಕೇನಂತೆ ! ಕೆಲವು ದಿನ ಸೆಲೀನ್ ಮನೆಯಲ್ಲಿ ಕೆಲವು ದಿನ ನಿನ್ನ ಮನೆಯಲ್ಲಿದ್ದರಾಯಿತು."

"ಈಗ ನನ್ನನ್ನು ಬಿಟ್ಟುಹೋಗುತ್ತೀರಾ ?"

"ಪತಿಪತ್ನಿಯರನ್ನು ಬೇರ್ಪಡಿಸಲೇ ?"

"ಅಭಯಾಶ್ರಮ ಮರೆಯುವುದು ನನಗೆ ಕಷ್ಟವಾಗುತ್ತದೆ."

"ಮರೆಯಲೆತ್ನಿಸಬೇಕು ತಂಗೀ. ಇನ್ನುಮೇಲೆ ನಿನ್ನ ಜೀವನದ ಪ್ರಥಮಸ್ಥಾನ ಸರ್ದಾರನಿಗೆ ಮೀಸಲು."

"ಎಂದೆಂದಿಗೂ ನಾನು ನಿಮಗೆ ಅಪಕೀರ್ತಿ ತರುವುದಿಲ್ಲ ಲಲಿತಕ್ಕ."

"ಅದನ್ನು ನಾನು ಚೆನ್ನಾಗಿ ಬಲ್ಲೆ—ನೀನು ಸಂತೋಷವಾಗಿರಬೇಕಾದ ದಿನಗಳಲ್ಲಿ ಮನಸ್ಸಿಗೆ ಇಲ್ಲದ ಚಿಂತೆ ಹಚ್ಚಿಕೊಳ್ಳಬೇಡ."

"ಯಾವಾಗ ನೀವು ಬರೆದರೂ ಬೆಂಗಳೂರಿಗೆ ಬರುತ್ತೇನೆ. ಆಗಿಂದಾಗ್ಗೆ ನನ್ನನ್ನು ಕರೆಸಿಕೊಳ್ಳಿ—ಅದೇ ನನ್ನ ತೌರುಮನೆ."

ಎಂದು ನಿರ್ಮಲ ಲಲಿತಮ್ಮನನ್ನಪ್ಪಿ ಮಕ್ಕಳಂತೆ ಕಂಬನಿಗರೆದಳು.

"ಸೋದರಿ ಸೆಲೀನ್ ಮನೆಯೂ ನಿನ್ನ ತೌರುಮನೆಯೇ—ಯೋಚಿಸ ಬೇಡ—ಅವರು ನಿನ್ನ ಯೋಗಕ್ಷೇಮ ನೋಡಿಕೊಳ್ಳುತ್ತಾರೆ."

ನಿರ್ಮಲನ ಮನೆಗೆಲಸ ಮುಗಿಸಿಕೊಂಡು ಸೆಲೀನ್, ಲಲಿತ, ನಿರ್ಮಲಾ ಮೇಥಾ ಮ್ಯಾನ್‌ಷನ್ನಿಗೆ ಹಿಂದಿರುಗಿದರು. ಅದೇ ಟಪಾಲಿನಲ್ಲಿ ಬಂದಿದ್ದ ಪುಸ್ತಕದ ಕಟ್ಟನ್ನು ಮೂರ್ತಿ ಲಲಿತಮ್ಮನ ಕೈಯಲ್ಲಿಟ್ಟ. ಲಲಿತಮ್ಮ ಪ್ಯಾಕೆಟ್ಟಿನಿಂದ ಒಂದು ಪುಸ್ತಕ ಹೊರಗೆಳೆದು ಹಾಳೆ ತಿರುವಿಹಾಕಿ, ಸೆಲೀನ್ ಕೈಗಿತ್ತು

"ನಿಮ್ಮ ಸೋದರರ ಈಚಿನ ಪುಸ್ತಕ—ವಿಮರ್ಶಾಶಾಸ್ತ್ರದ ಮೇಲೆ ಬರೆದಿದ್ದಾರೆ."

ಸೆಲೀನ್ ಪುಸ್ತಕ ನೋಡಿ

"ನನಗೆ ಕನ್ನಡ ಕಲಿಸದೆ ತುಂಬಾ ಅನ್ಯಾಯಮಾಡಿರುವೆ ಬಹೆನ್" ಎಂದಳು.

ಲಲಿತಮ್ಮ ಮೂರ್ತಿಯ ಕಡೆ ತಿರುಗಿ

"ವಿಶ್ವೇಶ್ವರಯ್ಯ ಕಾಗದ ಬರೆದಿದ್ದಾರೆಯೇ ?"

"ಬರೆದಿದ್ದಾರೆ."

"ಮನೆಕಡೆ ಹೋಗಿದ್ದರೇ ?"

"ನಿತ್ಯವೂ ಹೋಗಿ ಬರುತ್ತಿದ್ದಾರಂತೆ. ಅಮ್ಮ ಆರೋಗ್ಯವಾಗಿದ್ದಾರೆಂದು ತಿಳಿಸಿದ್ದಾರೆ. ಮುದ್ರಣಯಂತ್ರ ಕೈಸೇರಿದೆಯಂತೆ—ಅದನ್ನು ಸ್ಥಾಪಿಸುವ ಕೆಲಸ ನಡೆದಿದೆಯಂತೆ."

"ಗುಂಡಣ್ಣ ?"

"ಆರೋಗ್ಯವಾಗಿದ್ದಾನಂತೆ."

"ನಿರ್ಮಲನ ಮದುವೆಗೆ ಗುಂಡಣ್ಣ, ವಿಶ್ವೇಶ್ವರಯ್ಯ ಬಂದಿದ್ದರೆ ಚೆನ್ನಾಗಿತ್ತು."

"ಬನ್ನಿ ಎಂದು ಬರೆದಿದ್ದೆ. ಹೊಸಯಂತ್ರ ಕೈಸೇರಿದೆ, ವಿಶ್ವೇಶ್ವರಯ್ಯನವರಿಗೆ ಪುರಸತ್ತಿಲ್ಲ—ಗುಂಡಣ್ಣನ ವಿಷಯ ನಿನಗೆ ಗೊತ್ತೇ ಇದೆಯಲ್ಲ."

"ಗುರುವಾರ ಲಗ್ನ ಮುಗಿಯುವವರೆಗೆ ನನಗೆ ಸಮಾಧಾನವಿಲ್ಲ."

"ಏಕೆ ?"

"ಒಳ್ಳೆಯ ಕೆಲಸಕ್ಕೆ ನೂರು ವಿಘ್ನ."

"ಲಲಿತಾಗೌರಿಯ ಉಪಾಸಕಳಾದ ನೀನು ಭಯಪಡಬೇಕೇ ?"

ಪತಿಪತ್ನಿ ಸುಖಕಥಾ ಸಂವಿಲಾಪದಲ್ಲಿ ಹೊತ್ತುಗಳೆಯುವಂತಿರಲಿಲ್ಲ. ಹೊರೆ ಹೊರೆ ಕೆಲಸ ಉಳಿದಿತ್ತು. ಊಟ ಮುಗಿಸಿಕೊಂಡು ಲಲಿತ, ಸೆಲೀನ್, ನಿರ್ಮಲಾ ಒಡವೆ ವಸ್ತ್ರಗಳನ್ನು ಕೊಳ್ಳಲು ಹೋಗಬೇಕಾಗಿತ್ತು.

ಲಲಿತಾಸೇ ಹೋಗಿ ದಾದಾಮನೆಯವರನ್ನೂ ಆಯಿಮನೆಯವರನ್ನೂ ಕರೆದುಬಂದಳು.

ಗುರುವಾರ ಧಾವಿಸಿ ಬಂದಿತು.

ಮೇಥಾ ಮ್ಯಾನ್‌ಷನ್ನಿನ ಹಜಾರವೇ ವಿವಾಹಮಂಟಪವಾಯಿತು. ಕಲಾವಿದ ಮೇಥನೇ ಸ್ವಯಂ ಹಜಾರ ಅಲಂಕರಿಸಿದ್ದ. ದಾದಾ, ಆಯಿ ಮನೆಯವರನ್ನು ಕರೆತರಲು ಎರಡು ಕಾರುಗಳು ಹೋದವು.

ಬೆಳಿಗ್ಗೆ ಹತ್ತುಗಂಟೆಯ ವೇಳೆಗೆ ಅತಿಥಿಗಳೆಲ್ಲರೂ ಆಗಮಿಸಿದರು. ಸೆಂಚುರಿಯ ಬಳಗದ ದಸ್ತೂರ್. ಸಾನಾ, ದಾವ್ಲೆ, ರಾಡರೀಗಸ್ ಅಲ್ಲದೆ ಸೆಂಚುರಿ ಪತ್ರಿಕೆ ಮತ್ತು ಅಚ್ಚುಕೂಟದ ನೌಕರರು; ದಾದಾ, ವೀಣಾ, ವೀಣಾತಾಯಿ; ಆಯಿ, ತುಲಸಿ, ಶೋಭಾ, ತುಕೋಜಿ, ತುಳಸಿಯ ಭಾವೀಪತಿ ಪಾಂಡು ಎಲ್ಲರೂ ಸೇರಿದರು.

ಸಾಲಂಕೃತರಾದ ವಧೂವರರು ಬಂದಕೂಡಲೆ ಸಭಿಕರು ಕರತಾಡನಮಾಡಿ ಸಂತೋಷವ್ಯಕ್ತ ಮಾಡಿದರು.

ಪೌರೋಹಿತ್ಯ ವಹಿಸಿದ್ದ ಮೂರ್ತಿ ಎದ್ದುನಿಂತು ಗಂಭೀರವಾಗಿ

**"ಓಂ ಸಹ ನಾವವತು**
**ಸಹ ನೌ ಭುನಕ್ತು**
**ಸಹ ವೀರ್ಯಂ ಕರವಾವಹೈ**
**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ**
**ಓಂ ಶಾಂತಿಃ ಶಾಂತಿಃ ಶಾಂತಿಃ"**

ಎಂಬ ಉಪನಿಷತ್ ಮಂತ್ರ ಘೋಷಿಸಿ

"ಸೋದರ ಸೋದರಿಯರೇ, ನೀವಿಂದು ಯಾವ ಆಡಂಬರವೂ ಇಲ್ಲದ ವಿವಾಹದ ಸಾಕ್ಷಿಗಳಾಗಿದ್ದೀರಿ. ವರ ನನ್ನ ಆಪ್ತಮಿತ್ರ ಸರ್ದಾರ್ ತಾರಾಸಿಂಗ್; ವಧು ನನ್ನ ಪ್ರಿಯಸೋದರಿ ನಿರ್ಮಲಾದೇವಿ. ಉಭಯರೂ ನಿಮಗೆ ಸುಪರಿಚಿತರು. ಜೀವನದ ಕಟುಕಷಾಯ ಸಮುದ್ರದಲ್ಲಿ ಮುಳುಗಿ ಎದ್ದಿರುವ ವಧೂವರರು ತಮ್ಮ ಜೀವಿತವನ್ನು ಏಕಧ್ಯೇಯಸಾಧನೆಗಾಗಿ ಇಂದು ಒಂದುಗೂಡಿಸುವರಿದ್ದಾರೆ. ಸಮಾನಧರ್ಮ, ಸಮಾನಚಿಂತನೆ, ಸಮಾನ ದೃಷ್ಟಿಗಳೇ ಇವರನ್ನು ಶಾಶ್ವತ ಪ್ರೇಮಬಂಧನದಲ್ಲಿ ಕಟ್ಟಿಬಿಗಿದಿದೆ. ನಿಮ್ಮೆಲ್ಲರ ಸಮ್ಮುಖದಲ್ಲಿ ನಾನೂ ನನ್ನ ಧರ್ಮಪತ್ನಿಯೂ ವಧುವನ್ನು ಒಪ್ಪಿಸಿಕೊಡುತ್ತೇವೆ. ಸರ್ದಾರ್ ತಾರಾಸಿಂಗ್—ಈ ನಿಧಿಯನ್ನು ನೀವು ಎಚ್ಚರದಿಂದ, ವಿಶ್ವಾಸದಿಂದ ಕಾಪಾಡಿಕೊಳ್ಳುವಿರೆಂಬ ನಂಬಿಕೆ ನನಗಿದೆ. ನನ್ನ ಈ ಸೋದರಿ

ನಿಮ್ಮ ಬಾಳಿಗೆ ಒಲವನ್ನು, ಚೆಲುವನ್ನು, ಗೆಲುವನ್ನು ತುಂಬಿ, ಅದು ನಿತ್ಯವಾಗುವಂತೆ ಮಾಡಲಿ. ಸೋದರಿ ನಿರ್ಮಲಾ—ಇವರೇ ನಿನ್ನ ಪತಿ. ಇವರ ಧರ್ಮವೇ ನಿನ್ನ ಧರ್ಮ. ಇವರ ಕಷ್ಟಸುಖವೇ ನಿನ್ನ ಕಷ್ಟಸುಖ. ನಿನ್ನ ನಿರ್ಮಲಾಂತಃಕರಣ, ಪರಿಶುದ್ಧ ಜೀವನದಿಂದ ಇವರ ಜೀವನವನ್ನು ಬೆಳಗಿಸು. ಸರ್ದಾರ್, ನಿರ್ಮಲಾ—ನಿಮ್ಮ ಬಾಳು ಹಸನಾಗುವಂತೆ ಜಗನ್ಮಾತೆ ಅನುಗ್ರಹಿಸಲಿ" ಎಂದ.

ಪರಸ್ಪರ ಉಂಗುರ, ಹಾರ ವಿನಿಮಯಮಾಡಿಕೊಂಡ ಮೇಲೆ ವಧೂವರರು ಜತೆಯಲ್ಲಿ ಕುಳಿತು ಆಮಂತ್ರಿತರನ್ನು ಆನಂದಗೊಳಿಸಿದರು.

ಹೊತ್ತಿಗೆ ಸರಿಯಾಗಿ ಬಂದ ಅಂಚೆಯಾಳು ಸುಂದರಮ್ಮನವರ ಶುಭಾಶಯಪತ್ರವನ್ನೂ, ಸೀರೆಯುಡುಗೆರೆಯನ್ನೂ ತಂದಿತ್ತ.

ದಸ್ತೂರ್ ಬಂದು ಸೆಂಚುರಿ ಬಳಗದವರ ಪರವಾಗಿ ಶುಭಾಶಯ ಸಲ್ಲಿಸಿ ಸರ್ದಾರನಿಗೊಂದು ಸೊಗಸಾದ ರೇಡಿಯೋ ಓದಿಸಿದ.

ಅವನ ತರುವಾಯ ಒಬ್ಬೊಬ್ಬರಾಗಿ ಎದ್ದು ಬಂದು ಉಡುಗೆರೆಯಿತ್ತು ಶುಭಾಶಯ ಸಲ್ಲಿಸಿದರು. ಮೇಥ ಸೆಲೀನ್ ಬೆಳ್ಳಿಯ ಟೀ ಸೆಟ್ ಓದಿಸಿದರು. ಮೂರ್ತಿ ಲಲಿತಮ್ಮ ವಧುವಿಗೊಂದು ಟಿಷ್ಯೂ (Tissue) ಸೀರೆ ಓದಿಸಿದರು. ದಾದಾ ಸರ್ದಾರನಿಗೆ ಷೇರವಾನಿ ಬಟ್ಟೆ, ನಿರ್ಮಲನಿಗೆ ಒಂದು ಆರ್‌ಗಂಡಿ ಸೀರೆ ಓದಿಸಿದ. ತುಕೋಜಿ ತಾಯಿಯ ಪರವಾಗಿ ವಧುವಿಗೆ ಜೋಳಿ ತುಂಡು ಓದಿಸಿದ.

ವಧೂವರರು ನಿಂತುಕೊಂಡು ಭಕ್ತಿಪೂರ್ವಕವಾಗಿ ಉಡುಗೆರೆ ಸ್ವೀಕರಿಸಿ ಎಲ್ಲರಿಗೂ ಕೈಮುಗಿದರು.

ಹೂವಿನ ಹಂಚಿಕೆಯೊಂದಿಗೆ ವಿವಾಹವಿಧಿ ಪೂರೈಸಿತು.

ಎಲ್ಲರೂ ಚಹಾಸೇವಿಸುತ್ತ ಗುಂಪುಗುಂಪಾಗಿ ಹರಟುತ್ತ ನಿಂತರು.

ಮೂರ್ತಿ, ಲಲಿತಮ್ಮ ಆಯಿಯನ್ನು ಮಾತನಾಡಿಸಿ ತುಲಸೀ, ಪಾಂಡು, ತುಕೋಜಿಯ ಪರಿಚಯಮಾಡಿಕೊಂಡರು.

ವೀಣಳ ಸಡಗರವೋ ಸಡಗರ.

ಸರ್ದಾರ್ ಎದ್ದು ಬಂದು ಆಯಿಯನ್ನು ಮಾತನಾಡಿಸಿ

"ಆಯಿ, ನೀವು ಬಂದದ್ದು ನನಗೆ ಬಹಳ ಸಂತೋಷ" ಎಂದ.

ಮೇಘನೇ ಬಂದು ಎಲ್ಲರನ್ನೂ ಊಟಕ್ಕೆಬ್ಬಿಸಿ ತನ್ನ ದಿವ್ಯ ಭೋಜನ ಗೃಹಕ್ಕೆ ಕರೆದೊಯ್ದ.

ನಿರ್ಮಲನ ಪಕ್ಕದಲ್ಲಿಯೇ ತಾನು ಊಟಕ್ಕೆ ಕೂಡಬೇಕೆಂದು ಹಟ ಹಿಡಿದು ವೀಣ ಅಲ್ಲಿಯೇ ಕುಳಿತಳು. ಲಲಿತಮ್ಮ ಆಯಿಯನ್ನೊಂದು ಕಡೆ, ವೀಣಾತಾಯಿಯನ್ನೊಂದು ಪಕ್ಕದಲ್ಲಿ ಕೂಡಿಸಿಕೊಂಡಳು. ಸೆಲೀನ್ ಅತ್ತಿತ್ತ ತುಳಸಿ, ಶೋಭಾಳನ್ನು ಕೂಡಿಸಿಕೊಂಡಳು. ಮೂರ್ತಿ ತುಕೋಜಿಯನ್ನೂ, ಪಾಂಡುವನ್ನೂ ಪಕ್ಕದಲ್ಲಿ ಕೂಡಿಸಿಕೊಂಡ.

ಸೆಲೀನಳ ಔದಾರ್ಯ, ವಿತರಣೆ ಎರಡೂ ಊಟದ ವ್ಯವಸ್ಥೆಯಲ್ಲಿ ವಿದಿತವಾಯಿತು. ಬಗೆಬಗೆಯ ಖಾರಗಳು, ಬಗೆಬಗೆಯ ಸಿಹಿತಿಂಡಿಗಳನ್ನು ನೋಡಿಯೇ ಅತಿಥಿಗಳು ತೃಪ್ತರಾದರು. ಗೆಳೆಯರ ತಟ್ಟೆಯಿಂದ ತಟ್ಟೆಗೆ ಜಿಲೇಬಿ, ಲಡ್ಡು, ಸೋಹನ್‌ಪಪ್ಪಡಿ ಓಡಿಯಾಡಿತು. ಎಲ್ಲರೂ ಸರ್ದಾರನಿಗೆ ಗಿಡಿದು ಗಿಡಿದು ಕಟ್ಟರೆಯಾಗುವಂತೆ ಮಾಡಿದರು.

ರಸದೌತಣ ನೀಡಿದ ಮೇಥಾ ದಂಪತಿಗಳನ್ನು ಎಲ್ಲರೂ ಅಭಿನಂದಿಸಿದರು.

ಎಲ್ಲರೂ ತಾಂಬೂಲಸೇವಿಸುವುದಕ್ಕೆ ಕುಳಿತಾಗ ದಾವ್ಲೆ ಮೆಲ್ಲನೆ

"ಸರ್ದಾರ್, ಮಧುಚಂದ್ರದರ್ಶನಕ್ಕೆ ಎಲ್ಲಿಗೆ ಹೋಗುತ್ತೀ—ನೈನಿಟಾಲಿಗೋ, ಉದಕಮಂಡಲಕ್ಕೋ ?" ಎಂದು ಕೇಳಿದ.

"ಚೌಪಾತಿ ಬೀಚಿಗೆ" ಎಂದ ಸರ್ದಾರ್.

"ಏನು ಕಂಜೂಷನಯ್ಯಾ ನೀನು."

"ನಿನಗೇನು ದಾವ್ಲೆ-ಬಡವರನ್ನು ನೋಡಿದರೆ ಹಾಸ್ಯ."

"ಹೌದು ಹೌದು-ಲಕ್ಷರೂಪಾಯಿ ಬೆಲೆಬಾಳುವ ಮನೆಕಟ್ಟಿಸಿರುವವನು ನಾನೇ."

"ದಾವ್ಲೆ ಸೂಚಿಸಿದ್ದು ಸರಿಯಾಗಿದೆ ಸರ್ದಾರ್—ನೀನೂ ನಿನ್ನ ಪತ್ನಿ ಎಲ್ಲಿಗಾದರೂ ನಾಲ್ಕುದಿನ ಹೋಗಿ ಬನ್ನಿ"

ಎಂದು ದಸ್ತೂರ್ ಸಲಹೆಯಿತ್ತ.

ಒಂದು ಗಂಟೆ ಸರಸ ಪರಿಹಾಸವಾದಮೇಲೆ ಆಮಂತ್ರಿತರು ಒಬ್ಬೊಬ್ಬರಾಗಿ ತೆರಳಿದರು.

ದಾದನ ಬಳಗ, ಅಯಿ ಬಳಗ ಕಳಿಸಿಬರಲು ಮೋಥನ ಕಾರುಗಳು ಸಿದ್ಧವಾದವು.

ಅದೇ ಸಂಜೆ ಸರ್ದಾರ್, ನಿರ್ಮಲಾ ತಮ್ಮ ಸ್ವಗೃಹಕ್ಕೆ ತೆರಳಿದರು.

೨೫

ಮೂರ್ತಿಯ ಆರೋಗ್ಯ ಸುಧಾರಿಸಿದುದಲ್ಲದೆ ಪೂರ್ವಸ್ಥಿತಿಗಿಂತಲೂ ಬಹುಮಟ್ಟಿಗೆ ಉತ್ತಮವಾಗಿತ್ತು. ಮುಂಬಯಿಯ ಹವಾ, ಒಲುಮೆಯ ಗೆಳೆಯರ ಸಹವಾಸದ ಜತೆಗೆ ಉದ್ದೇಶಪಟ್ಟಿದ್ದ ಕೆಲಸ ಸಾರ್ಥಕವಾದ ತೃಪ್ತಿ!

ನಿರ್ಮಲಳ ಜೀವನನೌಕೆ ದಡಕಂಡಿತ್ತು. ನವಜೀವನದ ಸುಪ್ರಭಾತ ಅವಳ ಬಾಳಿನಲ್ಲಿ ಮೂಡಿ ಅವಳ ಅವಿಕಸಿತ ಜೀವನವನ್ನು ವಿಕಾಸಗೊಳಿಸಿತ್ತು.

ವಿಶ್ವೇಶ್ವರಯ್ಯನಿಗೆ ಮಾಡಿದ್ದ ವಾಗ್ದಾನವೂ ಪೂರೈಸಲ್ಪಟ್ಟಿತ್ತು. ಈ ವೇಳೆಗೆ ವಿಶ್ವೇಶ್ವರಯ್ಯನ ಹೊಸಮುದ್ರಣಯಂತ್ರ ತನ್ನ ಜೀವನಯಾತ್ರೆ ಆರಂಭಿಸಿರಬೇಕು.

ಉಳಿದಿದ್ದುದು ಒಂದೇ ಕೆಲಸ–ಮೇಥನ 'ಗೀತಾ ಚಿತ್ರಸಂಗ್ರಹ' ದರ್ಶನ; ಅದರ ಪರಿಚಯ ಲೇಖನ.

"ಇನ್ನಾದರೂ ನಿನ್ನ ಚಿತ್ರಸಂಗ್ರಹ ತೋರಿಸಲು ಮನಸ್ಸುಮಾಡುವೆಯಾ ಮೇಥಾ."

"ಇಂದಿನಿಂದ ಅದೇ ಕೆಲಸ—ನನ್ನ ಕೆಲಸ ಮುಗಿಸಿದಲ್ಲದೆ ನೀನು ಊರಿಗೆ ಹೋಗುವ ಚಿಂತೆ ಮಾಡಕೂಡದು. ಸೆಲೀನ್, ಲಲಿತಮ್ಮ ಇಬ್ಬರೂ ನಿನ್ನ ಸಹಾಯಕರಾಗಿ ಕೆಲಸಮಾಡಲು ಒಪ್ಪಿಕೊಂಡಿದ್ದಾರೆ."

ಮೇಥಾ ತನ್ನ ಸ್ಟೂಡಿಯೋ ಬಾಗಿಲತೆಗೆದು ಮೂರ್ತಿಯನ್ನು ಒಳಕ್ಕೆ ಕರೆದುಕೊಂಡು ಹೋದ. ಸೆಲೀನ್, ಲಲಿತಮ್ಮನೂ ಅವರನ್ನು ಹಿಂಬಾಲಿಸಿದರು.

ಗೋಡೆಗಳ ಮೇಲೆ ಕ್ರಮಾಗತವಾಗಿ ತೂಗುಹಾಕಿದ್ದ ಚಿತ್ರಪಂಕ್ತಿಯನ್ನು ನೋಡಿ ಮೂರ್ತಿ ವಿಸ್ಮಯಗೊಂಡ.

ಸೌಂದರ್ಯರಾಶಿಯೇ—ಸತ್ಯದರ್ಶನವೇ—ವರ್ಣವೈಭವವೇ— ಕಲಾ ಪರಿಪಾಕವೇ—ಯಾವದಕ್ಕೂ ಕೊರತೆಯಿರಲಿಲ್ಲ.

ಚಿತ್ರಗಳನ್ನು ನೋಡುತ್ತ ನೋಡುತ್ತ ಮೂರ್ತಿಯ ಕಣ್ಣುಗಳಿಂದ ಆನಂದಭಾಷ್ಪ ಧಾರಾವಾಹಿನಿಯಾಗಿ ಹರಿಯಿತು.

'ಇವುಗನ್ನು ನಿರ್ಮಿಸಿದ ಶಿಲ್ಪಿ, ರಸಋಷಿ ನನ್ನ ಮಿತ್ರ-ನನ್ನ ಮೋಥಾ' ಎಂಬ ಹೆಮ್ಮೆ ಮೂರ್ತಿಯ ಹೃದಯ ತುಂಬಿತು.

**ಮೊದಲನೆಯ ಚಿತ್ರ:** ಮೋಥನ ಕಲ್ಪನೆಯಲ್ಲಿ 'ಗೀತೋಪದೇಶ' ಜನ್ಮತಳೆದುದು ಸುಯೋಧನನ ರಾಜಸಭೆಯಲ್ಲಿ. ಭಗವಂತ ಪಾಂಡವರ ದೂತನಾಗಿ ಸುಯೋಧನನನಲ್ಲಿ ಬಂದಿದ್ದಾನೆ. ಹಲವು ಬಾರಿ ಕೌರವರಿಂದ ಅಪಮಾನಿತಳಾಗಿದ್ದ ಕೃಷ್ಣ ಯುದ್ಧಸಾಧಿಸಿಕೊಂಡೇ ಬರಬೇಕೆಂದು ಭಗವಂತ ನಿಗೆ ನಿರೂಪವಿತ್ತಿದ್ದಾಳೆ. ಚಂಡಭೀಮನಿಗೂ ಯುದ್ಧಬೇಕು. ಸುಯೋಧನ ದುಶ್ಶಾಸನರ ಮಲಿತನವನ್ನು ಮೆಟ್ಟಿ, ಅವರ ನೆತ್ತರಸ್ನೀಂಟದ್ದಲ್ಲದೆ ಅವನಿಗೆ ಸಮಾಧಾನವಿಲ್ಲ. ಕೃಷ್ಣೆಗೆ—ತನ್ನ ಮೋಹದಮಡದಿ ಕೃಷ್ಣೆಗೆ ಅಪಮಾನ ಬಗೆದರಲ್ಲವೇ ಈ ನರಾಧಮರು ! ಪಾರ್ಥನ ಮನಸ್ಸು ಅನಿಶ್ಚಿತ. ಅಣ್ಣ ಭೀಮನಂತವನು ರಕ್ತಪಿಪಾಸುವಾಗಿರಲಿಲ್ಲ. ಪ್ರತೀಕಾರದ ದಾವಾಗ್ನಿ ಅವನ ರಕ್ತವನ್ನು ಕುದಿಸಿರಲಿಲ್ಲ. ಪೂರ್ವಾಪರ ವಿಚಾರಶೀಲನಾದ ಪಾರ್ಥನಿಗೆ ಧರ್ಮ-ಸಂಕಟ ! ಅಣ್ಣ ಧರ್ಮರಾಯ ರಾಜರ್ಷಿ-ಅತುಲರಾಷ್ಟ್ರಪ್ರೇಮಿ— ಶಾಂತಿಪ್ರಿಯ. ಯುದ್ಧ, ಅಶಾಂತಿ, ರಕ್ತಪಾತವೆಂದರೆ ಅವನ ಮೈಮೇಲೆ ಮುಳ್ಳೇಳುತ್ತಿತ್ತು. ಸ್ವಪಕ್ಷದಲ್ಲಿ ನ್ಯಾಯವಿದೆ, ಧರ್ಮವಿದೆ. ಕೌರವರು ಶುದ್ಧ ಅನಾಗರಿಕರಂತೆ ವರ್ತಿಸಿದ್ದಾರೆ. ಅವರನ್ನು ಶಿಕ್ಷಿಸಿ, ದೇಶವನ್ನು ಅವರ ವಜ್ರಮುಷ್ಠಿಯಿಂದ ಪಾರುಮಾಡುವುದಗತ್ಯ. ಆದರೆ ಇದಕ್ಕೆ ಯುದ್ಧವೊಂದೇ ಪರಿಹಾರೋಪಾಯವೇ ? ದುರುಳ ಕೌರವರನ್ನು ಶಿಕ್ಷಿಸಹೋಗಿ ನಾಡಿನ ನಿಷ್ಪಾಪಜೀವಿಗಳಾದ ನಾಗರಿಕರನ್ನು ಶಿಕ್ಷಿಸಬೇಕಲ್ಲಾ ! ಸಹಸ್ರಾರು ನಿರಪರಾಧಿ ಪ್ರಜರನ್ನು ಶಿಕ್ಷಿಸಿ, ಅವರ ರಕ್ತದಹೊಳೆ ಹರಿಸಿ, ಆದರಲ್ಲಿ ಮಿಂದ ಸ್ವರ್ಣಕಿರೀಟ ವನ್ನು ಧರಿಸುವುದೇ ? ಶಾಂತಿಸಾಧನೆಗಾಗಿ ಕೌರವರ ಅನೇಕ ಅಕ್ಷಮ್ಯ ಅಪ ರಾಧಗಳನ್ನು ಕ್ಷಮಿಸಲು ಧರ್ಮರಾಯ ಸಿದ್ಧನಾಗಿದ್ದಾನೆ. ಭಗವಾನ್, ಸುಯೋಧನ ಅರ್ಧರಾಜ್ಯ ಕೊಟ್ಟರೆ ಕೊಡಲಿ. ಅದಕ್ಕೆ ಅವನು ಸಮ್ಮತಿಸ

ದಿದ್ದರೆ ಐದು ಗ್ರಾಮಗಳನ್ನಾದರೂ ದೊರಕಿಸು. ಹೇಗಾದರೂ ಮಾಡಿ ಯುದ್ಧ ಸಂಭವಿಸದಂತೆ ನೋಡಿಕೊ' ಎಂದು ಅವನೂ ಭಗವಂತನಿಗೆ ಸಂದೇಶ ವಿತ್ತಿದ್ದಾನೆ.

ಕೃಷ್ಣೆ ಭಗವಂತನ ಪ್ರಿಯಭಗಿನಿ—ಅಭಿಮಾನಧನಳು — ಛಲವಾದಿ; ಧರ್ಮರಾಯ ಭಗವಂತನ ಪ್ರಿಯಶಿಷ್ಯ—ಧರ್ಮಾವತಾರ—ಸತ್ಯಸಂಧ. ಭಗವಂತ ಕೃಷ್ಣೆಯನ್ನು ಪ್ರೀತಿಸುವಷ್ಟೇ ಧರ್ಮರಾಯನನ್ನು ಗೌರವಿಸುತ್ತಾನೆ.

ಉಭಯಸಂದೇಶ ಹೊತ್ತು ದೂತನಾಗಿ ಸುಯೋಧನನ ಸಭೆ ಪ್ರವೇಶಿಸುವ ಭಗವಂತನ ಮನಸ್ಸಾಗಲೇ ಧರ್ಮರಾಯನ ದೃಷ್ಟಿಯನ್ನೊಪ್ಪಿಕೊಂಡಿದೆ. ಜಗತ್ತಿನ ತಂದೆಯಾದವನ ಹೃದಯದಲ್ಲಿ ಉದ್ಧಟ ಕೌರವರ ಬಗ್ಗೆಯೂ ದ್ವೇಷವಿಲ್ಲ. ಅವನ ಮೌಢ್ಯ, ಹಟಮಾರಿತನಗಳಿಗಾಗಿ ಭಗವಂತ ಮರುಗುತ್ತಾನೆ.

ಕೃಷ್ಣಸಂಧಾನ ವಿಫಲವಾಗುತ್ತದೆ. ದೌತ್ಯವಹಿಸಿ ಬಂದ ಭಗವಂತನನ್ನು ಅಪಮಾನಗೊಳಿಸಲೂ ಸುಯೋಧನ ಹೇಸುವುದಿಲ್ಲ. ಯುದ್ಧಸಿದ್ಧಮಾಡಿಕೊಂಡು ಖಿನ್ನಮನಸ್ಕನಾಗಿ ಭಗವಂತ ಪಾಂಡವರಿದ್ದಲ್ಲಿಗೆ ಹಿಂದಿರುಗುತ್ತಾನೆ.

ಕೃಷ್ಣದೌತ್ಯ ವಿಫಲವಾದುದು ಕುರುಕ್ಷೇತ್ರಯುದ್ಧಕ್ಕೆ ಬುನಾದಿಹಾಕಿತು—ಗೀತಾಸಂದೇಶದ ನಾಂದಿಯಾಯಿತು.

**ಎರಡನೆಯ ಚಿತ್ರ**:—ಅಂಧ ಧೃತರಾಷ್ಟ್ರನ ಕೋರಿಕೆಯಂತೆ ಸಂಜಯ ಕುರುಕ್ಷೇತ್ರ ರಣರಂಗದ ಪರಿಚಯಮಾಡಿಕೊಡುತ್ತಾನೆ.

**ಮೂರನೆಯ ಚಿತ್ರ**:—ಉಭಯಸೇನೆಗಳ ಮಧ್ಯೆ ತನ್ನ ರಥ ನಿಲ್ಲಿಸಬೇಕೆಂದು ಅರ್ಜುನ ಸಾರಥಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ.

**ನಾಲ್ಕನೆಯ ಚಿತ್ರ**:—ಯುದ್ಧೋತ್ಸಾಹಿಗಳಾಗಿ ಬಂದಿದ್ದ ಬಂಧುಗಳು, ಗುರು ಹಿರಿಯರು, ಆಪ್ತೇಷ್ಟರನ್ನು ನೋಡಿ ಅರ್ಜುನನಿಗೆ ವಿಷಾದವಾಗುತ್ತದೆ. ಮುಖ ಒಣಗುತ್ತದೆ, ಶರೀರ ಕಂಪಿಸುತ್ತದೆ, ರೋಮಾಂಚವಾಗುತ್ತದೆ, ಮೈಯಲ್ಲಿ ಉರಿ ಏಳುತ್ತದೆ—ಗಾಂಡೀವ ಕೈಯಿಂದ ಜಾರುತ್ತದೆ.

**ಐದನೆಯ ಚಿತ್ರ**:—ಅರ್ಜುನನ ಕ್ಷಣಿಕ ದೌರ್ಬಲ್ಯ ಕಂಡ ಭಗವಂತ ಕೇಳಿ 'ಪಾರ್ಥ, ಯುದ್ಧದಲ್ಲಿ ಶತ್ರುಗಳಿಂದ ನೀನು ಮೃತನಾದರೆ ಸ್ವರ್ಗವನ್ನು ಸೇರುವೆ. ಶತ್ರುಗಳನ್ನು ನೀನು ಜಯಿಸುವುದಾದರೆ ನಿಷ್ಕಂಟಕವಾದ ರಾಜ್ಯ

ವನ್ನನುಭವಿಸುವೆ. ಸುಖದುಃಖ, ಲಾಭಾಲಾಭ, ಜಯಾಪಜಯಗಳನ್ನು ಸಮಾನವಾಗಿ ಪರಿಗಣಿಸಿ ನೀನು ಯುದ್ಧಮಾಡುವುದಾದರೆ ಪಾಪಲೇಪ ವಾಗುವುದಿಲ್ಲ' ಎಂದು ಸಿಡಿಲಿನಂತೆ ನುಡಿಯುತ್ತಾನೆ.

ಮುಂದೆ ಭಗವಂತ ಉಪದೇಶಿಸಿದ ವಿವಿಧಯೋಗಗಳು ,ಪಾರ್ಥನ ಮನ ಸ್ಸಿನಮೇಲೆ ಉಂಟುಮಾಡಿದ ಪರಿಣಾಮದ ಚಿತ್ರೀಕರಣದ ಕಡೆಗೆ ಮೇಥಾ ಲಕ್ಷ್ಯಕೊಟ್ಟದ್ದ. 'ವಿಶ್ವರೂಪ ಸಂದರ್ಶನ'ಕ್ಕೆ ಮೂರು ಚಿತ್ರಗಳನ್ನು ಮೀಸಲು ಮಾಡಿ ಭಗವಂತನ 'ವಿಶ್ವಮನಂತರೂಪ'ವನ್ನು ಚಿತ್ರಿಸಿದ್ದ.

ಕೊನೆಯದಾಗಿ ಅರ್ಜುನನ ಜ್ಞಾನೋದಯ; ಆತ್ಮಸ್ವರೂಪವನ್ನರಿತ ಅರ್ಜುನ ಮೋಹಕಳೆದುಕೊಂಡು, ಸ್ಮೃತಿಹೊಂದಿದವನಾಗಿ ವಿರಾಜಿಸುತ್ತಾನೆ.

'ಗೀತಾಮಾಲೆ'ಯನ್ನು ಮುಕ್ತಾಯಗೊಳಿಸುತ್ತಾ ಗೀತೆ ವಿಶ್ವಕ್ಕೆ ನೀಡುವ ಶಾಂತಿಸಂದೇಶವನ್ನು ಮೇಥಾ ಮನಮುಟ್ಟುವಂತೆ ಚಿತ್ರಿಸಿದ್ದ.

ಭಾವಪರವಶತೆಯಿಂದ ಸ್ತಬ್ಧನಾಗಿ ಕುಳಿತ ಮೂರ್ತಿಯಲ್ಲಿಗೆ ಬಂದು ಮೇಥಾ

"ಭಗವಂತನ ಸಂದೇಶಕ್ಕೆ ನನ್ನಿಂದ ಅಪಚಾರವಾಗಿಲ್ಲವಷ್ಟೆ!" ಎಂದ.

"ನಿನ್ನ ಚಿತ್ರಗಳು ಗೀತೆಯ ಸತ್ವವನ್ನು ಹೊರಗೆಡಹಿರುವುದಲ್ಲದೆ ನಿನ್ನ ಹಿರಿತನವನ್ನೂ ಸಾರಿದೆ ಮೇಥಾ."

"ನನ್ನ ಕೃತಿಯಿಂದ ಹತ್ತು ಜನಗಳಿಗೆ ಪ್ರಯೋಜನವಾಗುವಂತೆ ಮಾಡು ವುದು ನಿನ್ನ ಕರ್ತವ್ಯಭಾರ."

"ಅರ್ಜುನನ ವಿಕಾರ ನನ್ನಲ್ಲಿ ಪುನರವತರಿಸಿದೆ."

"ಹಾಗೆಂದರೇನು ?"

"ಪ್ರತಿಭಾನ್ವಿತವಾದ ನಿನ್ನ ಕೃತಿಗಳಿಗನುಗುಣವಾದ ಚೌಕಟ್ಟನ್ನು ಒದಗಿಸಲು ಅಸಮರ್ಥನಾಗಿದ್ದೇನೆ."

"ನಾನು ಚಿತ್ರಗಳನ್ನು ಬರೆಯಲಾರಂಭಿಸಿದಾಗಲೇ, ನೀನು ಅವುಗಳ ಪರಿಚಯ ಬರೆಯಬೇಕೆಂದು ನಿಶ್ಚಯಿಸಿಕೊಂಡೆ. ನೀನು ಪರಿಚಯ ಬರೆಯ ದಿದ್ದರೆ ನಾನು ಆ ಕೃತಿಗಳನ್ನು ಹೊರಗೆಡಹುವುದೇ ಇಲ್ಲ."

ಈ ಉಭಯಸಂಕಟದಿಂದ ಪಾರಾಗುವುದು ಹೇಗೆಂಬ ಚಿಂತೆ ಮೂರ್ತಿ ಯನ್ನು ಬಲವಾಗಿ ಮುತ್ತಿತು.

"ನಾವು ಒಂದು ಒಪ್ಪಂದಕ್ಕೆ ಬರೋಣ ಮೇಥಾ." ಎಂದ

"ಹೇಳು."

"ಪರಿಚಯ ಬರೆದು ಮುಗಿಸುತ್ತೇನೆ. ಅದು ನನಗೆ ಅಸಮರ್ಪಕವೆಂದು ತೋರಿದರೆ ಹಸ್ತಪ್ರತಿ ಹರಿದುಹಾಕುವ ಸ್ವಾತಂತ್ರ್ಯ ನನಗಿರಬೇಕು."

"ಆಗಬಹುದು—ಎಂದಿನಿಂದ ಕೆಲಸ ಆರಂಭಿಸುವೆ ?"

"ನನಗೆ ಮೂರು ದಿನಗಳ ಅವಧಿಬೇಕು. ಗೀತೆಯನ್ನು ಇನ್ನೊಮ್ಮೆ ನಾನು ಕೂಲಂಕಷವಾಗಿ ಅಭ್ಯಾಸಮಾಡಬೇಕು ಮತ್ತು ನಿನ್ನ ಚಿತ್ರಗಳನ್ನು ಪುನಃಪುನಃ ನೋಡಿ, ಅವುಗಳ ಪ್ರತಿಭೆಯ ಪೂರ್ಣದರ್ಶನ ಪಡೆಯಬೇಕು."

ಮೇಥಾ ಒಪ್ಪಿಗೆ ಸೂಚಿಸಿದ.

ಗೀತೆಯ ಬಗ್ಗೆ ಪ್ರಕಟವಾಗಿದ್ದ ವಿವಿಧ ಗ್ರಂಥಗಳು, ವ್ಯಾಖ್ಯಾನಗಳು, ಅನುವಾದಗಳನ್ನು ಸಂಗ್ರಹಿಸಿಕೊಂಡು ಮೂರ್ತಿ ಆಳವಾದ ಅಭ್ಯಾಸ ಆರಂಭಿಸಿದ.

ನಾಲ್ಕನೆಯ ದಿನದಿಂದ ಚಿತ್ರವಿವರಣೆಯನ್ನು ಸೆಲೀನಳಿಗೆ ಹೇಳಿ ಬರೆಯಿಸಲಾರಂಭಿಸಿದ. ಸೆಲೀನ್ ಟೈಪುಮಾಡಿದ ಹಾಳೆಗಳನ್ನು ತಿದ್ದಿ ಲಲಿತಮ್ಮನ ಕೈಯಲ್ಲಿಡುತ್ತಿದ್ದ. ಲಲಿತ ಅವುಗಳ ಸುಂದರ ಪ್ರತಿಗಳನ್ನು ಸಿದ್ಧಗೊಳಿಸುತ್ತಿದ್ದಳು.

ಎರಡುವಾರ ಕಳೆಯುವಷ್ಟರಲ್ಲಿ ಪೂರ್ಣ ಹಸ್ತಪ್ರತಿ ಸಿದ್ಧವಾಯಿತು.

ಒಂದು ರಾತ್ರಿ ಮೇಥಾ, ಸೆಲೀನ್, ಲಲಿತಮ್ಮನೆದುರಿಗೆ ಮೂರ್ತಿಯೇ ಹಸ್ತಪ್ರತಿ ಓದಿದ. ಮೇಥಾ ತೃಪ್ತಿವ್ಯಕ್ತಪಡಿಸುತ್ತಾ

"ಈ ಕೆಲಸ ನಿನಗಿಂತ ಚೆನ್ನಾಗಿ ಯಾರೂ ಮಾಡಲಾರರೆಂಬುದು ನನಗೆ ಗೊತ್ತಿತ್ತು" ಎಂದ.

"ನ್ಯಾಯವಾಗಿ ನೀವು ಅಸೂಯೆಪಡಬೇಕು ಡಿಯರ್" ಎಂದು ಸೆಲೀನ್ ಹೇಳಿದಳು.

"ಏಕೆ ಡಾರ್ಲಿಂಗ್ ?"

"ಕೆಲವು ಕಡೆ ನಿಮ್ಮ ಚಿತ್ರಕಲ್ಪನೆಯನ್ನೂ ಮೀರಿಸಿದೆ ಪ್ರಸಾದರ ಬರವಣಿಗೆ."

"ಗೀತೆಯ ದಿವ್ಯಸಂದೇಶವಲ್ಲದೆ ನಿಮ್ಮ ಸಂಯುಕ್ತಪ್ರಯತ್ನ ಒಂದು ಸಂದೇಶ ಸಾರಿದೆ" ಎಂದು ಲಲಿತ ಹೇಳಿದಳು.

"ಅದು ಯಾವ ಸಂದೇಶ ?"

"ಕವಿ, ಕಲಾವಿದರು ನಿ–ಸ್ಪೃಹೆಯಿಂದ ಕೂಡಿ ಕೆಲಸಮಾಡಬಹುದು. ಲೋಕಹಿತಕ್ಕಾಗಿ ಇಬ್ಬರೂ ಕೂಡಿ ಕೆಲಸಮಾಡಬೇಕೆಂದು ನೀವಿಬ್ಬರೂ ಸಾರಿರುವಿರಿ."

"ಪ್ರಸಾದ್, ಇನ್ನು ಈ ಹಸ್ತಪ್ರತಿ ನನ್ನದೆಂದುಕೊಳ್ಳಬಹುದೇ ?"

"ತೆಗೆದುಕೋ ಮೇಥಾ–ನನ್ನ ಅಲ್ಪ ಬರವಣಿಗೆಯಿಂದ ನಾಲ್ಕು ಜೀವಿಗಳಿಗೆ ತೃಪ್ತಿಯಾಗುವುದಾದರೆ ಅದನ್ನೇಕೆ ನಾನು ಬೇಡವೆನ್ನಲಿ ?"

"ಇನ್ನೂ ತೃಪ್ತಿಯಾಗಲಿಲ್ಲವೆ ದೊರೆ."

"ಅಮೃತೋಚಿತವಾದ ಕುಂಭ ನಾನು ರಚಿಸಿಲ್ಲ ಲಲಿತಾ—ನಾನು ರಚಿಸಿರುವುದೆಲ್ಲಾ ಕುಂಬಾರನ ಮಡಿಕೆ."

"ಭಕ್ತಿಯಿಂದ ಭಗವಂತನಿಗೆ ಮಡಿಕೆಯಲ್ಲೇ ಅರ್ಘ್ಯಸಮರ್ಪಿಸಿದರೆ ಅವನು ಒಲ್ಲೆಯೆನ್ನುವುದಿಲ್ಲ."

"ಅವನು ಒಲ್ಲೆಯೆನ್ನದಿರಲೆಂದೇ ನನ್ನ ಪ್ರಾರ್ಥನೆ"

ಎಂದು ಮೂರ್ತಿ ನುಡಿದ.

೨೬

ಮೂರ್ತಿ, ಲಲಿತಮ್ಮ ಆಯಿಗೆ ಮಾಡಿದ್ದ ವಾಗ್ದಾನ ಪೂರ್ಣವಾಗದೆ ಹಾಗೇ ಉಳಿದಿತ್ತು. ಒಂದು ದಿನ ಪೂರ್ತಿ ಆಯಿ ಮನೆಯಲ್ಲಿ ಕಳೆಯಲು ನಿರ್ಧರಿಸಿ ಅವರು ಭಾನುವಾರ ಹೊರಟರು.

ವೀಣಾ ಸಂತೋಷದಿಂದ ಕುಣಿದಾಡಿದಳು.

"ನೀವು ಬರದಿದ್ದರೆ ವೀಣಳೇ ಮಲಬಾರ್ ಹಿಲ್ಸ್‌ಗೆ ಓಡಿ ಬರುತ್ತಿದ್ದಳು."

ಎಂದು ಆಯಿ ಹೇಳಿದರು.

ದಾದಸಿಗೂ ರಜವಿದ್ದುದರಿಂದ ಅವರೂ ಮನೆಯಲ್ಲಿಯೇ ಇದ್ದರು.

ಆ ಸುಖಸಂಸಾರದೊಂದಿಗೆ ಸಂಜೆಯವರೆವಿಗೂ ಇದ್ದು, ಆಯಿ ಮಾಡಿ ಬಡಿಸಿದ ಪೂರಿ, ಬಾಸುಂದಿ ಸೇವಿಸಿ, ಮೂರ್ತಿ, ಲಲಿತಮ್ಮ ಸಂಜೆ ಮನೆಗೆ ಹಿಂದಿರುಗಿದರು.

ಮೂರ್ತಿಯನ್ನು ಕಂಡಕೂಡಲೆ ಮೇಥಾ

"ನೀನು 'ವಿದ್ಯಾಭವನ'ಕ್ಕೆ ಹೋಗಿದ್ದೆಯಾ ಪ್ರಸಾದ್" ಎಂದು ಕೇಳಿದ.

"ಹೌದು—ಗೀತೆಯ ಬಗ್ಗೆ ಗ್ರಂಥಸಂಗ್ರಹಿಸಲು ಹೋಗಿದ್ದೆನಲ್ಲಾ !"

"ನನ್ನ ಚಿತ್ರಗಳ ವಿಷಯ ಯಾರಲ್ಲಿಯಾದರೂ ಪ್ರಸ್ತಾಪಿಸಿದೆಯಾ ?"

"ಶುಕ್ಲಾಜಿ 'ಏನು ಬರೆಯುತ್ತೀರಿ' ಎಂದು ಕೇಳಿದರು—ಅವರಿಗೆ ಹೇಳಿದೆ. ಈಗೇನಾಯಿತು ?"

"ಏನೂ ಆಗಿಲ್ಲ. ಶುಕ್ಲಾಜಿ ಮಧ್ಯಾನ್ಹ ಬಂದಿದ್ದರು—'ವಿದ್ಯಾಭವನ' ದಲ್ಲಿ ನನ್ನ ಗೀತಾಚಿತ್ರಪ್ರದರ್ಶನ, ಜತೆಯಲ್ಲಿ ನಿನ್ನ ಭಾಷಣ ಆಗಬೇಕೆಂದರು."

"ಚಿತ್ರಪ್ರದರ್ಶನವಾಗಲಿ—ಭಾಷಣ ಬೇಡ."

"ಶ್ರುತಿ, ಲಯಗಳಂತೆ ನಾವು ಕೂಡಿಯೇ ಹೋಗಬೇಕಾಗಿದೆ. ಭಾಷಣವಿಲ್ಲದಿದ್ದರೆ ಪ್ರದರ್ಶನವೂ ಇಲ್ಲ."

"ಈ ಚಿತ್ರಗಳ ಬಗ್ಗೆ ಏನು ನಿರ್ಧರಿಸಿರುವೆ ?"

"ಸದ್ಯದಲ್ಲೇ ಅಮೇರಿಕೆಯ ಪ್ರಕಾಶಕರಿಗೆ ಕಳಿಸಿಕೊಡುತ್ತೇನೆ."

"ಈ ವಿಷಯದಲ್ಲಿ ನನ್ನದೊಂದು ಸಲಹೆಯಿದೆ."

"ಹೇಳು."

"ನಿನ್ನ ಚಿತ್ರಗಳು ಭಾರತ ಬಿಟ್ಟು ಹೋಗಬಾರದು. ಮುದ್ರಣ ಕೆಲಸ ಮುಗಿದಮೇಲೆ ಅವು ಭಾರತಕ್ಕೇ ಹಿಂದಿರುಗಬೇಕು. ಅವು 'ರಾಷ್ಟ್ರಪತಿ ಭವನ'ವನ್ನೋ 'ವಿದ್ಯಾಭವನ'ವನ್ನೋ ಅಲಂಕರಿಸಿ ಭಾರತದ ಸ್ಥಿರಸ್ವತ್ತಾಗಿರಬೇಕು. ಚಿತ್ರಗಳನ್ನು ಅಮೇರಿಕಾ ಬಯಸಿದರೆ ಅವರಿಗೆ ಪ್ರತಿಮಾಡಿ ಕಳಿಸಿಕೊಡು."

"ಒಪ್ಪಿದೆ ಪ್ರಸಾದ್. ನಮ್ಮ ನಾಡಿನ ಕಲಾಸಂಪತ್ತು ಪರದೇಶ ಸೇರುವುದು ನನಗೂ ಇಷ್ಟವಿಲ್ಲ."

"ಶುಕ್ಲಾಜಿಯವರಿಗೇನು ಹೇಳಿದೆ."

"ಆಗಲಿ ಎಂದು ಒಪ್ಪಿಕೊಂಡೆ. ಚಿತ್ರಗಳ ವಿವರಣೆಯನ್ನೀಯುವ ಒಂದು ಸಣ್ಣ ವಹಿ ಸಿದ್ಧಗೊಳಿಸಬೇಕು."

"ಅದರಲ್ಲಿ ನಿನ್ನ ನಾಲ್ಕಾರು ಚಿತ್ರಗಳು ಪ್ರಕಟವಾಗಲಿ."

"ಚಿತ್ರಗಳ ಪರಿಚಯ ನೀನೇ ಬರೆದುಕೊಡಬೇಕು."

"ಚಿತ್ರಗಳ ಪರಿಚಯ, ಚಿತ್ರಶಿಲ್ಪಿಯ ಪರಿಚಯ ನಾನೇ ಬರೆದು ಕೊಡುತ್ತೇನೆ. ಈ ಪ್ರದರ್ಶನ ಆರಂಭವಾಗುವುದು ಯಾವಾಗ ?"

"ಮುಂದಿನ ವಾರ."

"ನಾನು ಊರಿಗೆ ಹೋಗಬೇಡವೇ ?"

"ಹೋಗುವೆಯಂತೆ—ಏನವಸರ !"

"ಕೈತುಂಬ ಕೆಲಸವಿದೆ ಮೇಥಾ—ಗಣೇಶರು ಬೇರೆ ನನ್ನ ದಾರಿ ನೋಡುತ್ತಿರುತ್ತಾರೆ."

"ಇಲ್ಲಿ ನಿರುದ್ಯೋಗಿಯಾಗಿ ಕುಳಿತಿರುವೆಯಾ ?"

"ಇಲ್ಲಿಗೆ ಬಂದರೆ ಊರಿಗೆ ಹೋಗುವುದಕ್ಕೇ ಮನಸ್ಸಾಗುವುದಿಲ್ಲ. ಇವತ್ತು ವೀಣಳನ್ನು ಬಿಟ್ಟುಬರಬೇಕಾದರೆ ಸಾಕುಸಾಕಾಗಿ ಹೋಯಿತು. ಕೊನೆಗೆ ಸುಳ್ಳು ಹೇಳಿ ತಪ್ಪಿಸಿಕೊಂಡು ಬಂದೆ. ನಾವಿನ್ನೂ ಒಪ್ಪತ್ತೂ ನಿರ್ಮಲನ ಮನೆಯಲ್ಲಿ ಊಟಮಾಡಿಲ್ಲ—ಅವಳು ಪೇಚಾಡಿಕೊಳ್ಳುತ್ತಾಳೆ. ಇಷ್ಟು ದಿನ ನಾವಿಲ್ಲಿದ್ದರೂ ಸೆಂಚುರಿಮಿತ್ರರೊಂದಿಗೆ ಒಂದು ದಿನವನ್ನೂ ಕಳೆದಿಲ್ಲ."

"ಎಲ್ಲಾ ಮುಗಿಸಿಕೊಂಡು ಹೋದರಾಯಿತು"

ಎಂದು ಮೇಥಾ ಮಾತು ಮುಗಿಸೇಬಿಟ್ಟ.

ಒಂದೆರಡು ದಿನಗಳಲ್ಲಿ ಮೇಥನ ಚಿತ್ರಸಂಗ್ರಹ ಪರಿಚಯಮಾಡಿಕೊಡುವ ಕಿರುವಹಿ ಸಿದ್ಧವಾಯಿತು.

ಚಿತ್ರಪ್ರದರ್ಶನ, ಭಾಷಣ ಮುಗಿಸದೆ ಊರಿಗೆ ಹೊರಡವುದಂತೂ ದುಸ್ಸಾಧ್ಯವಾಗಿತ್ತು. ಆ ಅವಧಿಯಲ್ಲಿ ಮೂರ್ತಿ, ಲಲಿತಮ್ಮ ತಮ್ಮ ಕರ್ತವ್ಯ ಗಳೆಲ್ಲವನ್ನೂ ಮುಗಿಸಿಕೊಂಡರು.

ಎರಡು ಮೂರು ದಿನಕ್ಕಾದರೂ ಒಮ್ಮೆ ಕಾಗದ ಬರೆಯುತ್ತಿರಬೇಕೆಂದು ಲಲಿತಮ್ಮನನ್ನು ನಿರ್ಮಲಾ ಅಂಗಲಾಚಿದಳು.

ಒಂದು ದಿನ ಗಣೇಶರ ಕಾಗದವನ್ನೇ ಮೂರ್ತಿ ಮೇಥನ ಕೈಯಲ್ಲಿಟ್ಟ

"ಇನ್ನು ನಾನು ಹೊರಡದಿದ್ದರೆ ಮರ್ಯಾದೆ ಉಳಿಯುವಂತಿಲ್ಲ."

"ಮತ್ತೆ ರಾಜಕೀಯಕ್ಕೆ ಪ್ರವೇಶಿಸುವೆಯಾ ಪ್ರಸಾದ್."

"ಗಣೇಶ ಅವರಿಗಾಗಿ ತಾತ್ಕಾಲಿಕವಾಗಿ ಪ್ರವೇಶಮಾಡಬೇಕಾಗಿದೆ."

"ನೀನು ಕಟುವಾಗಿ ವಿರೋಧಿಸುತ್ತಿರುವ ಕಮ್ಯುನಿಸ್ಟ್ ಪಾರ್ಟಿಯ ಪರವಾಗಿ ಅವರು ನಿಲ್ಲುತ್ತಾರೆ."

"ಕಮ್ಯುನಿಸ್ಟ್ ಪಾರ್ಟಿಯಲ್ಲಿ ಗಣೇಶರಂಥವರೇ ಇದ್ದರೆ ಎಲ್ಲ ಓಟು ಗಳನ್ನು ಅವರಿಗೇ ಕೊಡಿಸಲು ನಾನು ಸಿದ್ಧ. ಗಣೇಶರು ಮುಂಡಿಸುತ್ತಿರುವುದು ಗಾಂಧೀ ಸಾಮ್ಯವಾದ (Gandhian Socialism)-ಇದೇ ಕಾರಣಕ್ಕಾಗಿಯೇ ಪಾರ್ಟಿಯ ಅಗ್ನಿಭಕ್ಷಕರಿಗೂ ಅವರಿಗೂ ಘರ್ಷಣೆ ಆರಂಭವಾಗಿರುವುದು."

"ಸದಾ ಪರಹಿತವನ್ನೇ ಚಿಂತಿಸುತ್ತಿದ್ದಾರೆ ಸ್ವ-ಹಿತ."

"ನೀವುಗಳು ಆ ಬಗ್ಗೆ ಚಿಂತಿಸುವಾಗ ನನಗೇಕೆ ತೊಂದರೆ."

"ನಿನ್ನ ಯೋಗ್ಯತೆಗೆ ನಿನ್ನ ಕ್ಷೇತ್ರ ಸಾಲದು ಪ್ರಸಾದ್. ಹುನಗುಂದ ನಂಥ ಅಲ್ಪರ ಸಂಗಡ ನೀನು ಹೋರಾಡುವುದೇ ನನಗೆ ಸಮ್ಮತವಿಲ್ಲ—ನನ್ನ ಚಿತ್ರಗಳು ಅಚ್ಚಾಗುವಾಗ ನಾನು ಅಮೇರಿಕಾಕ್ಕೆ ಹೋಗಬೇಕಾಗಬಹುದು. ಆಗ ನೀನೇಕೆ ನನ್ನ ಜತೆ ಬರಬಾರದು ?"

"ಅದಿನ್ನೂ ಆರುತಿಂಗಳ ಮಾತಲ್ಲವೇ ?"

"ಹೌದು."

"ನೋಡೋಣ. ಅನುಕೂಲವಿದ್ದರೆ ಖಂಡಿತ ಬರುತ್ತೇನೆ—ಕ್ಷೇತ್ರಜ್ಞ ಸರಿಯಾಗಿದ್ದರೆ ಕ್ಷೇತ್ರ ಯಾವದಾದರೇನು ?"

"ಬರಡು ಭೂಮಿಯಲ್ಲಿ ಗೋದಿ ಬಿತ್ತಿದರೇನು ಸಾರ್ಥಕ ?"

"ಆಧುನಿಕ ವಿಜ್ಞಾನ ಬರಡು ಭೂಮಿಯನ್ನೆಲ್ಲಾ ಫಲವತ್ತಾಗಿ ಮಾಡುತ್ತಿದೆ ಮೇಥಾ."

"ನೀನು ನನ್ನನ್ನು ವಾದದಲ್ಲಿ ಸೋಲಿಸುತ್ತಿರುವೆ."

"ನೀನು ಸೋತ ವಿಷಯ ನಾನು ಬಹಿರಂಗಪಡಿಸುವುದಿಲ್ಲ."

"ಪ್ರಸಾದ್, ಭಾರತದ ಕೀರ್ತಿ ದಶದಿಕ್ಕುಗಳಿಗೂ ವ್ಯಾಪಿಸಬೇಕೆಂದು ನೀನು ಬಯಸುವುದಿಲ್ಲವೇ ?"

"ಇದೆಂಥ ವಿಲಕ್ಷಣ ಪ್ರಶ್ನೆ."

"ಪ್ರಶ್ನೆಗೆ ಉತ್ತರ ಹೇಳು."

"ಬಯಸುತ್ತೇನೆ—ಹಾರ್ದಿಕವಾಗಿ ಬಯಸುತ್ತೇನೆ."

"ಈ ಕೀರ್ತಿಯನ್ನು ಪಸರಿಸುವ ದಕ್ಷತೆ ನಿನ್ನಲ್ಲಿ—ನನ್ನಲ್ಲಿ ಇಲ್ಲವೇ ?"

"ಇಲ್ಲ ಎನ್ನುವವರಿಗೆ ಎಂಟೆರ್ದೆ ಬೇಕು."

"ಈ ಕೆಲಸ ನಾವು ಕೈಗೊಳ್ಳದಿದ್ದರೆ ರಾಷ್ಟ್ರಕ್ಕೇ ನಾವು ಅಪಚಾರಮಾಡಿ ದಂತಾಗುತ್ತದೆ."

"ನಿಜ ಮೇಥಾ—ಅದಕ್ಕೂ ಮಹತ್ವವಾದ ಕೆಲಸ ನೀನು ಮರೆತಂತೆ ಕಾಣುತ್ತದೆ. ಬ್ರಿಟಿಷರು ನಮ್ಮನ್ನು ಯಾವ ಸ್ಥಿತಿಯಲ್ಲಿ ಬಿಟ್ಟುಹೋಗಿದ್ದಾ ರೆಂಬುದನ್ನು ಜ್ಞಾಪಿಸಿಕೋ. ಪ್ರಾಚೀನ ಪರಂಪರೆಯ ಬಗ್ಗೆ ನಮ್ಮ ಗೌರ ವಾದರ ಬಹುಮಟ್ಟಿಗೆ ಕಡಿಮೆಯಾಗಿದೆ; ಅರ್ವಾಚೀನ ನಾಗರಿಕತೆಯನ್ನು ನಾವು ರಕ್ತಗತವನ್ನಾಗಿಮಾಡಿಕೊಳ್ಳಲಾಗಿಲ್ಲ. ಈ ಸಂಧಿಕಾಲದಲ್ಲಿ ನಾವು ಮಾಡ

ಬೇಕಾದ ಕೆಲಸವೆಷ್ಟಿದೆಯೆಂಬುದನ್ನು ಯೋಚಿಸು. ಭಾರತದ ಕೀರ್ತಿ ವಿಶ್ವದಲ್ಲಿ ವ್ಯಾಪಿಸುವ ಮುನ್ನ ಭಾರತದಲ್ಲಿಯೇ ವ್ಯಾಪಿಸಬೇಕು. ಭಾರತೀಯರಿಗಿಂದು ಆಗಬೇಕಾಗಿರುವುದು **ಭಾರತದರ್ಶನ**. ನಮ್ಮ ನಾಡನ್ನು ಕಬಳಿಸಿರುವ ಆತ್ಮಜ್ಞಾನಶೂನ್ಯತೆಯನ್ನು ನಾವು ತೊಡೆದುಹಾಕಬೇಕಾಗಿದೆ. ನಮ್ಮ ನಮ್ಮ ಪ್ರಾಂತ್ಯಗಳಲ್ಲಿ—ಕ್ಷೇತ್ರಗಳಲ್ಲಿ ನಾವು ಮಾಡಬೇಕಾಗಿರುವ ಕೆಲಸ ಅಖಂಡ ವಾಗಿದೆ.

ಪ್ರಾಯಶಃ ಹೀಗೆ ಭಾವಿಸುವ ನಾನು ವಿಶ್ವವಿಖ್ಯಾತಿಗಳಿಸದಿರಬಹುದು. ನನ್ನ ಸಣ್ಣ ಕನ್ನಡನಾಡಿನಲ್ಲಿಯೇ ಜನ ನನ್ನನ್ನು ಮರೆಯಬಹುದು. ಚಿಂತೆ ಯಿಲ್ಲ—ಭಾರತಚಕ್ರ ಮುನ್ನಡೆಯಲು ಅನಾಮಿಕನಾದ ನನ್ನ ಸೇವೆಯೂ ಸ್ವಲ್ಪ ಮಟ್ಟಿಗಾದರೂ ಸಹಾಯಕವಾಗಿದ್ದರೆ ಸಾಕು."

ಸ್ತಬ್ಧನಾಗಿ ಕುಳಿತ ಮೇಥಾ ಮಾತನಾಡಲಿಲ್ಲ. ಅವರಿದ್ದಲ್ಲಿಗೆ ಬಂದ ಲಲಿತಮ್ಮನನ್ನು ನೋಡಿ

"ತಂಗೀ, ನಿನ್ನ ಗಂಡನಿಗೆ ಸ್ವಲ್ಪವೂ ವಿವೇಕವಿಲ್ಲ"

ಎಂದು ಹೇಳಿದವನೇ ಒಳಗೆ ಎದ್ದು ಹೋದ.

ಲಲಿತಮ್ಮ ಗಾಬರಿಯಾಗಿ

"ಏನಾಯಿತು? ಮೇಥಾಜಿ ನೀವೂ ಜಗಳ ಕಾದಿರಾ" ಎಂದು ಕೇಳಿದಳು.

"ಅವನಿಗೂ ನನಗೂ ಪ್ರೇಮಕಲಹ ಇದ್ದದ್ದೇ ಅಲ್ಲವೇ ?" ಎಂದ.

'ವಿದ್ಯಾಭವನ'ದ ಸಭಾಮಂದಿರದಲ್ಲಿ ಚಿತ್ರಗಳನ್ನು ತೂಗುಹಾಕುವ ಕೆಲಸ ಮೇಥನೇ ನಿರ್ವಹಿಸಬೇಕಾಯಿತು.

ಮೂರು ದಿವಸ ಸತತವಾಗಿ ನಡೆದ ಪ್ರದರ್ಶನ ಅಭೂತಪೂರ್ವ ಯಶಸ್ಸು ಗಳಿಸಿತು. ಮುಂಬಯಿ ಪತ್ರಿಕೆಗಳು ಮೇಥನ ಚಿತ್ರಗಳ ಪ್ರತಿಗಳನ್ನು ಪ್ರಕಟಿ ಸಿದುದಲ್ಲದೆ, ಮೂರ್ತಿಯ ಭಾಷಣಗಳಿಗೆ ಪ್ರಾಶಸ್ತ್ಯಕೊಟ್ಟು ಪೂರ್ಣವರದಿ ಗಳನ್ನು ಪ್ರಕಟಿಸಿದರು.

ತನ್ನ ಭಾಷಣಗಳ ವರದಿಗಳನ್ನೋದುತ್ತಾ ಮೂರ್ತಿ

"ನೀನು ನನ್ನಮೇಲೆ ದೊಡ್ಡ ಭಾರ ಹೊರೆಸಿಬಿಟ್ಟೆ ಮೇಥಾ" ಎಂದ.

"ನಾನು ಭಾರಹೊರೆಸಿರುವೆನೇ ?"

"ಹೌದು-ನಿನ್ನ ಚಿತ್ರಗಳು ನನ್ನ ಭಾವಗಳನ್ನು ಪ್ರಚೋದಿಸಿವೆ. ಗೀತೆಯಲ್ಲಿ ಎಷ್ಟು ವಿಚಾರ, ಭಾವ, ತತ್ವ ಅಡಕವಾಗಿದೆಯೆಂಬ ಕಲ್ಪನೆಯೇ ನನಗಿರಲಿಲ್ಲ. ತಿಲಕರು, ಅರವಿಂದರು, ಗಾಂಧೀಜಿ, ರಾಧಾಕೃಷ್ಣನ್, ಸಾನೆ ಗುರೂಜಿ ಬರೆದಿರುವ ಗೀತಾವ್ಯಾಖ್ಯಾನಗಳನ್ನು ಓದಿದಮೇಲೆ 'ನಾನು ಹೇಳತಕ್ಕದ್ದೇನಿದೆ?' ಎಂಬ ಭಾವನೆ ನನ್ನಲ್ಲಿ ಹುಟ್ಟಿತು. ಈಗ ಆ ಭಾವನೆ ಹೋಯಿತು. ಅನುಭವವೇದವಾದ ಗೀತಾಗ್ರಂಥವನ್ನು ಅಭ್ಯಾಸ ಮಾಡಿದವರೆಲ್ಲಾ ನಾಲ್ಕು ಹೊಸಮಾತು ಹೇಳಲು ಸಾಧ್ಯವೆನಿಸಿದೆ."

"ಗೀತೆಯಮೇಲೆ ನೀನು ಸವಿಸ್ತಾರವಾಗಿ ಬರೆಯಬೇಕು—ಆ ಗ್ರಂಥ ನಿನ್ನ ಸಾಹಿತ್ಯಸೇವೆಯ ಕಳಶವಾಗಿ ನಿನ್ನ ಮ್ಯಾಗ್ನಮ್ ಓಪಸ್ (Magnum opus=ಮಹಾಗ್ರಂಥ) ಆಗಬೇಕು. ನನ್ನ ಚಿತ್ರಸಂಗ್ರಹದ ಉಪಸ್ತಂಬಕವಾಗಿ ನಿನ್ನ ಗ್ರಂಥ ಬಂದರೆ ಚೆನ್ನು."

"ಆತುರಾತುರದಿಂದ ಈ ಕೆಲಸ ಕೈಗೊಳ್ಳಲು ನನ್ನ ಮನಸ್ಸು ಒಪ್ಪುವುದಿಲ್ಲ. ಆದರೆ ನಿನಗಿಷ್ಟು ಹೇಳಬಲ್ಲೆ-ನನ್ನ ಜೀವಾವಧಿಯೊಳಗೆ ಈ ಗ್ರಂಥ ಬರೆಯುತ್ತೇನೆ."

"ಜೀವಾವಧಿಯ ಮಾತನ್ನೇಕೆ ಪದೇಪದೇ ಆಡುತ್ತಿರುವೆ ಪ್ರಸಾದ್?"

"ನನ್ನ ಹೃದಯಬಿಚ್ಚಿ ಯಾರಲ್ಲಿಯಾದರೂ ಹೇಳಿಕೊಳ್ಳದಿದ್ದರೆ ನನಗೆ ಸಮಾಧಾನವೆಲ್ಲಿಯದು? ಲಲಿತನಲ್ಲಿ ಈ ವಿಷಯವೆತ್ತಲು ಸಾಧ್ಯವಿಲ್ಲ. ನನ್ನ ಹೃದ್ರೋಗದಲ್ಲಿ ಏನೋ ಸಂಕೇತವಿದೆ—ಉದ್ದಿಷ್ಟ ಕೆಲಸಕಾರ್ಯಗಳನ್ನು ಬೇಗ ಮುಗಿಸಿಕೊಳ್ಳಲು ಭಗವತಿ ಆಜ್ಞೆಮಾಡಿದ್ದಾಳೆ. ನನ್ನ ಬಾಳು ಕಷ್ಟ—ಕಾರ್ಪಣ್ಯಗಳಿಂದ ಕೂಡಿದ್ದರೂ ಅಪೂರ್ವ ಆನಂದವನ್ನು ಅನುಭವಿಸಿದೆ. ನಿಮ್ಮ ಜತೆ ನಾನೀಗ ಕಳೆದಿರುವ ಆರು ವಾರಗಳ ದಿವ್ಯಾನುಭವ ಎಂದಿಗೂ ಅಳಸಿಹೋಗುತಕ್ಕುದಲ್ಲ. ಬಾಳು ತುಂಬಿಕೊಡದ ಸೌಖ್ಯವನ್ನು ಸಾವು ತುಂಬಿಕೊಡಲೆಂದು ನಾನು ಹಾರೈಸುತ್ತೇನೆ. ಹಿಂದೆ ರೋಮಕರು (Romans) ಸೊಗಸಾದ ಔತಣವಿತ್ತು, ತಮ್ಮ ಇಷ್ಟಮಿತ್ರರ ಸಮ್ಮುಖದಲ್ಲಿ ನರವಿಚ್ಛೇದನ ಮಾಡಿಸಿಕೊಂಡು ಪ್ರಾಣಬಿಡುತ್ತಿದ್ದರಂತೆ. ನಾನು ಬಯಸುವುದೂ ಅಂತಹ ಸಾವನ್ನೇ! ಮೃತ್ಯುಲೋಕ ತಾಯಿಮನೆಯಿದ್ದಂತೆ. ಅಲ್ಲಿಗೆ ಹೋಗುವವನು ಔತಣಮಾಡಿಸಿಕೊಂಡು, ನಗುನಗುತ್ತಾ ಸಂತೋಷವಾಗಿ ಹೋಗಬೇಕು."

"ನೀನು ಹೀಗೆ ಮಾತನಾಡುವುದನ್ನು ನಾನು ಕೇಳಲಾರೆ ಪ್ರಸಾದ್"

ಎಂದು ಮೇಥಾ ದುಃಖಿತನಾದ.

ಸೋಮವಾರ ಬೆಳಿಗ್ಗೆ ಮೂರ್ತಿ, ಲಲಿತ ಹೊರಡುವುದು ನಿಶ್ಚಯವಾಯಿತು.

"ರೈಲು ಪ್ರಯಾಣ ಬೇಡ--ವೃಥಾ ಆಯಾಸವಾಗುತ್ತದೆ—ಪ್ಲೇನಿನಲ್ಲಿ ಹೋಗಿ"

ಎಂದು ಸೆಲೀನ್ ಸಲಹೆಯಿತ್ತಳು.

ಪ್ಲೇನಿನಲ್ಲಿ ಹೊರಟುನಿಂತ ಮೂರ್ತಿ, ಲಲಿತನನ್ನು ಬೀಳ್ಕೊಡಲು ಸೆಲೀನ್, ಮೇಥಾ, ಸರ್ದಾರ್, ನಿರ್ಮಲೆಯಿಲ್ಲದೆ ಸೆಂಚುರಿ ಗೆಳೆಯರೂ ಬಂದಿದ್ದರು.

'ಪ್ರಯಾಣಿಕರು ಗಾಡಿ ಹತ್ತಬೇಕು' ಎಂಬ ಆಜ್ಞೆ ಧ್ವನಿವರ್ಧಕಯಂತ್ರದಿಂದ ಬಂದ ಕೂಡಲೆ, ಮೂರ್ತಿ, ಲಲಿತ ಎಲ್ಲರಿಗೂ ನಮಸ್ಕರಿಸಿ, ಗಾಡಿ ಹತ್ತಿದರು.

ಬೀಳ್ಕೊಡಲು ಬಂದಿದ್ದವರು ಏರ್‌ಪೋರ್ಟಿನಲ್ಲಿ ನಿಂತೇ ಇದ್ದರು.

ಪ್ಲೇನ್ ಗಗನಮಾರ್ಗದಲ್ಲಿ ಬೆಂಗಳೂರಿನ ಕಡೆ ಹೊರಟಿತು.

ಮೂರ್ತಿ ಪ್ರಯಾಣಮಾಡುತ್ತಿದ್ದ,

ಎಲ್ಲಿಗೆ ? ಎಲ್ಲಿಗೆ ?? ಎಲ್ಲಿಗೆ ??? ಎನ್ನುವ ಪ್ರಶ್ನೆಗೆ ಉತ್ತರಮಾತ್ರ ದೊರೆಯಲಿಲ್ಲ.

## ೨೭

ಮೂರ್ತಿ, ಲಲಿತಮ್ಮನಿಗೆ ಸ್ವಾಗತ ಬಯಸಲು ಏರೋಡ್ರೋಮಿಗೆ ಬಂದಿದ್ದ ಗುಂಡಣ್ಣ, ವಿಶ್ವೇಶ್ವರಯ್ಯ ಮೂರ್ತಿಯ ಮುಖ ಕಳೆಗೊಂಡಿದ್ದುದನ್ನು ಕಂಡು ಹರ್ಷಿಸಿದರು.

ಗುಂಡಣ್ಣ ಊರಿನ ಸುದ್ದಿಯನ್ನೆಲ್ಲಾ ತಿಳಿಸಿ

"ಗಣೇಶರು ಪತ್ರಿಕೆ ಆರಂಭಿಸಲು ಎಲ್ಲಾ ವ್ಯವಸ್ಥೆಮಾಡಿಕೊಂಡು ನಿನ್ನ ದಾರಿನೋಡುತ್ತಿದ್ದಾರೆ" ಎಂದು ಹೇಳಿದ.

ಮನೆಗೆ ಬಂದುಕುಳಿತಮೇಲೆ ಮೂರ್ತಿ

"ಸಾಹಿತ್ಯವಿಮರ್ಶೆಯ ಗತಿ ಏನಾಯಿತು ವಿಶ್ವೇಶ್ವರಯ್ಯ" ಎಂದು ಕೇಳಿದ.

"ನಾವು ಯೋಚಿಸಿದಂತೆ ಪುಸ್ತಕ ಕೈಕಚ್ಚಲಿಲ್ಲ ಸಾರ್—ನಾನೂರು ಪ್ರತಿಗಳು ಮಾರಾಟವಾಗಿವೆ."

"ಅದು ನಿಜವಾಗಿಯೂ ಸಂತೋಷಪ್ರದವಾದ ಸುದ್ದಿ. ನಿಮ್ಮ ಹೊಸ ಮೆಷೀನ್ ಸರಿಯಾಗಿ ಕೆಲಸಮಾಡುತ್ತಿದೆಯೇ ?"

"ಸೊಗಸಾಗಿ ಕೆಲಸಮಾಡುತ್ತಿದೆ. ನಿಮ್ಮಿಂದ ತುಂಬ ಉಪಕಾರ ವಾಯಿತು ಸಾರ್."

"ಮುಂಬಯಿ ಸಮಾಚಾರವೇನು ಮೂರ್ತಿ."

"ಮುಂಬಯಿ ಸಮಾಚಾರವನ್ನೆಲ್ಲಾ ಕೂಲಂಕಷವಾಗಿ ನಿನಗೆ ವರದಿ ಮಾಡಲು ಒಂದುವಾರ ಬೇಕು—ಮುಖ್ಯವಾದ ವಿಷಯವೆಂದರೆ ನಿರ್ಮಲಾ, ಸರ್ದಾರರ ವಿವಾಹ ಸಾಂಗವಾಗಿ ನೆರವೇರಿತು."

"ಒಳ್ಳೆಯ ಕೆಲಸಮಾಡಿ ನೀನೂ ಲಲಿತಕ್ಕ ಪುಣ್ಯಕಟ್ಟಿಕೊಂಡಿರಿ—ನಿನ್ನ ಗೀತೋಪನ್ಯಾಸಗಳ ವರದಿ ಓದಿದೆ."

"ಅದರಲ್ಲಿ ನನ್ನದೇನೂ ಇಲ್ಲ—ಎಲ್ಲಾ ಕೀರ್ತಿ ಮೇಥನ ಚಿತ್ರಗಳಿಗೆ ಸಲ್ಲಬೇಕು."

"ನೀನು ಕುಂಭಲಗ್ನದಲ್ಲಿ ಹುಟ್ಟಬೇಕಾಗಿತ್ತು ಮೂರ್ತಿ."

"ಏಕಪ್ಪಾ—ಅದರಲ್ಲಿ ಏನು ವಿಶೇಷ ?"

"ನಿನ್ನ ವಿಷಯವೆಲ್ಲಾ ಗುಂಭ—ನಿನ್ನ ಗೀತಾವ್ಯಾಖ್ಯಾನ ಸಂಪ್ರದಾಯ ವಾದಿಗಳಿಗೆ ಪ್ರಿಯವಾಗುವುದೆಂದು ಹೇಳಲಾರೆ–ಆದರೆ ಅದರಲ್ಲಿ ಹೊಸ ವಿಚಾರ ಗಳು ಅಡಕವಾಗಿವೆ."

"ಗೀತೆಯ ಸಂಪ್ರದಾಯವನ್ನು ನಾನು ಒಪ್ಪಿಕೊಂಡರೂ, ಸಂಪ್ರದಾಯ ಪ್ರಿಯರ ವ್ಯಾಖ್ಯಾನ ಒಪ್ಪಿಕೊಳ್ಳಲಾರೆ. ಶ್ರೀಕೃಷ್ಣ ಉಪಯೋಗಿಸಿರುವ 'ಕರ್ಮ'ಶಬ್ದಕ್ಕೆ ನಮ್ಮ ಸಂಪ್ರದಾಯಪ್ರಿಯರು 'ನಿತ್ಯನೈಮಿತ್ತಿಕಕರ್ಮ' ಎಂದು ಅರ್ಥಮಾಡುತ್ತಾರೆ; 'ಜ್ಞಾನ'ಕ್ಕೆ 'ತಿಳುವಳಿಕೆ' ಎನ್ನುತ್ತಾರೆ; 'ಸ್ವಧರ್ಮ' ಶಬ್ದಕ್ಕೆ 'ಸ್ವಸಂಪ್ರದಾಯ' ಎನ್ನುವ ಅರ್ಥಕೊಡುತ್ತಾರೆ. ಇದು ನನ್ನ ದೃಷ್ಟಿಯಲ್ಲಿ ಗೀತೆಯ ಅಪಾರ್ಥವೇ ವಿನಾ ಅರ್ಥವಲ್ಲ."

"ಅನರ್ಥ. ಭಾಷಣಮಾಡಿಮುಗಿಸಿದರೆ ಸಾಲದು ಮೂರ್ತಿ—ನಿನ್ನ ವಿಚಾರಗಳನ್ನೆಲ್ಲಾ ಕ್ರೋಢೀಕರಿಸಿ ಗ್ರಂಥ ಬರೆಯಬೇಕು."

"ಮೇಥನೂ ಇದೇ ಸಲಹೆಕೊಟ್ಟಿದ್ದಾನೆ."

"ಸಾರ್, ಮೊದಲು ನನಗೊಂದು ಕಾದಂಬರಿ ಮುಗಿಸಿಕೊಡಿ"

ಎಂದು ವಿಶ್ವೇಶ್ವರಯ್ಯ ಕೇಳಿದ.

"ಹಾಗೇ ಆಗಲಿ ವಿಶ್ವೇಶ್ವರಯ್ಯ. ಗೀತೆಯ ಬಗ್ಗೆ ನಾನು ಇನ್ನೂ ಅಭ್ಯಾಸಮಾಡಬೇಕಾಗಿದೆ. ಅದನ್ನೀಗಲೇ ಆರಂಭಿಸುವುದಿಲ್ಲ."

ಲಲಿತಮ್ಮ ತಂದುಕೊಟ್ಟ ಕಾಫಿಲೋಟಾ ಕೈಗೆ ತೆಗೆದುಕೊಂಡು ಗುಂಡಣ್ಣ

"ಗಂಡಹೆಂಡತಿ ಕೊನೆಗೂ ಮುಂಬಯಿ ಬಿಟ್ಟಿರಲ್ಲಾ !" ಎಂದ.

"ನಾವು ಬರುವುದೇ ಇಲ್ಲವೆಂದು ತಿಳಿದುಕೊಂಡೆಯಾ ?"

"ಖಂಡಿತವಾಗಿ. ಈ ಪುಣ್ಯಾತ್ಮ ಯಾವದಾದರೂ ಊರಿಗೆ ಹೋದರೆ ಅಲ್ಲೇ ಅದೃಶ್ಯನಾಗಿಬಿಡುತ್ತಾನೆ."

"ನಾನೇನು ಅಷ್ಟು ಬೇಜವಾಬ್ದಾರಿ ಮನುಷ್ಯನೇನಯ್ಯ !"

"ಕವಿಗೆ ಜವಾಬ್ದಾರಿ, ಬೇಜವಾಬ್ದಾರಿ ಎಲ್ಲಿಂದ ಬಂತು ಮೂರ್ತಿ. ಅವನು ಕಟ್ಟುವ ಊಹಾಪ್ರಪಂಚಕ್ಕೆ ಅವನೇ ದೊರೆ—ಅವನೇ ಮಂತ್ರಿ—ಅವನೇ ಸೇವಕ."

"ಸದಾರಮೆ ನಾಟಕದ 'ಆದಿಮೂರ್ತಿ' ಹಾಗೆನ್ನು !"

ಗುಂಡಣ್ಣ ನಕ್ಕು

"ಹೋಗಯ್ಯಾ—ಏನೇನೋ ಅರ್ಥಮಾಡುತ್ತೀ."

"ಸುತರಾಮಯ್ಯ ನಿಮ್ಮನ್ನು ಕಾಣಲು ತವಕಪಡುತ್ತಿದ್ದಾನೆ ಸಾರ್" ಎಂದು ವಿಶ್ವೇಶ್ವರಯ್ಯ ತಿಳಿಸಿದ.

"ಏಕೆ ವಿಶ್ವೇಶ್ವರಯ್ಯ ?"

"ಏಕೋ ಕಾಣೆ—ಪ್ರೆಸ್ಸಿಗೆ ಎಂಟುಹತ್ತು ಸಲ ಬಂದಿದ್ದ. ಹೊಸ ಕಾದಂಬರಿ ಕೊಡುತ್ತೇನೆ ಇನ್ನೂರು ರೂಪಾಯಿ ಅಡ್ವಾನ್ಸ್‌ಕೊಡಿ ಎಂದು ಕೇಳಿದ. ಮೂರ್ತಿಯವರು ಬರಲಿ—ವಿಚಾರಿಸಿ ತಿಳಿಸುತ್ತೇನೆ ಎಂದು ನಾನು ಹೇಳಿದೆ."

"ಸರಿಸರಿ ! ಈಗರ್ಥವಾಯಿತು....ಜನಪದಸಾಹಿತ್ಯದ ಪ್ರಕಟನೆಗಳೇನು ಹೊರಬಿದ್ದವು ?"

"ಹುನಗುಂದನ 'ಪೇಜಿನಪೇದೆ' — ಮನೋರಮಾದೇವಿಯ 'ಕಣ್ಣಲ್ಲಿ ಕಣ್ಣು' ಎರಡು ಹೊರಬಿದ್ದವಲ್ಲಾ !"

"'ಕಣ್ಣಲ್ಲಿ ಕಣ್ಣು' ಹೇಗಿದೆ""

"ಪರವಾಗಿಲ್ಲ — ಒಂದುಸಲ ಓದಬಹುದು. ಈ ಹೆಣ್ಣುಮಗಳು ಲೆಕ್ಕಾಚಾರವಾಗಿ ಇಂಗ್ಲಿಷ್ ಕಾದಂಬರಿಯೊಂದನ್ನು ಲಪ್ಟಾಯಿಸುತ್ತಾಳೆ ಸಾರ್. ಮುನ್ನುಡಿಯಲ್ಲಿ ಹುನಗುಂದ ಈ ಕಾದಂಬರಿಯನ್ನು ಹೊಗಳುತ್ತಾ 'ಕಣ್ಣಲ್ಲಿ ಕಣ್ಣು' ಮನೋವೈಜ್ಞಾನಿಕ ಕಾದಂಬರಿ-ಫ್ರಾಯ್ಡನ (Freud) ತತ್ವಗಳನ್ನು ಚೆನ್ನಾಗಿ ಮನನಮಾಡಿಕೊಂಡು ಕನ್ನಡ ಕಾದಂಬರಿಯಲ್ಲಿ, ಅದನ್ನು ಪ್ರತಿಬಿಂಬಿಸಿರುವ ಹೆಚ್ಚುಗಾರಿಕೆ ಮನೋರಮಾದೇವಿಯದು ಎಂದಿದ್ದಾನೆ."

ಗುಂಡಣ್ಣ ಗಡ್ಡ ಕೆರೆದುಕೊಳ್ಳುತ್ತ

"ಈ 'ಮನೋವೈಜ್ಞಾನಿಕ' ಶಬ್ದವನ್ನು ಈಚಿನ ಕೆಲವು ಲೇಖಕರು-

ಮುಖ್ಯವಾಗಿ ನಿನ್ನ ಪ್ರಿಯಶಿಷ್ಯ ಸುತರಾಮಯ್ಯ, ಹುನಗುಂದನ ಪ್ರಿಯಶಿಷ್ಯೆ ಮನೋರಮಾದೇವಿ ಬಹಳ ಬಳಸುತ್ತಿದ್ದಾರೆ. ಹಾಗೆಂದರೇನು ಮೂರ್ತಿ."

"ನಾನು ಹೇಳಲೇ ಗುಂಡಣ್ಣನವರೇ ?"

ಎಂದು ವಿಶ್ವೇಶ್ವರಯ್ಯ ಕೇಳಿದ.

"ಹೇಳಿ."

"ಪುಟ ಬೆಳಸುವುದು ಎಂದರ್ಥ. ಕಾದಂಬರಿ ಮುನ್ನೂರು ಪುಟವಿರಬೇಕೆಂಬ ಶ್ರಾದ್ಧನಿಯಮ ಈಗ ಚಲಾವಣೆಗೆ ಬಂದಿದೆ. ಮೂರ್ತಿಯವರು ಮುನ್ನೂರುಪುಟ, ಆರುನೂರುಪುಟ ಬರೆಯುತ್ತಾರೆಂದು ಎಲ್ಲರೂ ಬರೆಯುವುದಕ್ಕೆ ಹೊರಟಿದ್ದಾರೆ. ಅವರೇನು ಬರೆಯಬೇಕು–ಐವತ್ತು ನೂರು ಪುಟಗಳಲ್ಲಿ ಕಥಾವಸ್ತು ಮುಗಿದುಹೋಗುತ್ತದೆ. ಮುಂದೆ ಗತಿ ? ಮನೋವಿಜ್ಞಾನ !! 'ಅವಳು ಎದ್ದಳು–ಏಕೆ ಎದ್ದಳು....ಏಳುವುದಕ್ಕೇನು ಕಾರಣ– ಹದಿನೈದುಪುಟ ಮನೋವಿಜ್ಞಾನ; 'ಅವನು ಸಿಗರೇಟ್ ಹಚ್ಚಿದ'–ಕಾರಣವೇನು–ಇಪ್ಪತ್ತು ಪುಟ ಮನೋವಿಜ್ಞಾನ; 'ನಾಯಿ ಬಾಲ ಅಲ್ಲಾಡಿಸಿತು'–ಏಕೆ ?—ಮೂವತ್ತು ಪುಟ ನಾಯಿಯ ಮನೋವಿಜ್ಞಾನ. ಹೀಗೆ ಇಟ್ಟಿಗೆ ಪೇರಿಸುತ್ತಾ ಬಂದರಲ್ಲವೇ ಕಾದಂಬರಿಯ ಕಟ್ಟಡ ಮುಗಿಯುವುದು."

ಮೂರ್ತಿ, ಗುಂಡಣ್ಣ, ಲಲಿತಮ್ಮ ಬಿದ್ದು ಬಿದ್ದು ನಕ್ಕರು.

"ವಿಶ್ವೇಶ್ವರಯ್ಯನವರು ಮುದ್ರಕರಾದುದು ವಿಮರ್ಶಾಲೋಕಕ್ಕೆ ಬಹಳ ನಷ್ಟವಾಯಿತು" ಎಂದ ಗುಂಡಣ್ಣ.

"ಮನೋವಿಜ್ಞಾನಕ್ಕೆ ಅವರು ಕೊಟ್ಟ ವ್ಯಾಖ್ಯಾನವನ್ನೇ ಎಲ್ಲಾ ಶಬ್ದಗಳಿಗೂ ಕೊಡುತ್ತಾ ಹೋಗಿದ್ದರೆ ಎಷ್ಟು ಖೂನಿ ಮೊಕದ್ದಮೆಗಳಾಗುತ್ತಿದ್ದವೋ ?"

"ಮನೋವೈಜ್ಞಾನಿಕ ಕಾದಂಬರಿ ಎನ್ನುವ ಪ್ರಯೋಗದಲ್ಲಿಯೇ ದ್ವಿರುಕ್ತಿ ದೋಷವಿದೆ ಗುಂಡಣ್ಣ. ಸರಸಕಾದಂಬರಿ—ಪಾತ್ರಪ್ರಧಾನ ಕಾದಂಬರಿ— ಎನ್ನುವಷ್ಟೇ ಹಾಸ್ಯಾಸ್ಪದ ಈ ಪ್ರಯೋಗ ಕೂಡ. ಒಂದು ಕಾದಂಬರಿಯಲ್ಲಿ ಪಾತ್ರಸೃಷ್ಟಿ, ಸಂವಿಧಾನ, ವಾತಾವರಣಗಳಿರಬೇಕಾದಂತೆ ಮನೋವಿಜ್ಞಾನವೂ ಇರಲೇಬೇಕು. ಮಾನವನ ಪ್ರತಿಯೊಂದು ಕ್ರಿಯೆಯೂ ಜ್ಞಾತಾಜ್ಞಾತವಾಗಿ ಮನಸ್ಸಿನಿಂದಲೇ ಪ್ರೇರೇಪಿತವಾದುದಾಗಿರುತ್ತದೆ. ಜಾಯ್ಸ್,

ಡಿ. ಎಚ್. ಲಾರೆನ್ಸ್, ಕಾಫ್ಕಾ ಮೊದಲಾದ ಲೇಖಕರು ಸುಪ್ತ ಮನೋಭಾವವನ್ನು ಬಿಡಿಸಿಡುತ್ತಾರೆ. ಇದರಿಂದ ಕೆಲವುಸಲ ಕಾದಂಬರಿ ತನ್ನ ಕಲಾಸ್ವರೂಪವನ್ನು ಕಳೆದುಕೊಂಡು ವೈಜ್ಞಾನಿಕ ಪ್ರಬಂಧವಾಗುವುದೂ ಉಂಟು. ಕಥಾವಸ್ತು, ವಸ್ತುವಿನ ಹಿಂದಣ ಮನೋಭಾವ ಎರಡೂ ಹಾಸುಹೊಕ್ಕಾಗಿ ಹೊಂದಿಕೊಂಡರೇ ಕಾದಂಬರಿಯ ಕಲಾಪಾಕ ಪಕ್ವವಾಗುತ್ತದೆ. ಅತ್ಯಂತ ಪ್ರತಿಭಾಶಾಲಿಯಾದ ಕಾದಂಬರಿಕಾರ ಒಮ್ಮೊಮ್ಮೆ ಕೇವಲ ಮನೋವಿಶ್ಲೇಷಣೆಯಿಂದಲೇ ಕಲಾಸೌಧವನ್ನೂ ಕಟ್ಟುತ್ತಾನೆ. ದೃಷ್ಟಾಂತಕ್ಕೆ ಡಾಸ್ಟೊವಸ್ಕಿಯ 'ಬ್ರದರ್ಸ್ ಕಾರ್ಮಜಾವ್' (Brothers Karmazov) ಆರ್ಥರ್ ಕೋಸ್ಲರನ 'ಡಾರ್ಕ್‌ನೆಸ್ ಎಟ್ ನೂನ್' (Darkness at noon) ಕಾದಂಬರಿಗಳನ್ನು ನೋಡಬಹುದು. ಕೆಲವು ವೇಳೆ ಕುಶಲ ಕಲಾವಿದನಾದ ಕಾದಂಬರಿಕಾರ ತಾನು ಮನೋವಿಶ್ಲೇಷಕನಾಗಿರುವುದನ್ನು ಮುಚ್ಚಿಟ್ಟು ತನ್ನ ಕೃತಿಯುದ್ದಕ್ಕೂ ಮನೋವಿಶ್ಲೇಷಣೆಮಾಡುತ್ತ ಹೋಗುತ್ತಾನೆ. ದೃಷ್ಟಾಂತಕ್ಕೆ ಸ್ಟೆಂಢಾಲನ 'ಬ್ಲಾಕ್ ಅಂಡ್ ರೆಡ್' (Black and red) ಬಾಲಜಾಕನ 'ಯ್ಯೂಜಿನ್ ಗ್ರ್ಯಾಂಡೇ' (Eugenie Grandet) ಜೋಲನ 'ಷೇಮ್-ಮಾಸ್ಟರ್‌ಪೀಸ್' (Shame and Masterpiece) ಕಾದಂಬರಿಗಳನ್ನು ನೋಡಬಹುದು."

"ನೀನು ಹೇಳಿದ ಯಾವ ಗುಂಪಿಗೆ ಮನೋರಮಾದೇವಿ ಸೇರಬಹುದು."

"ಸದ್ಯ ಸುಮ್ಮನಿರಿ ಗುಂಡಣ್ಣನವರೇ-'ಅಟ್ಟಕ್ಕೆ ಹಾರದ ಬಡ್ಡಿ ಬೆಟ್ಟಕ್ಕೆ ಹಾರುತ್ತಾಳೆಯೇ ?' ಅಂದಹಾಗೆ—ಮನೋರಮಾ ಮೊದಲು ಸರಿಯಾಗಿ ಪಂಕ್ತಿಗಳನ್ನು ಜೋಡಿಸುವುದನ್ನು ಕಲಿಯಲಿ, ತರುವಾಯ ಕಾದಂಬರಿ, ಮನೋವೈಜ್ಞಾನಿಕ ಕಾದಂಬರಿಯ ಮಾತು."

"ವಿಶ್ವೇಶ್ವರಯ್ಯನವರೇಕೋ ಮನೋರಮಾದೇವಿಯ ಮೇಲೆ ತುಂಬ ಸಿಟ್ಟಾಗಿದ್ದಾರೆ."

"ಸಿಟ್ಟಲ್ಲ ಸಾರ್—ಸಾಹಿತ್ಯವೆಂದರೆ ಇವರಿಗೆಲ್ಲಾ ಹುಡುಗಾಟವಾಗಿ ಹೋಯಿತು. ಪಾಪ! ಕಾಳಿದಾಸ ತನ್ನ ಜೀವಮಾನವೆಲ್ಲಾ ಹೆಣಗಿ ಏಳು ಕೃತಿ ರಚಿಸಿದನಂತೆ. ನಮ್ಮ ಹುನಗುಂದ, ಸುತರಾಮಯ್ಯ, ಮನೋರಮಾ ತಿಂಗಳಿಗೊಂದು ಕೃತಿ ರಚಿಸುತ್ತಾರೆ. ಕಂಡವರ ಕೃತಿಯನ್ನು ಇವರು 'ಲಪ್ಟಾಯಿಸುವುದು' ನಿಲ್ಲಿಸಬೇಕು ಸಾರ್."

"ಅದಕ್ಕೇನು ಶಾಸನಮಾಡುವುದಕ್ಕಾಗುತ್ತದೆಯೇ ?"

"ನೀವೋ ಗುಂಡಣ್ಣನವರೊ ಯಾರಾದರೂ ತಿಂಗಳು ತಿಂಗಳೂ ಸಾಹಿತ್ಯ ಸಮಾವಲೋಕನ ನಡೆಸಿ ಇಂಥ ಪ್ರಾರಬ್ಧಗಳನ್ನು ಬಯಲಿಗೆಳೆಯಬೇಕು."

"ನಾನು ನಿಮಗೇನು ಅನ್ಯಾಯಮಾಡಿದ್ದೇನೆ ವಿಶ್ವೇಶ್ವರಯ್ಯ ?"

"ಅನ್ಯಾಯ ?"

"ನನ್ನನ್ನೇಕೆ ಈ ಊರುಬಿಟ್ಟು ಹೊರಗೆ ಹಾಕಲು ಪ್ರಯತ್ನಿಸುತ್ತಿರುವಿರಿ."

ವಿಶ್ವೇಶ್ವರಯ್ಯ ನಕ್ಕು ಸುಮ್ಮನಾದ.

"ನೀನು ಊರಿಗೆ ಬಂದ ದಿನವೇ ಇಲ್ಲದ ಕಾಷ್ಠಾವ್ಯಸನ ಗಂಟುಬಿತ್ತು. ನಿನಗೆ ಆಯಾಸವಾಗಿದೆಯೆನ್ನುವುದನ್ನೂ ನಾವು ಮರೆತುಬಿಟ್ಟೆವು."

"ಏನೂ ಆಯಾಸವಾಗಿಲ್ಲ ಗುಂಡಾ. ಪ್ಲೇನ್ ಟ್ರ್ಯಾವಲ್ (Plane Travel) ಇಷ್ಟು ಸುಖವಾಗಿರುತ್ತದೆಯೆಂಬ ಕಲ್ಪನೆಯೇ ನನಗಿರಲಿಲ್ಲ. ಆ ಎತ್ತರದಲ್ಲಿ ಪ್ಲೇನ್ ಹೋಗುತ್ತಿದ್ದರೆ ಮನಸ್ಸಿಗೆ ದಿವ್ಯಾನಂದವಾಗುತ್ತದೆ. ಭಗವಂತನ ಸಮೀಪ ಹೋಗುತ್ತಿದ್ದೇನೆಂಬ ಭಾವನೆಯುಂಟಾಗುತ್ತದೆ."

"ಸಂದೇಹವೇ ಇಲ್ಲ—ಪ್ಲೇನ್ ಮುರಿದು ಬಿದ್ದರೆ, ಭಗವಂತನ ವಕ್ಷಸ್ಥಲದಲ್ಲಿಯೇ ಪ್ರಯಾಣಿಕರು ಹೋಗಿಬೀಳುವುದು"

ಎಂದು ಟೀಕಿಸಿ ಗುಂಡಣ್ಣ ಮೇಲಕ್ಕೆದ್ದ.

"ಬೆಳಿಗ್ಗೆ ಬಂದು ಕಾಣುತ್ತೇನೆ ಸಾರ್"

ಎಂದು ವಿಶ್ವೇಶ್ವರಯ್ಯ ಹೇಳಿದ.

## ೨೮

ತಮ್ಮ ಪತ್ರಿಕೆಯ ವಿಷಯವನ್ನೆಲ್ಲಾ ನಿರ್ಧರಿಸಿಕೊಂಡೇ ಗಣೇಶ ಮೂರ್ತಿಯನ್ನು ಕಾಣಲು ಬಂದರು. ಪತ್ರಿಕೆಗಾಗಿ ಒಂದು ಸಣ್ಣ ಪ್ರೆಸ್ ತೆಗೆದುಕೊಂಡಿರುವ ವಿಷಯ ಪ್ರಸ್ತಾಪಿಸಿ

"ನಿಮ್ಮ ಅಗ್ರಲೇಖನದಿಂದಲೇ ನನ್ನ ಪತ್ರಿಕೆ ಆರಂಭವಾಗಬೇಕು" ಎಂದರು.

"ಪತ್ರಿಕೆಯ ಹೆಸರು ?"

" 'ವಿಚಾರಿ' "

"ಒಮ್ಮೆಲೇ ಎರಡು ಬಿಳಿಯಾನೆಗಳನ್ನು ಕಟ್ಟಿಕೊಂಡಿರಲ್ಲಾ ಗಣೇಶರೇ ?"

"ಎರಡಲ್ಲ ಸಾರ್—ಮೂರು."

"ಮೂರನೆಯದು ಯಾವದು ?"

"ಬರಲಿರುವ ಮಹಾಚುನಾವಣೆಯಲ್ಲಿ ಅಭ್ಯರ್ಥಿಯಾಗಿ ನಿಲ್ಲಲು ನಿಶ್ಚಯಿಸಿದ್ದೇನೆ."

"ಇವುಗಳಿಗೆಲ್ಲಾ ವಿಪರೀತ ಹಣ ಬೇಕಲ್ಲಪ್ಪಾ!"

"ಕೆಲವು ಅಭಿಮಾನಿಗಳು ಸಹಾಯಮಾಡಲು ಮುಂದೆ ಬಂದಿದ್ದಾರೆ."

"ನೀವು ಅಭ್ಯರ್ಥಿಗಳಾಗಲು ಪಾರ್ಟಿ ಅನುಮತಿಯಿತ್ತಿದೆಯೇ ?"

"ಸೆಂಟ್ರಲ್ ಕಮಿಟಿಗೆ ಬರೆದಿದ್ದೇನೆ—ನೋಡಬೇಕು."

"ಒಂದುವೇಳೆ ಅವರು ಅನುಮತಿಕೊಡದಿದ್ದರೆ ?"

"ಸ್ವತಂತ್ರ ಉಮೇದುವಾರನಾಗಿ ನಿಲ್ಲುತ್ತೇನೆ."

"ಪಾರ್ಟಿಯಿಂದ ಎಷ್ಟು ಜನಗಳನ್ನು ನಿಲ್ಲಿಸುತ್ತಾರೆ."

"ಮೂರೇ ಜನ."

"ಉಳಿದ ಸ್ಥಾನಗಳಿಗೆ ಅವರೇಕೆ ಸ್ಪರ್ಧಿಸುವುದಿಲ್ಲ."

"ಡಿಪಾಸಿಟ್ ಹಣ ಹಿಂದಿರುಗಿ ಕೈಸೇರುತ್ತದೆಂಬ ನಂಬಿಕೆಯಿಲ್ಲ."

"ಕಾರ್ಮಿಕ ಸಂಘಗಳೆಲ್ಲಾ (Labour unions) ನಿಮ್ಮ ಪಾರ್ಟಿಯ ಕೈಯಲ್ಲೇ ಇವೆಯಲ್ಲಾ !"

"ಯಾರು ಸಾರ್ ಹೇಳಿದರು. ಪಾರ್ಟಿಯ ಕೈಯಲ್ಲಿದ್ದ ಎಂಟು ಸಂಘಗಳಲ್ಲಿ ನಾಲ್ಕನ್ನು ಕಾಂಗ್ರೆಸ್ಸಿನವರು ಆಕ್ರಮಿಸಿಕೊಂಡರು. ಒಂದನ್ನು ಪಿ. ಎಸ್. ಪಿ ಯವರು ಸ್ವಾಹಾಮಾಡಿದರು. ಸದ್ಯಕ್ಕೆ ಪಾರ್ಟಿಯ ಕೈಯಲ್ಲಿರುವುದು ಮೂರೇ ಸಂಘಗಳು."

"ನೀವು ಕಮ್ಯುನಿಸ್ಟ್‌ಪಾರ್ಟಿಯ ಪರವಾಗಿ ನಿಲ್ಲುವುದೇ ನನಗೆ ಒಪ್ಪಿಗೆಯಿಲ್ಲ ಗಣೇಶರೇ—ಅವರಿಗೆ ನೀವು ಬೇಡವಾಗಿದೆ, ನಿಮಗೆ ಅವರು ಬೇಡವಾಗಿದೆ. ಮೈತ್ರಿಯಿಲ್ಲದ ಈ ಕೃತಕ ದಾಂಪತ್ಯದಿಂದೇನು ಸಾರ್ಥಕ."

"ನಾನು ಏನುಮಾಡಬೇಕೆಂದು ಸೂಚಿಸುವಿರಿ ?"

"ಸ್ವತಂತ್ರ ಉಮೇದುವಾರರಾಗಿ ನಿಲ್ಲಿ—ನೀವು ಕಮ್ಯುನಿಸ್ಟ್‌ಪಾರ್ಟಿ ಸದಸ್ಯರಾಗಿ ನಿಂತರೆ ಯಾರೂ ಓಟುಮಾಡುವುದಿಲ್ಲ. ಸ್ವತಂತ್ರರಾಗಿ ನಿಂತರೆ ಜನಬಲ ಸಿಕ್ಕುತ್ತದೆ. ಎಲ್ಲ ಪಾರ್ಟಿಯವರೂ ನಿಮ್ಮನ್ನು ಗೌರವಿಸುತ್ತಾರೆ. 'ಜನಸಂಘ'ದವರಿಗೆ ಕೂಡ ನಿಮ್ಮ ಮೇಲೆ ಆಕ್ರೋಶವಿಲ್ಲ."

"ನೀವು ಹೇಳುವುದು ಅಕ್ಷರಶಃ ಸತ್ಯ ಸಾರ್. 'ಜನಸಂಘ'ದ ಉಮೇದುವಾರರಾಗಿ ನಿಂತಿರುವ ಸತ್ಯಬೋಧಾಚಾರ್ಯರು ಇದೇ ಮಾತು ಹೇಳಿದರು. ನಾನು ಉಮೇದುವಾರಿಕೆಯನ್ನು ಹಿಂದಕ್ಕೆ ತೆಗೆದುಕೊಳ್ಳುವುದಾದರೆ ಎರಡುಸಾವಿರ ರೂಪಾಯಿ ನಗದುಕೊಡುವುದಾಗಿ ತಿಳಿಸಿದರು."

"ನೀವೇನು ಹೇಳಿದಿರಿ ?"

"ಯೋಚನೆಮಾಡಿ ತಿಳಿಸುವುದಾಗಿ ಹೇಳಿದೆ."

"ನಿಮ್ಮ ವಾರ್ಡಿನಿಂದ ಎಷ್ಟು ಜನ ನಿಲ್ಲುತ್ತಾರೆ ?"

"ಎಂಟು ಒಂಭತ್ತು ಜನ—ಕಾಂಗ್ರೆಸ್, ಪಿ.ಎಸ್.ಪಿ, ಜನಸಂಘದ ಮೂವರು ಉಮೇದುವಾರರು, ಕಮ್ಯುನಿಸ್ಟ್‌ಪಾರ್ಟಿಯಿಂದ ನಿಂತರೆ ನಾನು—ನಾಲ್ಕಾಯಿತು ; ಉಳಿದ ನಾಲ್ವರು ಸ್ವತಂತ್ರರು."

"ಸರಿ—ಕಾಂಗ್ರೆಸ್ಸಿಗೆ ಜಯ ಕಟ್ಟಿಟ್ಟ ಮುಡಿಪು-ಎಂದಿಗಾದರೂ ನಿಮಗೆ ಜಯವಾಗಬಹುದೇ ಗಣೇಶರೇ ?"

"ಆ ಭ್ರಮೆಯೇ ಇಲ್ಲ."

"ಸೋಲು ಸ್ವತಃಸ್ಸಿದ್ಧವೆಂದು ತಿಳಿದೂ ವೃಥಾ ಏಕೆ ಹಣಕಳೆದುಕೊಂಡು, ದೇಹಶ್ರಮಪಡುವಿರಿ ?"

"ಎರಡು ಕಾರಣಕ್ಕೆ! ಒಂದು, ಪ್ರತಿಭಟನೆಯೇ ಇಲ್ಲದೆ ಕಾಂಗ್ರೆಸ್ ಜಯಗಳಿಸಿದರೆ ನಾಳೆ ಅದು ಸರ್ವಾಧಿಕಾರಿಯಾಗಿ ದೇಶಕಂಟಕವಾಗುತ್ತದೆ. ಎರಡು, ಜನತೆಯಲ್ಲಿ ನಮ್ಮ ಪಾರ್ಟಿ ಎಷ್ಟರಮಟ್ಟಿನ ಪ್ರೀತಿ ವಿಶ್ವಾಸ ಗಳಿಸಿಕೊಂಡಿದೆಯೆಂಬುದನ್ನು ಗಣಿಸಲು ಇದು ಒಳ್ಳೆಯ ಸನ್ನಿವೇಶ".

"ಸದ್ಯ ನನ್ನಿಂದೇನಾಗಬೇಕು."

"'ವಿಚಾರಿ' ಗೆ ಪ್ರತಿವಾರ ಒಂದು ಲೇಖನ ಬರೆದುಕೊಡಬೇಕು."

"ಆಗಬಹುದು."

"ನನ್ನ ಉಮೇದುವಾರಿಕೆಯನ್ನು ಸಮರ್ಥಿಸಿ ಕೆಲವು ಭಾಷಣಗಳನ್ನು ಮಾಡಬೇಕು."

"ವೈಯಕ್ತಿಕವಾಗಿ ನಿಮಗೆ ಬೆಂಬಲ ನೀಡುತ್ತೇನಲ್ಲದೆ ನಿಮ್ಮ ಪಾರ್ಟಿಗಲ್ಲ. ನನ್ನ ಭಾಷಣಗಳಲ್ಲಿ ನಿಮ್ಮ ಪಾರ್ಟಿಯ ಹೆಸರೆತ್ತುವುದಿಲ್ಲ."

"ಆಗಬಹುದು."

"ಇದರಿಂದ ನಿಮಗೆ ಮುಂದಕ್ಕೆ ಬಹಳ ತೊಂದರೆಯಾಗುತ್ತದೆ."

"ಆದರಾಗಲಿ."

"ಕಾಮತ್, ಹುನಗುಂದ ನಿಮ್ಮ ಮೇಲೆ ವಿಷಕಾರುವುದಕ್ಕೆ ನೀವೇ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ."

"ಏನುಬೇಕಾದರೂ ಆಗಲಿ ಸಾರ್. ನನಗೆ ನಿಮ್ಮ ಸಹಕಾರಬೇಕು."

"ಆ ಬಗ್ಗೆ ನೀವು ಚಿಂತಿಸಬೇಕಾದ ಅಗತ್ಯವೇ ಇಲ್ಲ ಗಣೇಶರೇ."

ಮೂರ್ತಿಯಿತ್ತ ಆಶ್ವಾಸನದಿಂದ ಗಣೇಶರಿಗೆ ತೃಪ್ತಿಯಾಯಿತು

ಮೂರ್ತಿಯ ಅಗ್ರಲೇಖನದೊಂದಿಗೆ 'ವಿಚಾರಿ' ಪತ್ರಿಕೆಯ ಪ್ರಥಮ ಸಂಚಿಕೆಯೂ ಹೊರಟಿತು. ರಾಜಕೀಯ ಪಕ್ಷಗಳ ಧ್ಯೇಯಧೋರಣೆಯನ್ನು ವಿಮರ್ಶಿಸುತ್ತಾ ಮೂರ್ತಿ

"ವಿವಿಧ ರಾಜಕೀಯ ಪ್ರಣಾಳಿಕೆಗಳನ್ನನುಸರಿಸಿ ಪಕ್ಷಗಳು ಹುಟ್ಟಿಕೊಳ್ಳುತ್ತವೆ. ಪಕ್ಷದ ವ್ಯವಹಾರನೀತಿ ಏನೇ ಇರಲಿ ಅದು ದೇಶದ ಹಿತವನ್ನೇ ಸಂಪೂರ್ಣವಾಗಿ ಅನುಲಕ್ಷಿಸಬೇಕು. ಭಾರತದ ರಾಜಕೀಯ ಪಕ್ಷಗಳು ಭಾರತೀಯ ಪಕ್ಷಗಳಾಗಿರಬೇಕು.

ರಾಷ್ಟ್ರದ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಪರಂಪರೆಯನ್ನನುಸರಿಸಿದ ಪಕ್ಷದಿಂದಲೇ ದೇಶಕ್ಕೆ ಕಲ್ಯಾಣ. ಪರರಾಷ್ಟ್ರಗಳ ತತ್ತ್ವ,ರೀತಿ,ನೀತಿಗಳನ್ನನುಸರಿಸಲೆತ್ನಿಸುವ ಪಕ್ಷಗಳಿಂದ ರಾಷ್ಟ್ರಹಿತಕ್ಕೆ ಪ್ರಬಲವಾದ ಧಕ್ಕೆ ತಗಲುತ್ತದೆ.

ನಾವಿಂದು ಒಪ್ಪಿಕೊಳ್ಳುವ ಪಕ್ಷ

೧. ಸಂಪೂರ್ಣವಾಗಿ ಭಾರತೀಯವಾಗಿರಬೇಕು.

೨. ಭಾರತದ ರಾಜ್ಯಘಟನೆಯನ್ನಂಗೀಕರಿಸಬೇಕು.

೩. ಭಾರತದ ರಾಷ್ಟ್ರಧ್ವಜ, ರಾಷ್ಟ್ರಗೀತೆಗಳನು ಗೌರವಿಸಬೇಕು."

ಎಂದು ಅಭಿಪ್ರಾಯಪಟ್ಟಿದ್ದ.

ಹುನಗುಂದ 'ವಿಚಾರಿ'ಯನ್ನು ತನ್ನ 'ಕುಸುಮಕುಂಜ'ದಲ್ಲಿ ವಿಮರ್ಶಿಸುತ್ತಾ ಗಣೇಶನನ್ನು ಕಟುವಾಗಿ ಟೀಕಿಸಿದ್ದಲ್ಲದೆ ಮೂರ್ತಿಯನ್ನು 'ತಾತ್ತ್ವಿಕ ನಿಷ್ಠೆಯಿಲ್ಲದ ಸಮಯಾಚಾರಿ' ಎಂದು ಕರೆದು.

"ಕಮ್ಯುನಿಸ್ಟ್ ಪತ್ರಿಕೆಯಾದ 'ವಿಚಾರಿ'ಗೆ ಲೇಖನ ಬರೆಯುತ್ತ ಸುಪ್ರಸಿದ್ಧ ಸಾಹಿತಿಗಳಾದ ಶ್ರೀಮೂರ್ತಿಯವರು ಒಂದೇ ಬಾವುಟ, ಒಂದೇ ರಾಷ್ಟ್ರಗೀತೆ ಎಂಬ ಪಲ್ಲವಿ ಹಾಡಿ ಪ್ರಜಾಸ್ವಾಮ್ಯವನ್ನೇ ಹತ್ತಿಕ್ಕಿದ್ದಾರೆ. ಈ ಸಾಹಿತಿಗಳಿಗೆ ಬೇಕಾಗಿರುವುದು ಬಡವರ ರಾಜ್ಯವಲ್ಲ; ಕೂಲಿಗಾರರ ರಾಜ್ಯವಲ್ಲ; ಬಂಡವಳಿಗರ ರಾಜ್ಯ ; ಶ್ರಮಜೀವಿಯ ರಕ್ತಹೀರುವ ಹಣವಂತರ ಪೈಶಾಚನೃತ್ಯ. ಇಂಥ ಪ್ರತಿಗಾಮಿಸಾಹಿತಿಗಳ ನೆರವು ಕೋರಿ ಕಾಮ್ರೇಡ್ ಗಣೇಶರು ಪ್ರಜಾರಾಜ್ಯ ಕಲ್ಪನೆಗೇ ತುಂಬ ಅಪಕಾರ ಮಾಡಿದ್ದಾರೆ. ಇವರ 'ವಿಚಾರಿ'—'ಅವಿಚಾರಿ'ಯಾಗಿರುವುದು ವಿಷಾದಕರವಾಗಿದೆ."

ಮೂರ್ತಿ ರಣರಂಗಕ್ಕೆ ಧುಮ್ಮಿಕ್ಕದೆ ನಿರ್ವಾಹವಿರಲಿಲ್ಲ. ಸಾಹಿತಿಯ ಲೇಖನಿ ಕಡುಗಲಿಯ ಖಡ್ಗವಾಗಿತ್ತು.

"ಶ್ರೀಹುನಗುಂದರು ನನ್ನನ್ನು ಪ್ರತಿಗಾಮಿ, ಬಂಡವಳಿಗರ ಕೈಗೊಂಬೆಯೆಂದು ಕರೆದಿದ್ದಾರೆ. ಸಾಹಿತ್ಯವಿಮರ್ಶೆಯನ್ನೂ ಗೌರವವಾಗಿ ಬರೆಯುವ ಯೋಗ್ಯತೆ ಇಲ್ಲದ ಶ್ರೀಹುನಗುಂದರಿಂದ ರಾಜಕೀಯ ವಿಮರ್ಶೆಯಲ್ಲಿ ಸೌಜನ್ಯವನ್ನು ನಿರೀಕ್ಷಿಸುವುದು ತಪ್ಪಾದೀತು.

ಇಂದು ನಾನು ಬಯಸುತ್ತಿರುವುದೂ `ಪ್ರಜಾರಾಜ್ಯವನ್ನೇ—ಶ್ರಮಜೀವಿಯ ಪ್ರಭುತ್ವವನ್ನೇ! ಈ ಪ್ರಭುತ್ವ ನಡೆಸುವವರು ಭಾರತದ ಶ್ರಮಜೀವಿಗಳಾಗಿರಬೇಕೇ ವಿನಾ ಕ್ರೆಮ್ಲಿನ್ನಿನ(Kremlin) ಪ್ರಭೃತಿಗಳಲ್ಲ. ಭಾರತದ ಶ್ರಮಜೀವಿಗಳನ್ನು ತಮ್ಮ ಸೂತ್ರದಗೊಂಬೆಗಳನ್ನಾಗಿ ಉಪಯೋಗಿಸಿಕೊಳ್ಳುವ ಹೊರಗಿನವರ ಕೈವಾಡವನ್ನು ನಮ್ಮ ರಾಜಕಾರಣದಲ್ಲಿ ಸಹಿಸಲು ನಾವು ಸಿದ್ಧರಾಗಿಲ್ಲ.

ಭಾರತದ ರಾಷ್ಟ್ರಧ್ವಜ, ರಾಷ್ಟ್ರಗೀತೆಗಳಿಗೆ ಗೌರವ ಸಲ್ಲಿಸಬೇಕೆಂಬ ಮಾತು ಶ್ರೀ ಹುನಗುಂದರಿಗೆ ಪ್ರತಿಗಾಮಿಯ ಪಲ್ಲವಿಯಾಗಿ ಕಂಡು ಬಂದಿದೆ. ಅವುಗಳಿಗೆ ಬದಲಾಗಿ ರಷ್ಯಾದ ಕೆಂಪು ಬಾವುಟ, ರಷ್ಯಾದ ರಾಷ್ಟ್ರಗೀತೆಗಳನ್ನು ತಂದಿಡಬೇಕೆಂದು ಶ್ರೀ ಹುನಗುಂದರು ಬಯಸುತ್ತಾರೆ. ದೇಶಗೌರವವನ್ನು ಕಂಡವರಿಗೆ ಒಪ್ಪಿಸುವುದೇ ಪುರೋಗಾಮಿಯ ಲಕ್ಷಣವಾದರೆ ಆ ಬಗೆಯ ಪುರೋಗಾಮಿತ್ವ ನನ್ನಲ್ಲಿಲ್ಲವೆಂದು ಧಾರಾಳವಾಗಿ ಒಪ್ಪಿಕೊಳ್ಳುತ್ತೇನೆ."

ತಡೆಯಡೆಯಿಲ್ಲದ ಸಾಗಿದ ಮೂರ್ತಿ—ಹುನಗುಂದರ ವಾದವಿವಾದ ಓದುಗರ ಕುತೂಹಲ ಕೆರಳಿಸಿತು. 'ವಿಚಾರಿ' ಪ್ರತಿಗಳು ಸಿಕ್ಕುವುದೇ ಕಷ್ಟವಾಯಿತು.

ಮೂರ್ತಿಯ ಕ್ಷಾತ್ರತೇಜಸ್ಸಿನ ಹಾಗೂ ಅಸದೃಶ ರಾಷ್ಟ್ರಾಭಿಮಾನದ ಪ್ರತೀಕವಾಗಿ 'ವಿಚಾರಿ' ಕಂಗೊಳಿಸಿತು.

ರಾಷ್ಟ್ರಯಜ್ಞದೀಕ್ಷೆ ಹೊತ್ತು ಕುಳಿತಿದ್ದ ಮೂರ್ತಿಯಲ್ಲಿಗೆ ಬಂದ ವಿಶ್ವೇಶ್ವರಯ್ಯ, ಗುಂಡಣ್ಣ ತಮ್ಮ ಅಸಂತೃಪ್ತಿ ವ್ಯಕ್ತಗೊಳಿಸಿದರು.

"ನನಗೆ ಕಾದಂಬರಿ ಕೊಡುವುದಿಲ್ಲವೇ ಸಾರ್" ಎಂದು ವಿಶ್ವೇಶ್ವರಯ್ಯ ಕೇಳಿದ.

"ಅವನು ಸಾಹಿತ್ಯಕ್ಕೆ ತಿಲೋದಕ ಬಿಟ್ಟು ರಾಜಕಾರಣಿಯಾಗಿದ್ದಾನೆ ವಿಶ್ವೇಶ್ವರಯ್ಯ. ಇನ್ನು ಮೇಲೆ ನಿಮ್ಮ ಗ್ರಂಥಪ್ರಕಾಶನ ನಿಲ್ಲಿಸಿ ಬರೇ ಜಾಬ್ ವರ್ಕ್ಸ್ ( Job works ) ಮಾಡಿಕೊಂಡು ಹೋಗಿ"

ಎಂದು ಗುಂಡಣ್ಣ ಕಟುವಾಗಿ ನುಡಿದ.

"ದೇಶ ಬದುಕದೆ ಸಾಹಿತ್ಯ, ಕಲೆ ಬದುಕಲಾರವು ಗುಂಡಾ."

"ರಾಜಕಾರಣದಲ್ಲಿ ದಾಳ ಉರುಳಿಸಬಲ್ಲವರು ಸಹಸ್ರಾರು ಜನರಿದ್ದಾರೆ–ಸಾಹಿತ್ಯದಲ್ಲಿ....?"

"ಸಾಹಿತಿಯೂ ರಾಷ್ಟ್ರದ ಪ್ರಜೆ."

"ಇರಬಹುದು."

"ರಾಷ್ಟ್ರದ ಹಿತಾಹಿತ ಅವನಿಗೂ ಸೇರಿದ್ದು."

"ಅಲ್ಲವೆಂದವರು ಯಾರು ?"

"ರಾಜಕಾರಣಿ ಸೈನಿಕನಂತೆ—ಹೇಳಿದ್ದನ್ನಷ್ಟೇ ಅವನು ಮಾಡಬಲ್ಲ. ಸಾಹಿತಿ ಸೈನ್ಯಾಧಿಕಾರಿಯಂತೆ—ಹೇಳಿ ಮಾಡಿಸುವ ಜವಾಬ್ದಾರಿ ಅವನದು."

"ವ್ಯಕ್ತಿಶಕ್ತಿ ವಿಭಿನ್ನವಾಗಿರುತ್ತದೆ."

"ನಿಜ."

"ಸದುಪಯೋಗವಾಗದಿರುವ ವ್ಯಕ್ತಿಶಕ್ತಿ ನಿರರ್ಥಕವಾಗುತ್ತದೆ."

"ಹಾಗೆಂದರೆ....?"

"ನೀನು ರಾಜಕಾರಣಿಯಾಗಲಾರೆ—ಹುನಗುಂದ ಸಾಹಿತಿಯಾಗಲಾರ."

"ರಾಜಕಾರಣದಲ್ಲಿ ನಾನು ಸ್ಥಾನಮಾನಗಳನ್ನಾಶಿಸುತ್ತಿಲ್ಲ. ಆಸೆಂಬ್ಲಿಯಲ್ಲಿ ನನಗೆ ಸೀಟು ಬೇಕಾಗಿಲ್ಲ."

"ನಿನ್ನ ನಿಷ್ಕಾಮಸೇವೆಗೆ ನಾನು ಕಳಂಕ ಹಚ್ಚುತ್ತಿಲ್ಲ. ಆದರೆ ನಿನ್ನ ಕೂಗು ಅರಣ್ಯರೋಧನವಾಗುವುದಲ್ಲಾ ಎಂದು ಮರುಗುತ್ತಿರುವೆ—ಗೆಲ್ಲಲಾರದ ಕುದುರೆಯ ಪಕ್ಷ ಹಿಡಿದು ನೀನು ಅಪಹಾಸ್ಯಕ್ಕೆ ಗುರಿಯಾಗುತ್ತಿರುವೆ."

"ಚಿಂತೆಯಿಲ್ಲ—ಕುದುರೆ ಗೆಲ್ಲದಿದ್ದರೆ ಲಾಯವಾದರೂ ಸುಭದ್ರವಾಗಿರಲೆಂದು ನನ್ನ ಆಸೆ."

ಎಂದು ಮೂರ್ತಿಯೂ ಖಂಡಿತವಾಗಿ ನುಡಿದ.

೨೯

ಮಹಾಚುನಾವಣೆ ಮುಗಿಯುವವರೆಗೆ ತನಗೆ ಸ್ವಲ್ಪವೂ ಬಿಡುವು ದೊರೆಯುವುದಿಲ್ಲವೆಂಬದನ್ನು ಮೂರ್ತಿ ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ತನ್ನ ಮುಂದಿನ ಕಲಾಕೃತಿಯ ಬಗ್ಗೆ ಚಿಂತನೆ ಮಾಡಲು ಅವನಿಗೆ ವ್ಯವ ಧಾನವೂ ಇರಲಿಲ್ಲ—ಮನೋಧರ್ಮವೂ ಇರಲಿಲ್ಲ.

ತಲೆತುಂಬ ಚುನಾವಣೆ—ಚುನಾವಣೆ! ಗಣೇಶರ ಪಾರ್ಟಿನ ನಾನಾ ಭಾಗಗಳಲ್ಲಿ ಮೂರ್ತಿ ಪ್ರಚಾರ ಭಾಷಣ ಮಾಡಬೇಕಾಗಿತ್ತು.

ಕಮ್ಯುನಿಸ್ಟ್ ಟಿಕೆಟ್ (Communist Ticket) ಮೇಲೆ ಚುನಾವಣೆಗೆ ನಿಂತಿದ್ದ ಗಣೇಶರ ಪರವಾಗಿ ಕಮ್ಯುನಿಸಂ—ವಿರೋಧಿ ಮೂರ್ತಿ ಪ್ರಚಾರ ಮಾಡುತ್ತಿದ್ದುದರ ಬಗ್ಗೆ ಕೆಲವು ಕಡೆ ಆಕ್ಷೇಪಣೆಗಳಿದ್ದವು. ಮೂರ್ತಿ ತನ್ನ ನಿಲುವನ್ನು ಸಮರ್ಥಿಸುತ್ತ

"ಯಾವ ಪಾರ್ಟಿಯಲ್ಲಿರಲಿ ಗಣೇಶರು ಗೌರವಾರ್ಹರು. ಈ ದೇಶದ ಸ್ವಾತಂತ್ರ್ಯ ಸಂಪಾದನೆಗೆ ಅವರು ಬೆಟ್ಟದಷ್ಟು ಸೇವೆ ಸಲ್ಲಿಸಿದ್ದಾರೆ. ನಾವು ಚುನಾಯಿಸಿ ಕಳಿಸಿಕೊಡುವ ಗಣೇಶರು ಈ ದೇಶದ ಉತ್ಕರ್ಷಕ್ಕಾಗಿ ದುಡಿಯುವರಲ್ಲದೆ ತಮ್ಮ ಪಾರ್ಟಿಯ ಉತ್ಕರ್ಷಕ್ಕೆ ದುಡಿಯುವುದಿಲ್ಲ. ನಮ್ಮ ಪ್ರತಿನಿಧಿಗಳಾಗಿ ಹೋಗುವವರು ಭಾರತದ ನಿಜ ಪುತ್ರರಾಗಿರಬೇಕು; ಅವರು ನಮ್ಮ ಹಿತಾಹಿತಗಳನ್ನು ಅನುಲಕ್ಷಿಸಬೇಕು—ಗಣೇಶರು ಈ ಎರಡು ವಿಶೇಷಗುಣಗಳನ್ನು ಪಡೆದಿದ್ದಾರೆಂದೇ ನಾನು ಅವರ ಉಮೇದುವಾರಿಕೆಯನ್ನು ಎತ್ತಿ ಹಿಡಿಯುತ್ತಿದ್ದೇನೆ."

ಎಂದು ಒತ್ತಿಹೇಳಿದ್ದ.

ಮೂರ್ತಿ, ಗಣೇಶರ ಪ್ರಚಾರಕ್ರಮಕ್ಕೂ ಇತರರ ಪ್ರಚಾರಕ್ರಮಕ್ಕೂ ಇದ್ದ ಮುಖ್ಯವ್ಯತ್ಯಾಸವನ್ನು ಹಲವರು ಗಮನಿಸಿದರು. ವಿವಿಧ ಪಕ್ಷಗಳ

ಪ್ರತಿನಿಧಿಗಳಾಗಿ ನಿಂತಿದ್ದ ಇತರರು ತಮ್ಮ ಪಕ್ಷದ ನಿಲುವನ್ನು ಸಮರ್ಥಿಸುವುದರ ಬದಲು ಇತರರನ್ನು ಹಳಿಯಲು ಹೆಚ್ಚು ಶ್ರದ್ಧೆವಹಿಸಿದ್ದರು.

ವ್ಯಕ್ತಿ—ಪಕ್ಷಖಂಡನೆಗೆ ಹೋಗದೆ ಕೇವಲ ತಮ್ಮ ಅಭಿಪ್ರಾಯಮಂಡನೆಯನ್ನಷ್ಟೇ ಮೂರ್ತಿ, ಗಣೇಶರು ಗಮನಿಸಿ ಡೋಲಾಯಮಾನವಾಗಿದ್ದ ಹಲವರ ಸಹಕಾರ ದೊರಕಿಸಿಕೊಂಡರು.

ಚುನಾವಣೆ ಮುಗಿಯುತ್ತ ಬಂದಂತೆ ಎಲ್ಲ ಉಮೇದುವಾರರು ತಮ್ಮ ಜಯ ಸಿದ್ಧವೆಂದು ಭಾವಿಸಿದರು.

ಸಂಜೆಗೆ ಹೊರಬಿದ್ದ ಚುನಾವಣೆಯ ಫಲಿತಾಂಶ ತಿಳಿದವನೇ ಗುಂಡಣ್ಣ ಮೂರ್ತಿಯನ್ನು ಹುಡುಕಿಕೊಂಡು ಬಂದ.

"ಫಲಿತಾಂಶ ಹೊರಬಿತ್ತೇ ಗುಂಡಾ."

"ಫಲಿತಾಂಶ ತಿಳಿದೇ ನಾನಿಲ್ಲಿಗೆ ಬಂದೆ."

"ಗೆದ್ದವರು ಯಾರು ?"

"ಕಾಂಗ್ರೆಸ್ ಉಮೇದುವಾರರು."

"ಗಣೇಶರಿಗೆಷ್ಟು ಮತಗಳು ಬಂದಿವೆ ?"

"ವಿವರ ನಾಳೆ ತಿಳಿಯುತ್ತದೆ. ನಾನು ಕೇಳಿದ್ದರಲ್ಲಿ ಉಳಿದ ಕಮ್ಯುನಿಸ್ಟ್ ಪಾರ್ಟಿ ಉಮೇದುವಾರರಿಗೆಲ್ಲಾ ಡಿಪಾಸಿಟ್ ಹಣ ಹೋಯಿತಂತೆ—ಗಣೇಶರು ಮಾತ್ರ ಡಿಪಾಸಿಟ್ ಕಳೆದುಕೊಂಡಿಲ್ಲ."

"ಇದೇ ಒಂದು ಸಮಾಧಾನ."

"ಸೋಲು ಸ್ವತಃಸಿದ್ಧವೆಂದು ತಿಳಿದೂ ನೀನು ಇದಕ್ಕೆ ಕೈ ಹಾಕಬಾರದಾಗಿತ್ತು."

"ನನ್ನ ವಿಶ್ವಾಸಕ್ಕೆ ಗಣೇಶರು ಅರ್ಹರಲ್ಲವೇ ನೀನೇ ಹೇಳು."

"ಮೊದಲು ಮೊದಲು ನನಗೂ ಸಂದೇಹವಿತ್ತು. ಪ್ರಚಾರ ವೈಖರಿ ಕಂಡಮೇಲೆ ಚುನಾವಣೆ ಹೊಂದಲು ಗಣೇಶರೊಬ್ಬರೇ ಅರ್ಹರು ಎಂಬ ಭಾವನೆ ಬೆಳೆಯಿತು. ಈತ ದೊಡ್ಡ ಮನುಷ್ಯನೆಂಬುದರಲ್ಲಿ ಸಂದೇಹವಿಲ್ಲ—ಗಣೇಶರಿಗೆ ನೀನೇಕೆ ಸಹಕಾರವಿತ್ತೆಯೆಂಬುದು ಈಗ ನನಗೆ ಅರ್ಥವಾಗಿದೆ."

"ನಾನು ತಪ್ಪು ಮಾಡಿದಂತಾಗಲಿಲ್ಲವಲ್ಲಾ ?"

"ಖಂಡಿತವಾಗಿಯೂ ಇಲ್ಲ. ನೀನು ಕೈಹಾಕಿದ ಕೆಲಸಕ್ಕೆ ಜಯ ಸಿಗಲಿಲ್ಲವಲ್ಲಾ ಎಂದಷ್ಟೇ ನನ್ನ ಚಿಂತೆ."

"ಗಣೇಶರು ಸ್ವತಂತ್ರ ಉಮೇದುವಾರನಾಗಿದ್ದರೆ ಅವರಿಗೆ ಖಂಡಿತವಾಗಿ ಜಯ ಲಭಿಸುತ್ತಿತ್ತು."

"ಗಣೇಶರು ಹಾಗೇ ಮಾಡಬೇಕಾಗಿತ್ತು."

"ತತ್ತ್ವ—ಸಿಸ್ತುಗಳಿಗೆ ಪ್ರಾಣಬಿಟ್ಟೆ ಅಲ್ಲವೇ ಗಣೇಶರು ಈ ಸ್ಥಿತಿಗೆ ಬಂದಿರುವುದು."

"ಪಾಪ ! ಈ ಪ್ರಾಣಿ ಸಾವಿರಾರು ರೂಪಾಯಿ ಸಾಲ ಮಾಡಿಕೊಂಡಿರುವುದಲ್ಲಾ ಮೂರ್ತಿ."

"ಸಾಲದ ಶೂಲಕ್ಕಿಂತ ಹೆಚ್ಚಾಗಿ ಪಾರ್ಟಿಶೂಲ ಇವರಿಗೆ ಕಾದಿದೆ—ಅದು ನನಗೆ ಹೆಚ್ಚು ಚಿಂತೆಯನ್ನುಂಟುಮಾಡಿದೆ."

"ಚುನಾವಣೆ ಮುಗಿಯಿತಲ್ಲ—ಇನ್ನಾದರೂ ನಿನ್ನ ಕೆಲಸದ ಕಡೆ ಲಕ್ಷ್ಯವಿಡು."

"ವಿಶ್ವೇಶ್ವರಯ್ಯನವರಿಗೆ ನನ್ನ ಮೇಲೆ ಬಹಳ ಕೋಪ ಬಂದಿರಬೇಕು."

"ಕೋಪವೇನೂ ಇಲ್ಲ—ಅವರೂ ತೊಂದರೆಯಲ್ಲಿದ್ದಾರೆ. ನೀನು ಕಾದಂಬರಿ ಕೊಟ್ಟರೆ ಅವರಿಗೆ ಅನುಕೂಲವಾಗುತ್ತದೆ."

"ಇನ್ನು ಹದಿನೈದು ದಿನಗಳಲ್ಲಿ ಕಾದಂಬರಿ ಮುಗಿಸಿಕೊಡುತ್ತೇನೆ ಗುಂಡಾ—ಎಂದೆಂದಿಗೂ ವಿಶ್ವೇಶ್ವರಯ್ಯನವರನ್ನು ನಾನು ತೊಂದರೆಗೀಡು ಮಾಡುವುದಿಲ್ಲ."

"ನಿನ್ನ ಸಹವಾಸ ಬಹಳ ಕಷ್ಟ ಕಣಯ್ಯಾ."

"ಏಕಪ್ಪಾ !"

"ಹಗಲೂ ರಾತ್ರಿ ಕುಳಿತು ಈ ಕಾದಂಬರಿ ಮುಗಿಸುತ್ತೀ—ನಿನ್ನ ದೇಹಾರೋಗ್ಯ....?"

"ಆ ವಿಷಯ ಹಾಗಿರಲಿ ಗುಂಡಾ"

ಎಂದು ಮಾತು ಮರೆಸಲೆತ್ನಿಸಿ

"ಈ ಚಕ್ರವಿಭ್ರಮಣದಿಂದ ನಮಗೆ ಮುಕ್ತಿಯೇ ಇಲ್ಲವೇ ಗುಂಡಾ ?"

"ಚಕ್ರವಿಭ್ರಮಣದಲ್ಲಿಯೇ ನಿನ್ನ ಮುಕ್ತಿ ನಿರ್ದಿಷ್ಟವಾಗಿರುವಂತಿದೆ."

"ಇಲ್ಲಿ ನೋಡು—ಆಹ್ವಾನಗಳ ಸುರಿಮಳೆ—ಗಡಿನಾಡುಗಳ ಸ್ಥಿತಿ ಚಿಂತಾಜನಕವಾಗಿದೆ. ಬೆಳಗಾಂವಿ. ಸೊಲ್ಲಾಪುರಗಳಲ್ಲಿ ಮುಂಬಯಿ ಮಂತ್ರಿಗಳೇ ಪ್ರಚಾರ ಮಾಡುತ್ತಿರುವರಂತೆ! ಬಿದರೆ ಜಿಲ್ಲೆ ತೀರಾ ಉಪೇಕ್ಷಿಸಲ್ಪಟ್ಟಿದೆ! ಕಾಸರಗೋಡು ಕನ್ನಡಿಗರು—ಮಲೆಯಾಳಿಗಳ ಕುರುಕ್ಷೇತ್ರವಾಗಬಹುದು."

"ಕನ್ನಡ ನಾಯಕರು ಎನಿಸಿಕೊಂಡಿರುವ ಅಥಿರಥ ಮಹಾರಥರು ಈ ಭಾಗಗಳಿಗೆ ಹೋಗಿಬರಲಿ."

"ಆ ಮಾತು ನಾನು ಹೇಗೆ ಹೇಳಲಿ. ನಮ್ಮ ಜನ ಪ್ರೀತಿಯಿಂದ ನನ್ನನ್ನು ಕರೆಯುತ್ತಿದ್ದಾರೆ. ನಾನು ಪ್ರವಾಸ ಕೈಗೊಂಡು ಭಾಷಣ ಮಾಡಿದರೆ ಜನತೆಯಲ್ಲಿ ಹೆಚ್ಚಿನ ಜಾಗೃತಿಯುಂಟಾಗುತ್ತದೆಂದು ಅವರು ಬರೆಯುತ್ತಿದ್ದಾರೆ. ಊರುಬಿಟ್ಟು ಹೋಗೋಣವೆಂದರೆ ಇಲ್ಲಿ ಕೈತುಂಬ ಕೆಲಸ—ಹೋಗದಿದ್ದರೆ ಕರ್ತವ್ಯಲೋಪ—ಈ ಪರಿಸ್ಥಿತಿಯಿಂದ ಪಾರಾಗುವುದು ಹೇಗೆಂಬುದೇ ತಿಳಿಯದಾಗಿದೆ."

"ನೀನು ಹೋಗಿಬರುವುದಗತ್ಯ ಮೂರ್ತಿ. ಒಂದು ಕೆಲಸ ಮಾಡು—ಒಂದು ಕಾದಂಬರಿಮುಗಿಸಿ ವಿಶ್ವೇಶ್ವರಯ್ಯನವರ ಕೈಗೆ ಹಸ್ತಪ್ರತಿ ಹಾಕಿ ಹೋಗಿ ಬಾ. ತಪ್ಪೋಲೆಗಳನ್ನೂ (Proofs) ನಾನು ನೋಡಿಕೊಳ್ಳುತ್ತೇನೆ."

ಗುಂಡಣ್ಣನ ಸಲಹೆಯನ್ನಂಗೀಕರಿಸಿ ಮೂರ್ತಿ ತನ್ನ **'ಸಂಪಿಗೆಯ ಹೂವು'** ಕಾದಂಬರಿಯನ್ನಾರಂಭಿಸಿದ.

ವೈಯಕ್ತಿಕ, ಸಾಮಾಜಿಕ, ರಾಜಕೀಯ ಸಮಸ್ಯೆಗಳ ಪೃಥಃಕರಣಕ್ಕೇ ಹೆಚ್ಚು ಲಕ್ಷ್ಯವಿತ್ತಿದ್ದ ಮೂರ್ತಿ 'ಸಂಪಿಗೆಯ ಹೂವಿ'ನಂಥ ಲಲಿತಶೃಂಗಾರ ಪ್ರಧಾನ ವಸ್ತುವನ್ನಾರಿಸಿಕೊಳ್ಳುವುದಕ್ಕೆ ಒಂದು ವಿಶಿಷ್ಟ ಕಾರಣವಿತ್ತು.

ದುರಂತದಾಂಪತ್ಯಜೀವನವನ್ನು ಮೂರ್ತಿ ಗಮನಿಸಿದ್ದಂತೆ ಸುಮಧುರ ದಾಂಪತ್ಯಜೀವನವನ್ನೂ ಅವನು ಅನುಲಕ್ಷಿಸಿದ್ದ. ನಿತ್ಯಜೀವನದ ಕಟು ಚಿಂತೆಗಳಿಗೀಡಾಗದ ಸೆಲೀನ್, ಮೇಥಾ ಅವರ ನಿರ್ಮಲ ದಾಂಪತ್ಯ;—ಸೆಲೀನ್, ಮೇಥಾ ಇಬ್ಬರೂ ತಿಳಿದವರು, ಕಲಿತವರು, ಸುಸಂಸ್ಕೃತರು. ಸಾಹಿತ್ಯ, ಕಲೆಯ ಆರಾಧನೆಯೇ ಅವರ ದಾಂಪತ್ಯಜೀವನದ ಅಡಿಗಲ್ಲಾಗಿತ್ತು. ಸಮಾನದೃಷ್ಟಿ, ಸಮಾನ ಆಸಕ್ತಿ, ಸಮಾನ ಅಭಿರುಚಿ ಅವರ ವಿಶ್ವಾಸವನ್ನು ಮೈತ್ರಿಯ ಮಟ್ಟಕ್ಕೇರಿಸಿತ್ತು. ನಿತ್ಯಜೀವನದ ನೂರಾರು ಚಿಂತೆಗಳು, ನೂರಾರು

ಸಮಸ್ಯೆಗಳು ಕುಟುಕುತ್ತಿದ್ದರೂ ಧೃತಿಗೆಡದೆ, ಆತ್ಮಸಂತೋಷವನ್ನು ಆ ಸಮಸ್ಯೆಗಳ ವಜ್ರಾಘಾತಕ್ಕೆ ಬಲಿಗೊಡದೆ ಧೀರಬಾಳ್ವೆ ನಡೆಸುತ್ತಿದ್ದ ದಾದಾ, ಆಯಿ ಇವರ ನಿಷ್ಕಲ್ಮಷ ದಾಂಪತ್ಯಜೀವನ. ಕೆಸರಿನಲ್ಲಿ ಬಿದ್ದಿದ್ದ ಕಮಲವನ್ನೆತ್ತಿಕೊಂಡು ಅದನ್ನೇ ಮುಡಿಗೇರಿಸಿಕೊಂಡು ನೂತನ ಬಾಳ್ವೆಯನ್ನು ರೂಪಿಸುತ್ತಿದ್ದ ಸರ್ದಾರನ ತ್ಯಾಗಪೂರ್ಣ ಅಮೃತದಾಂಪತ್ಯಜೀವನ—ಈ ಮೂರು ಭವ್ಯಚಿತ್ರಗಳನ್ನು ತನ್ನ 'ಸಂಪಿಗೆಯ ಹೂವು' ಕಾದಂಬರಿಯಲ್ಲಿ ಚಿತ್ರಿಸಲು ಮೂರ್ತಿ ನಿರ್ಧರಿಸಿದ. ದುಃಖದ ಹೊರೆ ಹೊತ್ತೇ ಮಾನವ ಭೂಮಿಗಿಳಿದು ಬರುತ್ತಾನೆ. ಆಜನ್ಮಮರಣಪರ್ಯಂತ ಅವನಿಗೆ ಚಿಂತೆ ತಪ್ಪುವುದಿಲ್ಲ.

ದುಃಖದ ಹೊರೆಯನ್ನು ಮಾನವ ಹೊರುತ್ತಾನೆ !

ಏಕೆ ?

ದುಃಖದ ಅಗ್ನಿಕುಂಡದಲ್ಲಿ ಬೇಯುವುದರಲ್ಲಿ ಯಾವ ಸುಖವಿದೆ ?

ಈ ದುಃಖ ಅನುಭವಿಸುವ ಶಕ್ತಿ ಮಾನವನಿಗೆ ಎಲ್ಲಿಂದ ಒದಗುತ್ತದೆ ?

ಎನ್ನುವ ಪ್ರಶ್ನೆಗಳಿಗೆ ಮೂರ್ತಿ ಉತ್ತರ ಒದಗಿಸಬೇಕಾಗಿತ್ತು.

ಜೀವನವೆಲ್ಲಾ ದುಃಖಮಯ ಎಂದು ಭಾವಿಸುವುದೂ ತಪ್ಪಲ್ಲವೇ ?

ಪುಷ್ಪಗಳ ಮನೋಹರ ವಿಕಾಸ—ಆಗಸದ ಅನಂತ ನೀಲಶೋಭೆ—ಮಕ್ಕಳ ಮಧುರ ಮುಗುಳ್ನಗೆ—ನಲ್ಲೆಯ ಚಿತ್ತಾಪಹಾರಕ ಸವಿನುಡಿ—ಕೋಗಿಲೆಯ ಗಾನ—ಮಹಾಪುರುಷರ ಹಿತವಚನಗಳಲ್ಲಿ ಅಸೀಮಸೌಂದರ್ಯ ತುಂಬಿಲ್ಲವೇ ?

ನಿತ್ಯಜೀವನದ ಪ್ರತಿಯೊಂದು ಆವಿಷ್ಕಾರದಲ್ಲಿಯೂ ಸೌಂದರ್ಯ ಸಮಾವೇಶಗೊಂಡಿಲ್ಲವೇ ?

ಕೆಸರು ಕಲಸಿಕೊಂಡು ಗೋಡೆಕಟ್ಟುವ ಮೇಸ್ತ್ರಿ !

ಹಸಿರುಗದ್ದೆಯಲ್ಲಿ ನಿಂತು ನಾಟಿ ನೆಡುವ ರೈತಕನ್ಯೆ !

ಮುದ್ರಣಯಂತ್ರದಿಂದ ಲಕ್ಷ್ಯವನ್ನು ಅತ್ತಿತ್ತ ಚಲಿಸದ ಮೆಷಿನ್ ಮ್ಯಾನ್ !

ವೇಳೆಯಾಯಿತೆಂದು ಟಿಫನ್ ಕ್ಯಾರಿಯರ್ ಹಿಡಿದು ಶಾಲೆಗೆ ಓಡುವ ಮಕ್ಕಳು !

ಬಿಸಿಲು ಮಳೆಯೆನ್ನದೆ ತನ್ನ ಚೌಕದಲ್ಲಿ ನಿಂತು ಮಾರ್ಗದರ್ಶನ
ಮಾಡಿಸುವ ಪೋಲೀಸಿನವನು !

ಇವರ ಜೀವನ ಕೇವಲ ಯಾಂತ್ರಿಕವೇ ? ಸೌಂದರ್ಯ, ಸೌಖ್ಯ ವೊತ್ತವಾಗಿ ಒಂಡೆಡೆ ಸಿಕ್ಕುವ ವಸ್ತುವಲ್ಲ. ಜೀವನದ ಪ್ರತಿಯೊಂದು ಆವಿಷ್ಕಾರದಲ್ಲಿಯೂ ಅದು ಹಾಸುಹೊಕ್ಕಾಗಿ ಕೂಡಿಕೊಂಡಿದೆ-ಈ ಅಸಾಮಾನ್ಯ ಸಾಮಾನ್ಯತೆಯನ್ನು—ಸರ್ವವ್ಯಾಪೀ ಅದೃಶ್ಯಚೈತನ್ಯವನ್ನು ತನ್ನ ಕಾದಂಬರಿ ಯಲ್ಲಿ ಭಟ್ಟಯಿಳಿಸಲು ಮೂರ್ತಿ ನಿರ್ಧರಿಸಿದ.

'ಸಂಪಿಗೆಯ ಹೂವು' ಕುಡಿ ಕಂಡು, ಮೊಗ್ಗೆಯಾಗಿ ಅರಳಲಾರಂಭಿಸಿತು. ಅದರ ಘನಸರು ಮೂರ್ತಿಯ ದೇಹ, ಆತ್ಮವನ್ನು ವ್ಯಾಪಿಸಿತು.

ಒಂದು ದಿನ ಮೂರ್ತಿ ಊಟಕ್ಕೆ ಕುಳಿತಾಗ ಎಲೆಯ ತುದಿಗೆ ಬಡಿಸಿದ್ದ ಪಾಯಸ, ಕೋಸುಂಬರಿಯನ್ನು ರುಚಿ ನೋಡಲು ಅವನು ಕೈಹಾಕಿದ.

"ಸ್ವಲ್ಪ ತಡೆಯಿರಿ" ಎಂದು ಲಲಿತಮ್ಮ ಸೂಚಿಸಿದಳು.

"ಇವತ್ತು ಯಾವ ಹಬ್ಬ ಲಲಿತ ?"

"ಏಕೆ ?"

"ಪಾಯಸ ಮಾಡಿರುವಿರಿ ?"

"ಹಬ್ಬವಾದರೇ ಪಾಯಸ ಮಾಡಬೇಕೇ ?"

ಲಲಿತಮ್ಮ ತನ್ನ ಪೂಜಾ ದ್ರವ್ಯಗಳ ತಟ್ಟೆ ತಂದು, ಕುಂಕುಮ ಪ್ರಸಾದ ಮೂರ್ತಿಯ ಹಣೆಗಿಟ್ಟು ಅವನ ಕೈಗೆ ತೀರ್ಥ ಹಾಕಿದಳು.

ಮೂರ್ತಿ ತೀರ್ಥ ಸ್ವೀಕರಿಸಿದ ಮೇಲೆ ಲಲಿತಮ್ಮ ಅವನ ಎರಡು ಪಾದ ಗಳನ್ನು ಮುಟ್ಟಿ ಮಣಿದಳು.

"ನಾನು ಆಶೀರ್ವಾದ ಮಾಡಬೇಕಲ್ಲವೇ ?"

"ಅದನ್ನೂ ನಾನು ಹೇಳಿಕೊಡಬೇಕೆ ?"

"ಏನೆಂದು ಆಶೀರ್ವದಿಸಲಿ ?"

"ಹೋಗಿ—ನಿಮಗೆಲ್ಲಾ ಹುಡುಗಾಟ."

"ಇಲ್ಲ ಹೇಳು—ನೀನು ಹೇಳಿದಂತೆ ಆಶೀರ್ವದಿಸುತ್ತೇನೆ."

"ದೀರ್ಘಸುಮಂಗಲೀಭವ ಎನ್ನಿ."

"ಹಾಗೆಂದರೆ ನನಗೆ ನಾನೇ ಆಶೀರ್ವಾದ ಮಾಡಿಕೊಂಡಂತಾಗುತ್ತದೆ."

"ಆದರೂ ಚಿಂತೆಯಿಲ್ಲ."

"ದೀರ್ಘಸುಮಂಗಲೀಭವ—ಸುದೀರ್ಘಸುಮಂಗಲೀಭವ—ಸರಿಯೇ?"

"ಸರಿ."

"ಈಗ ಹೇಳು. ಕಾರಣವೇನು?"

"ಸಂಜೆಗೆ ಹೇಳುತ್ತೇನೆ."

ಮೂರ್ತಿ ಊಟ ಮುಗಿಸಿದವನೇ ತನ್ನ ರೂಮು ಸೇರಿ 'ಸಂಪಿಗೆಯ ಹೂವಿ' ನ ಪರಿಮಳದಲ್ಲಿ ಮೈಮರೆತ.

ಸಂಜೆಗೆ ಅವನಿಗೆ ಕಾಫಿ ತಂದುಕೊಟ್ಟ ಲಲಿತಮ್ಮ, ಉದ್ದನೆಯ ಲಕೋಟೆಯೊಂದನ್ನು ಅವನ ಮೇಜಿನ ಮೇಲಿಟ್ಟಳು. ಮೂರ್ತಿ ಅದನ್ನು ಒಡೆದು ನೋಡುವುದಕ್ಕೆ ಅವಕಾಶ ಕೊಡದೆ

"ಈಗ ನೋಡಬೇಡಿ."

"ಇದೇನು?"

"ನಾನು ಇಲ್ಲಿಂದ ಹೋದಮೇಲೆ ನೋಡಿ."

"ಹಾಗೇ ಆಗಲಿ. ಇದರಲ್ಲೇನಿದೆ ಹೇಳು."

"ನೀವು ಹಾಸ್ಯಮಾಡುವುದಿಲ್ಲವೆಂದು ಮಾತುಕೊಟ್ಟರೆ...."

"ಕೈಮೇಲೆ ಕೈಹಾಕಿ ಆಣೆಮಾಡಲೇ?'

"ಬೇಡ—ನಿಮ್ಮ ಮಾತೇ ಸಾಕು."

"ಹೇಳು ಹಾಗಾದರೆ!"

"'ತಾಯಿದೇವಿ' ಅನುವಾದ ಆರಂಭಿಸಿದ್ದೇನೆ."

"ಓಹೋ! ಅದಕ್ಕೋ ದೇವಿಗೆ ವಿಶೇಷ ಪೂಜೆ."

"ನನ್ನ ಎದೆ ಡವಗುಟ್ಟುತ್ತಿದೆ."

"ಅಧೀರತೆಯಿಂದಲೇ?"

"ಹೌದು."

"ವೀರಾರಾಧ್ಯೆಯಾದ ದೇವಿ ನಿನಗೆ ಧೈರ್ಯವೀಯಲಿಲ್ಲವೇ?"

"ಎರಡು ಅಧ್ಯಾಯ ಮುಗಿಸಿದ್ದೇನೆ. ನೀವೊಮ್ಮೆ ನೋಡಿ ಅಭಿಪ್ರಾಯ ತಿಳಿಸಿ."

"ಹಸ್ತಪ್ರತಿ ನೋಡದೆಯೇ ಅಭಿಪ್ರಾಯ ತಿಳಿಸಬಲ್ಲೆ."

"ಏನೆಂದು ?"

"ನಿನಗಿಂತ ಚೆನ್ನಾಗಿ ಯಾರೂ ಅನುವಾದ ಮಾಡಲು ಸಾಧ್ಯವಿಲ್ಲವೆಂದು."

"ಇದು ಅಭಿಮಾನದ ಮಾತು."

"ಅಲ್ಲ—ನಿರ್ದಾಕ್ಷಿಣ್ಯ ವಿಮರ್ಶಕನ ಅಭಿಪ್ರಾಯ. ಅನುವಾದ ಕೇವಲ ಭಾಷೆಯ ರೂಪಾಂತರವಲ್ಲ; ಅದು ಭಾವಾನುವಾದರೇ ಮೂಲಕೃತಿಕರ್ತೃ ಬದುಕಿಕೊಳ್ಳುವುದು. ನನ್ನ ಭಾವಾನುಭಾವಗಳನ್ನು ನಿನಗಿಂತಲೂ ಚೆನ್ನಾಗಿ ಬಲ್ಲವರು ಯಾರು ?"

"ನಿಮ್ಮ ಅಭಿಪ್ರಾಯುವನ್ನು ಗುಂಡಣ್ಣನವರು ಒಪ್ಪಿಕೊಂಡರೇ ನಾನು ಹಸ್ತಪ್ರತಿಯನ್ನು ಮುಂಬಯಿಗೆ ಕಳಿಸಿಕೊಡುವುದು."

"ಅದೂ ಸರಿಯೇ—ಹಾಗೆಯೇ ಮಾಡು"

ಎಂದು ಹೇಳಿದ.

೩೦

ಒಂದು ರಾತ್ರಿ ಒಂಭತ್ತು ಹೊಡೆದಿತ್ತು.

ಮೂರ್ತಿ ತದೇಕಧ್ಯಾನಚಿತ್ತನಾಗಿ ತನ್ನ ಬರವಣಿಗೆ ಮುಂದುವರಿಸಿದ.

ಲಲಿತಮ್ಮ ಮೇಜಿನ ಮೇಲೆ ಕಾಫಿ ಇಟ್ಟದ್ದನ್ನೂ ಗಮನಿಸದೆ ಮೂರ್ತಿ ಕಾಫಿ ಕುಡಿದು ಲೋಟಾ ಕೆಳಗಿಟ್ಟ.

ಲಲಿತಮ್ಮ ನೋಡುತ್ತಲೇ ನಿಂತಿದ್ದಳು.

'ಇವಳೇಕೆ ಇಲ್ಲಿ' ಎನ್ನುವಂತೆ ಮೂರ್ತಿ ಅವಳತ್ತ ದೃಷ್ಟಿ ತಿರುಗಿಸಿದ.

ಲಲಿತಮ್ಮನ ಕಣ್ಣುಗಳಿಂದ ಅಶ್ರುಪ್ರವಾಹ ಹರಿಯಿತು. ಮುಖವನ್ನತ್ತ ತಿರುಗಿಸಿ ಲಲಿತಮ್ಮ ಹೊರಗೆ ಹೊರಟು ಹೋದಳು.

ಮೂರ್ತಿಯ ಬರವಣಿಗೆ ಮುಂದೆ ಸಾಗಲಿಲ್ಲ. ಲೇಖನಿಯನ್ನು ಮೇಜಿನ ಮೇಲಿಟ್ಟು ಅವನು ಲಲಿತಮ್ಮನನ್ನು ಹಿಂಬಾಲಿಸಿದ.

ಕಾಂಪೌಡಿನಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತು ಕಂಬನಿಗರೆಯುತ್ತಿದ್ದ ಪತ್ನಿಯ ಬಳಿ ಕುಳಿತು

"ಏಕೆ ಲಲಿತಾ" ಎಂದು ಮೃದುವಾಗಿ ಕೇಳಿದ.

ಲಲಿತಮ್ಮ ಉತ್ತರಿಸಲಿಲ್ಲ.

"ನನ್ನ ಮೇಲೆ ಕೋಪವೇ ?"

"..............."

"ನೀನು ಕಣ್ಣೀರು ಹಾಕಿದರೆ ನನಗೆ ಶ್ರೇಯಸ್ಸಾಗುವುದಿಲ್ಲ."

"ಹಾಗನ್ನಬೇಡಿ—ನಾನು ಕಣ್ಣೀರು ಹಾಕುವುದಿಲ್ಲ."

"ಈಗೇಕೆ ಅಳುತ್ತಿದ್ದೆ."

"ನಿಮ್ಮ—ನನ್ನ ಜೀವನ ಕಂಡು ದುಃಖವಾಯಿತು."

"ಏಕೆ ?"

"ನಾವು ಹೆಸರಿಗೆ ಮಾತ್ರ ದಂಪತಿಗಳು."

"ಯಾವ ದೃಷ್ಟಿಯಲ್ಲಿ....?"

"ನಿಮಗೆ ತಿಳಿಯದೇ? ನಾನೂ ನೀವೂ ಸರಿಯಾಗಿ ಮಾತನಾಡಿ ಎರಡು ವಾರಗಳಾದವು. ನಿಮ್ಮ ನನ್ನ ಅನುರಾಗಕ್ಕೆ ತೊಡಕು ತಂದಿಕ್ಕುವ ನಿಮ್ಮ ಸಾಹಿತ್ಯಸೃಷ್ಟಿಯ ಮೇಲೆ ನನಗೆ ಭಯಂಕರ ಕೋಪಬರುತ್ತದೆ."

"ಸಾಹಿತ್ಯಸೃಷ್ಟಿ ನಮ್ಮಿಬ್ಬರ ಅನುರಾಗಕ್ಕೆ ಪುಟಕೊಡುವುದಲ್ಲದೆ ಹಾನಿಯನ್ನುಂಟುಮಾಡುವುದಿಲ್ಲ."

"ಹೆಂಡತಿ ಅನ್ನಿಸಿಕೊಂಡಿರುವ ಈ ಪ್ರಾಣಿಗೆ ದಿನಕ್ಕೆ ಸ್ವಲ್ಪ ವೇಳೆಯನ್ನಾದರೂ ಮೀಸಲಾಗಿಡಬಾರದೇ ?"

"ನೀನು ಹೇಳುವುದು ನಿಜ—ನಾನು ನನ್ನ ಕರ್ತವ್ಯ ಪಾಲಿಸುತ್ತಿಲ್ಲ—ಭಾವಜೀವಿಗಳಾದ ಲೇಖಕರು, ಕಲಾವಿದರನ್ನು ಮದುವೆಮಾಡಿಕೊಳ್ಳಬಾರದು."

"ನಾನು ನಿಮಗೆ ತಕ್ಕವಳಲ್ಲವೆಂದು ನೀವು ಹೇಳಿದರಿತಾಯಿತು."

"ನಾನು ನಿನಗೆ ತಕ್ಕವನಲ್ಲವೆಂದು ಹೇಳುತ್ತಿದ್ದೇನೆ."

"ನಿಮ್ಮ ಮನಸ್ಸು ನೋಯಿಸಿದುದಕ್ಕೆ ಕ್ಷಮಿಸಿ."

"ಅಪರಾಧಿ ನಾನು ಎಂಬುದನ್ನು ಚೆನ್ನಾಗಿ ಬಲ್ಲೆ ಲಲಿತಾ—ನನ್ನ ಜೀವನ ಸುಧಾರಿಸಲೆತ್ನಿಸುತ್ತೇನೆ. ನಿನ್ನ ಮನಸ್ಸಿಗೆ ಸ್ವಲ್ಪವೂ ವ್ಯಥೆಯಾಗಬಾರದು. ನಿನ್ನ ನಗೆಯೇ ನನಗೂ, ನನ್ನ ಕೃತಿಗೂ ಸಂಜೀವಿನಿ."

"ಇಷ್ಟು ದಿನ ನಿಮ್ಮ ಸಂಗದಲ್ಲಿದ್ದರೂ ನನ್ನ ಮೌಢ್ಯ ಹೋಗಲಿಲ್ಲ ದೊರೆ."

"ಇದು ಮೌಢ್ಯವಲ್ಲ—ಹೆಣ್ಣುಜೀವದ ಸಹಜಾಕಾಂಕ್ಷೆ. ಈ ಮಾನವ ಗುಣ ಸ್ಪರ್ಶವಿಲ್ಲದಿದ್ದರೆ ಲೇಖಕ ಯಂತ್ರವಾಗುತ್ತಾನೆ."

"ನಾನು ಬಹಳ ಸ್ವಾರ್ಥಿಯಲ್ಲವೇ ?"

"'ನಾನು ನಿನಗೆ ಬೇಕು' ಎಂಬ ಬಯಕೆಯೇ ಅಲ್ಲವೇ 'ನಾನಿನ್ನೂ ಬದುಕಬೇಕು' ಎಂಬ ನನ್ನ ಆಕಾಂಕ್ಷೆಯ ಕ್ರತುಶಕ್ತಿ. ಕೆಲವು ಬಗೆಯ ಸ್ವಾರ್ಥದಿಂದ ಪರಾರ್ಥವೂ ಸಾಧಿಸುತ್ತದೆ."

ಪತಿಯ ದಿವ್ಯಾನುಭೂತಿ ಕಂಡ ಲಲಿತಮ್ಮ ಅವನ ವಕ್ಷಸ್ಥಲದ ಮೇಲೆ ತಲೆಯಿಟ್ಟು, ಅವನ ಕುತ್ತಿಗೆಯನ್ನಪ್ಪಿದಳು. ಮೂರ್ತಿಯ ಪ್ರೇಮಹಸ್ತ ಅವಳ ತಲೆ ನೇವರಿಸಿತು."

ನಾಲ್ಕು ದಿನಗಳು ಕಳೆದವು.

ಒಂದು ಸಂಜೆ ಮೂರ್ತಿಯ ಮನೆಗೆ ಬಂದ ಗುಂಡಣ್ಣ ಅಲ್ಲಿ ವ್ಯಾಪಿಸಿದ್ದ ನಿಶ್ಶಬ್ದತೆ ಕಂಡು 'ಮನೆಯಲ್ಲಿ ಯಾರೂ ಇಲ್ಲವೇನೋ' ಎಂದುಕೊಂಡ. ಸ್ವಲ್ಪ ಹೊತ್ತಿನೊಳಗಾಗಿ ಒಳಗಿನ ಕೋಣೆಯಿಂದ ಟೈಪ್‌ರೈಟರಿನ 'ಟಕಟಕ' ಶಬ್ದ ಕೇಳಿಬರಲಾರಂಭಿಸಿತು. 'ಮೂರ್ತಿ ಇರುವಂತಿದೆ' ಎಂದು ವೆರಾಂಡಾದಲ್ಲಿಯೇ ಕುಳಿತ. ಹೊರಗೆ ಯಾರೂ ಎದ್ದು ಬರದಿರಲು ಬಾಗಿಲುಬಳಿ ನಿಂತು 'ಲಲಿತಕ್ಕ' ಎಂದು ಕೂಗಿದ.

ಲಲಿತಮ್ಮ ಹೊರಗೆದ್ದು ಬಂದಳು.

"ಮೂರ್ತಿಯೆಲ್ಲಿ?" ಎಂದು ಕೇಳಿದ.

"ಮಲಗಿದ್ದಾರೆ."

"ಮಲಗಿದ್ದಾನೆ, ಚೆನ್ನಾಯಿತು—ಸಂಜೆ ಆರು ಗಂಟೆಯಲ್ಲಿ ಮಲಗಿ ನಿದ್ರಿಸುವುದೇ ?"

"ನಾಲ್ಕು ಗಂಟೆಗೆ 'ಸಂಪಿಗೆಯ ಹೂವು' ಮುಗಿಸಿ, ಸ್ನಾನ ಮಾಡಿ ಊಟ ಮಾಡಿದರು. ಆಯಾಸವಾಗಿತ್ತು—ಮಲಗಿದರು—ನಿದ್ರೆ ಬಂದಿತು. ಎಬ್ಬಿಸುತ್ತೇನೆ."

"ಬೇಡ ತಾಯಿ—ಎಬ್ಬಿಸಬೇಡಿ. ನಿಮ್ಮ ಅನುವಾದದ ಕೆಲಸ ಎಲ್ಲಿಗೆ ಬಂತು ?"

"ಮುಗಿಯುತ್ತಿದೆ. ಮೂರು ನಾಲ್ಕುದಿನಗಳಲ್ಲಿ ಮುಗಿಸುತ್ತೇನೆ. ಹಸ್ತಪ್ರತಿ ನೀವೊಮ್ಮೆ ನೋಡಿ ತಿದ್ದಿಕೊಡಬೇಕು."

"ನಾನೇ ! ! ಚೆನ್ನಾಯಿತು. ಇಂಗ್ಲಿಷಿಗೂ ನನಗೂ ಬಹಳ ದೂರವೆನ್ನು ವುದು ನಿಮಗೆ ಗೊತ್ತಿಲ್ಲವೇ ಲಲಿತಕ್ಕ."

"ನೀವು ಹಸ್ತಪ್ರತಿ ನೋಡಿ ಅಭಿಪ್ರಾಯ ತಿಳಿಸಿದಲ್ಲದೆ ನಾನು ಅದನ್ನು ಮುಂಬಯಿಗೆ ಕಳಿಸುವುದಿಲ್ಲ."

"ನೋಡಿ ಕೊಡುತ್ತೇನೆ ತಾಯಿ. ಅನುವಾದ ನೋಡಿ ಮೂರ್ತಿ ಏನು ಹೇಳಿದ."

"ಅವರ ಮಾತು ನಿಮಗೆ ಗೊತ್ತೇ ಇದೆಯಲ್ಲ. ಅತ್ಯದ್ಭುತವಾಗಿದೆ ಯೆಂದರು."

"ಮೂರ್ತಿಯ ಎಲ್ಲಾ ಕೃತಿಗಳನ್ನೂ ನೀವೇ ಅನುವಾದ ಮಾಡಬೇಕು ಲಲಿತಕ್ಕ."

"ಎಲ್ಲವೂ 'ತಾಯಿದೇವಿ' ಯನ್ನವಲಂಬಿಸಿದೆ."

"ಮೂರ್ತಿ, ಕರ್ನಾಟಕ ಪ್ರವಾಸ ಕೈಗೊಳ್ಳುವ ವಿಷಯ ನಿಮ್ಮಲ್ಲಿ ತಿಳಿಸಿರಬಹುದು."

"ತಿಳಿಸಿದರು. ಅವರನ್ನು ಕಳಿಸಿಕೊಡುವುದು ವಿಹಿತವೇ ?"

"ಹೋಗಿಬರಲಿ—ಅವನ ಜೀವನ, ಪ್ರತಿಭೆ ಕನ್ನಡನಾಡಿಗೇ ಸೇರಿದ್ದ ಲ್ಲವೇ ?"

"ಅವರ ಆರೋಗ್ಯದ್ದೇ ಚಿಂತೆ ನನಗೆ, ಈ ಹೊತ್ತು 'ಸಂಪಿಗೆಯ ಹೂ' ಮುಗಿದಮೇಲೆ ನೀವು ಅವರ ಮುಖ ನೋಡಬೇಕಾಗಿತ್ತು."

ಮೂರ್ತಿ ಎದ್ದವನು ಕಣ್ಣುಜ್ಜಿಕೊಂಡು ಹೊರಗೆ ಬಂದು ಕುಳಿತ.

"'ಸಂಪಿಗೆಯ ಹೂ' ಮುಗಿಸಿದೆಯಂತೆ—ಸಂತೋಷ—"

"ಮುಗಿಸಿದ್ದೆನೋ ಮುಗಿಸಿದ್ದೇನಪ್ಪಾ—ಹೇಗಾಗಿದೆಯೋ ಹೇಳಲಾರೆ."

"ಹೇಗಾಗಿರುವುದೇನು—ಚೆನ್ನಾಗಿಯೇ ಆಗಿರುತ್ತದೆ."

"ನನ್ನ ಕೃತಿ ಅಚ್ಚಾದಮೇಲೆ, ಅದನ್ನು ನಾನೇ ಒಮ್ಮೆ ಓದುವವರೆಗೆ ಧೈರ್ಯವಾಗುವುದಿಲ್ಲ ಗುಂಡಾ."

"ಇದೇನಯ್ಯಾ ಹೀಗೆ ಹೇಳುತ್ತೀ—ನಿನ್ನೆ ಮೊನ್ನೆಯ ಲೇಖಕರು ತಾವು ಬರೆದುದೆಲ್ಲಾ ಮಹಾಕೃತಿ ಎಂದು ಹೇಳಿಕೊಳ್ಳುವಾಗ ನೀನು ಧೈರ್ಯವೇ ಆಗುವುದಿಲ್ಲವೆನ್ನುವೆ."

"ಅವರು ನನಗಿಂತ ಗಟ್ಟಿಗರು—ಶ್ರೀ ಶಾರದೆಯ ಪೂರ್ಣಾನುಗ್ರಹ ಅವರಿಗೆ ದೊರೆತಿದೆಯೆನ್ನಬೇಕು."

ಲಲಿತಮ್ಮ ತಂದುಕೊಟ್ಟ ಕಾಫಿ ಇಬ್ಬರೂ ಸೇವಿಸಿದರು.

"ಗಣೇಶರೆಲ್ಲಿ ಗುಂಡಾ. ಎಲೆಕ್ಷನ್ ಆದಮೇಲೆ ಅವರನ್ನು ಕಾಣಲೇಇಲ್ಲ."

"ಸಾಲ ತೀರಿಸುವ ತರದೂದಿನಲ್ಲಿದ್ದಾರೆ—ನೀನು ಪ್ರವಾಸ ಹೊರಡುವ

ವರೆಗಾದರೂ ವಿಶ್ರಾಂತಿ ತೆಗೆದುಕೋ. ಹತ್ತಾರು ಊರುಗಳ ನೀರು ಕುಡಿದು ಬಂದು ಪುನಃ ಮಲಗಿಬಿಟ್ಟೇಯಾ ?"

"ಕಾಹಿಲೆ ಮಲಗುವುದು ಕೂಡ ಶ್ರೀಮಂತರ ಹಕ್ಕುದಾರಿಯಾಯಿತಲ್ಲಾ ಗುಂಡಾ—ಬಡವರಿಗೆ ಅಷ್ಟಾದರೂ ಅಧಿಕಾರ ಬೇಡವೇ ?"

"ಲೋಕವಿರುವುದೇ ಶ್ರೀಮಂತರಿಗಾಗಿ—ಅವರ ಹೊನ್ನಿನ ವೃಕ್ಷ ಬೆಳೆಯುವುದಕ್ಕೆ ನಾವೆಲ್ಲಾ ಗೊಬ್ಬರ."

"ಸರ್ವಸಮಾನತೆ ಜಗತ್ತಿನಲ್ಲಿ ಎಂದಿಗಾದರೂ ಸ್ಥಾಪಿಸಲು ಸಾಧ್ಯವೇ ?"

"ರಷ್ಯಾ ಸ್ಥಾಪಿಸಿದೆ ಎಂದು ಹುನಗುಂದ ಹೇಳುತ್ತಿರುವನಲ್ಲಾ !"

"ರಷ್ಯಾದ ಮಾತಿರಲಿ—ನಮ್ಮ ದೇಶದ ವಿಷಯ ಹೇಳು."

"ಆ ಬಗ್ಗೆ ನಿಷ್ಪೃಷ್ಟ ಅಭಿಪ್ರಾಯ ಯಾರೂ ವ್ಯಕ್ತಗೊಳಿಸಲು ಸಾಧ್ಯವಿಲ್ಲ. ಅಂಥ ಸುವರ್ಣಯುಗ ಬರಲೆಂದೇ ನಾನು ಹಾರೈಸುವುದು."

"ಆ ಸುವರ್ಣಯುಗ ಬರಬೇಕು ಗುಂಡಾ—ಮೂವತ್ತೈದು ಕೋಟಿ ಜನರ ಆರ್ತನಾದ ನಿಷ್ಫಲವಾಗಬಾರದು. ಸರ್ವಸಮಾನತೆಯಿಲ್ಲದಿದ್ದರೆ ಮಾನವತೆ ಉದ್ಧಾರವಾಗಲಾರದು. ಈ ಬಗ್ಗೆ ಭಾರತವೇ ಜಗತ್ತಿನ ಇತರ ರಾಷ್ಟ್ರಗಳಿಗೆ ಮೇಲ್ಪಂಕ್ತಿ ಹಾಕಿಕೊಡಬೇಕು."

"ನೀನೊಬ್ಬ ಕನಸುಗಾರ....ನಿನ್ನ ಕನಸು ನನಸಾಗಲಿ"

ಎಂದು ಗುಂಡಣ್ಣ ಹಾರೈಸಿದ.

ಮಾರನೆಯ ದಿನ ಬೆಳಗ್ಗೆ ಮೂರ್ತಿ ಎದ್ದ ಕೂಡಲೇ ಸುತರಾಮಯ್ಯನ ಮುಖ ನೋಡಬೇಕಾಯಿತು.

"ಬನ್ನಿ ಸುತರಾಮಯ್ಯನವರೇ—ಬಹಳ ದಿನವಾಯಿತು ನಿಮ್ಮನ್ನು ನೋಡಿ"

ಎಂದು ಹಾರ್ದಿಕವಾಗಿ ಸ್ವಾಗತ ಬಯಸಿದ.

ಮಹಾಪರಾಧ ಮಾಡಿದವನಂತೆ ಸುತರಾಮಯ್ಯ ಅಂಜುತ್ತ ಅಳುಕುತ್ತ ಬಂದು ಕುಳಿತು

"ಈಗೇನು ಬರೆಯುತ್ತಿರುವಿರಿ ಸಾರ್" ಎಂದು ಕೇಳಿದ.

"ನಿನ್ನೆ ತಾನೆ 'ಸಂಪಿಗೆಯ ಹೂ' ಕಾದಂಬರಿ ಮುಗಿಸಿದೆ."

"ವಿಶ್ವೇಶ್ವರಯ್ಯನವರೇ ಪ್ರಕಟಿಸುತ್ತಾರೆಯೇ ?"

"ಹೌದು."

"ಕೆಲವು ದಿನಗಳ ಹಿಂದೆ ನಾನೂ ವಿಶ್ವೇಶ್ವರಯ್ಯನವರನ್ನು ಕಂಡಿದ್ದೆ. ನನ್ನ ಕಷ್ಟಸುಖ ಹೇಳಿಕೊಂಡೆ. ಹೊಸ ಕಾದಂಬರಿ ಕೊಡುತ್ತೇನೆ ಸ್ವಲ್ಪ ಹಣ ಮುಂಗಡವಾಗಿ ಕೊಡಿ ಎಂದು ಕೇಳಿದೆ. ಅವರು ತಮ್ಮನ್ನು ಕೇಳಿ ತಿಳಿಸುವುದಾಗಿ ಹೇಳಿದ್ದರು. ಈವರೆವಿಗೂ ಯಾವ ಉತ್ತರವನ್ನೂ ಕೊಟ್ಟಿಲ್ಲ."

" 'ಜನಪದಸಾಹಿತ್ಯ'ದಿಂದ ನಿಮ್ಮ 'ತಾರಾಪಥ' ಪ್ರಕಟವಾಯಿತೇ ?"

"ಆಯಿತಲ್ಲ ಸಾರ್—ನೀವು ನೋಡಲಿಲ್ಲವೇ ?"

"ನೋಡಲಿಲ್ಲ. ಚಿಂತೆಯಿಲ್ಲ."

"ವಿಶ್ವೇಶ್ವರಯ್ಯನವರಿಗೆ ನೀವು ಒಂದು ಮಾತು ಹೇಳಬೇಕು ಸಾರ್."

"ಜನಪದಸಾಹಿತ್ಯಕ್ಕೆ 'ತಾರಾಪಥ' ಕೊಡುವ ಮುನ್ನ ನೀವು ವಿಶ್ವೇಶ್ವರಯ್ಯನವರಿಗೆ ಹೇಳಿದಿರಾ ?"

"ಇಲ್ಲ."

"ನಿಮ್ಮ ಮೊದಲನೆಯ ಕೃತಿಯನ್ನು ಪ್ರಕಟಿಸುವ ಹೊಣೆಹೊತ್ತು ಉಪಕಾರಮಾಡಿದ ಅವರಿಗೆ ನೀವು ಹೇಳುವುದು ಅಗತ್ಯವಾಗಿತ್ತು."

"ನನ್ನೆಲ್ಲಾ ಕೃತಿಗಳನ್ನೂ 'ಜನಪದಸಾಹಿತ್ಯ'ದಲ್ಲಿ ಪ್ರಕಟಿಸುವುದಾಗಿ ಹುನಗುಂದ ಭರವಸೆಯಿತ್ತ ಸಾರ್. ಅವನ ಮಾತಿಗೆ ಮರುಳಾಗಿ ನಾನು ಒಪ್ಪಿಕೊಂಡೆ. ಅವನು ಪಕ್ಕಕಳ್ಳ ಸಾರ್. ನನ್ನ 'ತಾರಾಪಥ'ದ ಗೌರವಧನವನ್ನೂ ಕೊಡಲಿಲ್ಲ."

"ಒಬ್ಬರ ವ್ಯವಹಾರದ ವಿಷಯ ಇನ್ನೊಬ್ಬರಲ್ಲಿ ಪ್ರಸ್ತಾಪಿಸಬಾರದು ಸುತರಾಮಯ್ಯ."

"ವಿಶ್ವೇಶ್ವರಯ್ಯನವರು ಪರ್ಫೆಕ್ಟ್ ಜಂಟಲ್‌ಮನ್ (Perfect gentleman) ಸರ್—ಅವರೊಂದಿಗೆ ವ್ಯವಹಾರಮಾಡಬಹುದು."

"ಉಪಕಾರಮಾಡಿದವರನ್ನು ಮರೆಯಬಾರದು ಸುತರಾಮಯ್ಯನವರೇ. ತಾರಾಪಥ ಪ್ರಕಟಿಸಿ ಹುನಗುಂದರೂ ನಿಮಗೆ ಉಪಕಾರಮಾಡಿದ್ದಾರೆ."

"ಹುನಗುಂದ ನಿಮ್ಮ ಮೇಲೆ ಮಾಡುತ್ತಿರುವ ಅಪಪ್ರಚಾರ ಗಮನಿಸಿರುವಿರಾ ಸಾರ್."

"ಗಮನಿಸಿದ್ದೇನೆ."

"ಇವನ ದುಷ್ಟತನಕ್ಕೆ ತಕ್ಕ ಶಾಸ್ತಿಮಾಡಲು ನಾನು ನಿರ್ಧರಿಸಿದ್ದೇನೆ."

"ನನಗಾಗಿಯೇ ?"

"ಹೌದು."

"ನನಗದು ಅಗತ್ಯವಿಲ್ಲ. ನಾಳೆ ಹುನಗುಂದ ಒಂದು ಒಳ್ಳೆಯ ಕೃತಿರಚಿಸಿದರೆ ಅದನ್ನು ನಾನು ಸ್ವಾಗತಿಸುತ್ತೇನೆ."

ಉತ್ಸಾಹಭಂಗ ಹೊಂದಿದ ಸುತರಾಮಯ್ಯ

"ನನ್ನ ವಿಷಯ ಏನುಮಾಡುವಿರಿ ಸಾರ್" ಎಂದು ಕೇಳಿದ.

"ಈಗ ನಿಮ್ಮಲ್ಲಿ ಯಾವದಾದರೂ ಕಾ ದ ಂ ಬ ರಿ ಯ ಹಸ್ತಪ್ರತಿ ಇದೆಯೇ ?"

"ಇಲ್ಲ–ಒಪ್ಪಂದವಾದ ಎರಡು ವಾರಗಳಲ್ಲಿ ಕಾದಂಬರಿ ಬರೆದು ಕೊಡುತ್ತೇನೆ."

"ಹಸ್ತಪ್ರತಿ ಸಿದ್ಧಮಾಡಿಕೊಂಡು ಬನ್ನಿ–ಮಾತಾಡೋಣ. ವಿಶ್ವೇಶ್ವರಯ್ಯ ಹಣವಂತರಲ್ಲ. ಸಾಹಿತ್ಯಾಭಿಮಾನದಿಂದಲೇ ಅವರು ಪ್ರಕಟನೆಗಳಿಗೆ ಕೈಹಾಕಿರುವುದು. ಅವರ ಹಿತಾಹಿತ ಗಮನಿಸುವುದು ನನ್ನ ಕರ್ತವ್ಯ."

"ಹಿರಿಯರಾದ ನೀವು ನಮಗೆ ಸಹಾಯಮಾಡದಿದ್ದರೆ ಹೇಗೆ ಸಾರ್ ?"

"ವೈಯಕ್ತಿಕವಾಗಿ ನನ್ನ ಕೈಯಲ್ಲಾಗುವ ಸಹಾಯ ಮಾಡಬಹುದು ಸುತರಾಮಯ್ಯ. ಇತರರನ್ನು ನಾನು ಹೇಗೆ ಒತ್ತಾಯಮಾಡಲು ಸಾಧ್ಯ ?"

"ನಾನು ಬರುತ್ತೇನೆ ಸಾರ್—ತೊಂದರೆ ಕೊಟ್ಟುದಕ್ಕೆ ಕ್ಷಮಿಸಿ"

ಎಂದು ಹೇಳಿ ಸುತರಾಮಯ್ಯ ಎದ್ದು ಹೋದ.

ಮೂರ್ತಿ ಖಿನ್ನಮನಸ್ಕನಾಗಿ ಚಿಂತಿಸುತ್ತ ಕುಳಿತ.

'ನಮ್ಮ ಬರೆಹಗಾರರೂ ಇಂಥ ಸಮಯಸಾಧಕರಾಗಬೇಕೇ ?'

'ನನ್ನಿಂದ ಕೆಲಸವಾಗಬೇಕೆಂದು ಹುನಗುಂದನನ್ನು ಬಯ್ಯುವುದೇ ?'

'ಗುಂಡ ಹೇಳಿದ ಮಾತು ಸತ್ಯವಾಯಿತು'

ಎಂದು ಮಮ್ಮಲ ಮರುಗಿದ.

'ನಾಳಿನಿಂದ ಸುತರಾಮಯ್ಯ ನಿನ್ನ ಪರಮಶತ್ರು'

ಎಂದು ಮೂರ್ತಿಯ ಅಂತರ್ವಾಣಿ ಮೊರೆಯಿತು.

೩೧

'ಸುಖಜಗತ್ತಿ'ನಲ್ಲಿ ಬಿರುಸಾದ ಚರ್ಚೆ ಆರಂಭವಾಗಿತ್ತು. ಹುನಗುಂದನ ಪಕ್ಷಸೇರಿದ್ದ ಸುತರಾಮಯ್ಯನೂ ಚರ್ಚೆಯಲ್ಲಿ ಉತ್ಸಾಹದಿಂದ ಭಾಗವಹಿಸಿದ್ದ.

ಮೂರ್ತಿಯ ಬಗ್ಗೆ ಹುನಗುಂದ ಒಂದೇ ಸಮನೆ ವಿಷಕಾರುತ್ತಿದ್ದ. ಅವನ ಭರ್ತ್ಸನೆ ಕೇಳಿಕೇಳಿ ಬೇಸತ್ತ ಪುಟ್ಟಣ್ಣ,

"ಕೈಯಲ್ಲಿ ಹರಿಯದವನು ಮುಖಪರಚಿಕೊಂಡಂತೆ ಮಾಡುವೆಯಲ್ಲಾ ಹುನಗುಂದ."

"ಏಕೆ ಸಾರ್."

"ಸಾಹಿತ್ಯದಲ್ಲಿ ನೀನು ಮೂರ್ತಿಯವರನ್ನು ಎದುರಿಸುವ ಮಾತು ಹಾಗಿರಲಿ; ರಾಜಕೀಯದಲ್ಲಿಯೂ ನೀನು ಅವರ ಎದುರು ನಿಲ್ಲಲಾಗಲಿಲ್ಲ."

"ಗಣೇಶ ಅವರ ಕಡೆ ಸೇರಿಕೊಳ್ಳದಿದ್ದರೆ ತೋರಿಸುತ್ತಿದ್ದೆ ಪುಟ್ಟಣ್ಣ ನವರೇ."

"ನೀನೂ ನಿಮ್ಮ ಪಾರ್ಟಿಯವರೂ ಗಣೇಶರ ವಿರುದ್ಧ ಮಸಲತ್ತು ಮಾಡಿದಿರಿ. ಆದರೂ ಅವರು ನಿಮ್ಮ ಇತರ ಉಮೇದುವಾರರಿಗಿಂತಲೂ ಹೆಚ್ಚು ಮತ ಗಳಿಸಿದರು. ನಿಮ್ಮ ಸ್ವಕ್ಷೇತ್ರವಾದ 'ಶ್ರಮಜೀವಿಕ್ಷೇತ್ರ'ದಲ್ಲಿಯೇ ನಿಮಗೆ ಸೋಲಾಯಿತಲ್ಲ."

"ಅದಕ್ಕೇ ನಾವು ಮೂರ್ತಿಯವರಂಥ ಬೂಜ್ವಾಗಳ ವಿರುದ್ಧ ಪ್ರಬಲ ಹೋರಾಟ ನಡಸಬೇಕಾಗಿರುವುದು."

"ನಿಮ್ಮ ಹೋರಾಟ–ಬೂರ್ಜ್ವಾ–ಪುರೋಗಾಮಿತ್ವ ಈ ಶಬ್ದಗಳನ್ನು ಸಾಕುಮಾಡಿರಯ್ಯಾ. ಜನಕ್ಕೆ ಬೇಕಾಗಿರುವುದು ಶಬ್ದಗಳ ಧ್ವಾನವಲ್ಲ. ನಿಷ್ಕಾಮಸೇವೆ. ಮೂರ್ತಿಯವರ ನಿಜವಾದ ಯೋಗ್ಯತೆಯನ್ನರಿಯದೆ ನೀವು ಕೆಟ್ಟರಿ—ನಿಮ್ಮ ವಿಚಿತ್ರ ತತ್ವಾನುಷ್ಠಾನವೇ ನಿಮಗೆ ಶತ್ರುವಾಗಿದೆ."

"ಮೂರ್ತಿ ಇವನ ಮೇಲೆ ಚೆನ್ನಾಗಿ ಮಂಕುಬೂದಿ ಚೆಲ್ಲಿದ್ದಾನಯ್ಯಾ" ಎಂದು ವಶಿಷ್ಠ ಟೀಕಿಸಿದ.

ರಾಘವಯ್ಯ ತನ್ನ ಕೆಂಗಣ್ಣು ಅರಳಿಸುತ್ತಾ

"ಅವನಲ್ಲಿ ಯಾವ ಮಹತ್ವ ಕಂಡಿರುವೆಯೋ ಪುಟ್ಟಣ್ಣ" ಎಂದು ಕೇಳಿದ.

"ಮಹತ್ವ ಕಂಡಿದ್ದೇನೆ. ನಮ್ಮ ಯಾರಲ್ಲಿಯೂ ಇಲ್ಲದ ಮಹತ್ವ ಕಂಡಿದ್ದೇನೆ. ಮೊದಲನೆಯದು ಮೂರ್ತಿಯವರ ನಿಸ್ಸೀಮ ದೇಶಭಕ್ತಿ; ಎರಡನೆಯದು ಅವರ ಜೀವಂತ ಸಾಮ್ಯವಾದ; ಮೂರನೆಯದು ಅವರ ಅನ್ಯಾದೃಶ ಅನುಕಂಪ. ಗುಣವೆಲ್ಲೇ ಇರಲಿ ಅದನ್ನು ಗೌರವಿಸುವುದನ್ನು ಮೂರ್ತಿಯವರಿಂದ ಕಲಿಯಬೇಕು."

"ನೀನು ಇನ್ನೊಮ್ಮೆ ಆ ಮೂರ್ತಿಯ ಪ್ರಶಂಸೆಮಾಡಿದರೆ ನಾನು ಸುಮ್ಮನಿರುವುದಿಲ್ಲ ಪುಟ್ಟಣ್ಣ."

"ಮೂರ್ತಿಯವರನ್ನು ತೆಗಳುವುದಕ್ಕಾಗಿಯೇ ನಾವು ನಿತ್ಯಸೇರುವುದಾಗಿದೆ ರಾಘವಯ್ಯ. ಈ ಕಾರ್ಯಕ್ರಮ ನನಗೆ ಬೇಸರವನ್ನುಂಟುಮಾಡಿದೆ."

"ನಿಮ್ಮಮ್ಮ ಮೂರ್ತಿಯನ್ನು ಹೊಗಳಿದುದರಿಂದ ನಿನ್ನ ತಲೆಯೇ ಕೆಟ್ಟು ಹೋಯಿತೇನೋ ?"

"ಹೌದು."

"ನಿನ್ನ ವಿವೇಚನಾಶಕ್ತಿಗೊಂದು ನೋಬೆಲ್ ಪ್ರೈಸ್ ಕೊಡಬೇಕಯ್ಯಾ."

"ನನ್ನ ವಿವೇಚನಾಶಕ್ತಿ ನಿನ್ನ ವಿವೇಚನಾಶಕ್ತಿಯದಕ್ಕಿಂತ ಕೆಳದರ್ಜೆಯದಲ್ಲ."

"ತಿಳುವಳಿಕೆಯಿಲ್ಲದ ಮುದುಕಿಯ ಮಾತೇ ನಿನಗೆ ಪ್ರಾಧಾನ್ಯವಲ್ಲವೇ ?"

"ಹೌದು–ಆ 'ತಿಳುವಳಿಕೆಯಿಲ್ಲದ ಮುದುಕಿ' ನನ್ನ ತಾಯಿ—ಈ ದೇಹ ಇಷ್ಟು ಬೆಳೆಯಲು ಆಕೆ ಜೀವ ತೆತ್ತಿದ್ದಾಳೆ."

"ಆಕೆಯ ಕುತ್ತಿಗೆಯಪ್ಪಿಕೊಂಡು ಅಳುತ್ತ ಕೂಡು ಹೋಗು."

"ರಾಘವಯ್ಯ—ಈಗ ನಿನ್ನ ಜ್ಞಾನ ನೆಟ್ಟಗಿಲ್ಲ. ದಯೆಯಿಟ್ಟು ನನ್ನ ತಾಯಿಯನ್ನು ಟೀಕಿಸಬೇಡ. ಈ ಸಂದರ್ಭವಲ್ಲಿ ನಿನ್ನ ಬೀರ್‌ಬಾಯಿಯಿಂದ ಆಕೆಯ ಪವಿತ್ರಹೆಸರಿಗೆ ಅಪಚಾರವಾಗಬಾರದು."

ಪರಿಸ್ಥಿತಿ ವಿಕೋಪಕ್ಕೆಹೋದುದನ್ನು ಕಂಡು ವಶಿಷ್ಠ 'ಖಾಜಿನ್ಯಾಯ' ಮಾಡಲೆತ್ನಿಸಿದ. ಉದ್ವಿಗ್ನನಾಗಿದ್ದ ಪುಟ್ಟಣ್ಣ ಎದ್ದು ಅಲ್ಲಿಂದ ಹೊರಟುಬಿಟ್ಟ.

ಕಬ್ಬನ್‌ಪಾರ್ಕಿಗೆ ಬಂದು ಪುಟ್ಟಣ್ಣ ಚಿಂತಿಸುತ್ತ ಕುಳಿತ. ರಾಘವಯ್ಯ, ವಶಿಷ್ಠ, ಹುನಗುಂದರ ಸಹವಾಸ ಅವನ ನೀತಿ, ನಡತೆ, ಚಿತ್ತವೃತ್ತಿಯ ಮೇಲೆ ಬೀರಿದ್ದ ಪ್ರಭಾವವನ್ನು ಕುರಿತು ಯೋಚಿಸಿದ. ಮನಸ್ಸಿಗೆ ಅಪಾರವೇದನೆಯಾಯಿತು.

ಮೂರ್ತಿಗೆ ತಾನು ಬಗೆದಿದ್ದ ದ್ರೋಹ; ಹುನಗುಂದನ ಮೇಲಣ ವಿಶ್ವಾಸಕ್ಕಾಗಿ ಮೂರ್ತಿಯ ವಿರುದ್ಧ ಬರೆದ ಲೇಖನಗಳು ಅವನ ಚಿತ್ತಫಲಕದ ಮೇಲೆ ಸುಳಿದಾಡಿದವು.

ರಾಘವಯ್ಯ ತನ್ನ ತಾಯಿಯ ಬಗ್ಗೆ ಆಡಿದ್ದ ಸಣ್ಣಮಾತುಗಳು ಅವನ ಕಿವಿಯನ್ನಪ್ಪಳಿಸುತ್ತಿದ್ದವು.

'ಈ ಸ್ಥಿತಿಯಲ್ಲಿ ಮನೆಗೆ ಹೋಗಿ ತಾಯಿಗೆ ಮುಖವನ್ನು ಹೇಗೆ ತೋರಿಸಲಿ'

ಎಂಬ ಕೊರಗು ಮೂಡಿತು.

ಪಶ್ಚಾತ್ತಾಪದಿಂದ ಪರಿತಪಿಸುತ್ತಿದ್ದ ಪುಟ್ಟಣ್ಣನನ್ನು ಪ್ರಶಾಂತಗೊಳಿಸಲು ತಂಗಾಳಿ ತೀಡಿತು.

ಮನಸ್ಸಿನಲ್ಲಿ ನಿರ್ಧಾರ ಮೂಡಿದೊಡನೆಯೇ ಪುಟ್ಟಣ್ಣ ಥಟ್ಟನೆದ್ದು ಹೊರಟ.

ಅವನು ಮೂರ್ತಿಯ ಮನೆ ಸೇರುವವೇಳೆಗೆ ಹತ್ತುಗಂಟೆಯಾಗಿತ್ತು. ಲಲಿತಮ್ಮ ಪತಿಗೆ ತಾಂಬೂಲಮಡಿಸಿಕೊಡುತ್ತಿದ್ದಳು. ಪುಟ್ಟಣ್ಣನನ್ನು ಕಂಡೊಡನೆಯೇ ಮೂರ್ತಿಯೇ ಎದ್ದು ಬಂದು

"ಬನ್ನಿ ಪುಟ್ಟಣ್ಣನವರೇ—ಬನ್ನಿ" ಎಂದ.

ಪುಟ್ಟಣ್ಣ ಹೊಸಿಲೊಳಗೆ ಕಾಲಿಟ್ಟು

"ಇಲ್ಲಿಗೆ ಬರುವ ಯೋಗ್ಯತೆ, ಅಧಿಕಾರ ಎರಡೂ ನನಗಿಲ್ಲ ಸಾರ್."

"ಇರಲಿ ಬನ್ನಿ–ಕಳೆದಮಾತು ಕಟ್ಟಿಕೊಂಡೇನು ಪ್ರಯೋಜನ."

ಪುಟ್ಟಣ್ಣ ಬಂದು ಕುಳಿತಮೇಲೆ ಮೂರ್ತಿ

"ಪತ್ರಿಕೆ ಚೆನ್ನಾಗಿ ನಡೆದಿದೆಯೇ ?" ಎಂದು ಕೇಳಿದ.

"ತಕ್ಕಮಟ್ಟಿಗೆ ನಡೆದಿದೆ ಸಾರ್."

"ಹಳಬರೆಲ್ಲಾ ಇದ್ದಾರೆಯೇ ?"

"ಕೆಲಸಗಾರರಿದ್ದಾರೆ. ಸಂಪಾದಕಮಂಡಲಿಯಲ್ಲಿ ಕೆಲವು ಬದಲಾವಣೆ ಗಳಾಗಿವೆ."

"ನಿಮ್ಮ ಸಂಬಳ ಹೆಚ್ಚಾಯಿತೇ ?"

"ಆ ವಿಷಯ ಮಹಾಗೋಳಾಗಿದೆ ಸಾರ್. ಆಗಸ್ಟ್ ತಿಂಗಳ ಸಂಬ ಇನ್ನೂ ಬಂದಿಲ್ಲ."

"ಸಂಬಳ ಸರಿಯಾಗಿ ಕೊಡದಿದ್ದರೆ ನೀವು ಪೂರೈಸುವುದು ಹೇಗಪ್ಪಾ ಪತ್ರಿಕೆ ಲಾಭ ತರುತ್ತಿಲ್ಲವೇ ?"

"ಅದೆಂಥ ಪತ್ರಿಕೆ ಸಾರ್. ನೀವಿರುವವರೆಗೆ 'ಜನಸಂದೇಶ' ಸ್ವತಂತ್ರಾ ಭಿಪ್ರಾಯದ ಪತ್ರಿಕೆಯಾಗಿತ್ತು. ಈಗ........"

"ಈಗ............"

"ಅದೂ ಒಂದು ಸರ್ಕಾರದ ಬುಲೆಟಿನ್ ಆಗಿದೆ. ಸೆಕ್ರೆಟೇರಿಯಟ್‌ನವರು ಹೇಳುವ ವಿಷಯಗಳ ಮೇಲೆ, ಹೇಳುವಂತೆ ನಾವು ಪ್ರಧಾನ ಲೇಖನಗಳನ್ನು ಬರೆಯಬೇಕಾಗಿದೆ.—ನಾನು ನಿಮಗೆ ತುಂಬ ಅನ್ಯಾಯಮಾಡಿದೆ ಸಾರ್."

"ಪುಟ್ಟಣ್ಣ-ನೀವು ನನಗೆ ಮಹೋಪಕಾರಮಾಡಿರುವಿರಿ. ಪತ್ರಿಕೆ ಕಟ್ಟಿಕೊಂಡಮೇಲೆ ನನ್ನ ಸಾಹಿತ್ಯಸೃಷ್ಟಿ ನಿಂತುಹೋಗಿತ್ತು. ಪತ್ರಿಕೆ ಬಿಟ್ಟ ಮೇಲೆ ಕೆಲವು ದಿನ ನನಗೂ ನಿಮ್ಮ ಮೇಲೆ ತುಂಬ ಆಗ್ರಹವಿತ್ತು. ಸ್ವಲ್ಪ ಕಾಲಾನಂತರ ಬುದ್ಧಿ ತಿಳಿಯಾಯಿತು."

"ಸಾರ್-ನೀವು 'ಜನಸಂದೇಶ'ದಲ್ಲಿದ್ದಾಗ ಕೇವಲ ಪತ್ರಿಕಾ ಸಂಪಾದಕ ರಾಗಿರಲಿಲ್ಲ. ನಮ್ಮ ಹಿರಿಯಣ್ಣಂದಿರಾಗಿದ್ದಿರಿ-ಗುರುಗಳಾಗಿದ್ದಿರಿ. ನಾವಿಂದು ಆ ಭಾಗ್ಯದಿಂದ ವಂಚಿತರಾಗಿದ್ದೇವೆ."

"ಪತ್ರಿಕೆ ಬಿಟ್ಟೆನೆಂದು ನನ್ನ ವಿಶ್ವಾಸ ಇಳಿಮುಖವಾಗಿಲ್ಲ ಪುಟ್ಟಣ್ಣ."

ಈ ಮಾತು ಕೇಳಿ ಪುಟ್ಟಣ್ಣನಿಗೆ ಅತ್ಯಾನಂದವಾಯಿತು.

"ನಾನು ನಿಮ್ಮಲ್ಲಿ ಒಂದೆರಡು ವಿಷಯ ಅರಿಕೆಮಾಡಿಕೊಳ್ಳಬೇಕಾಗಿದೆ."

"ಅದರಿಂದ ನಿಮ್ಮ ಮನಸ್ಸು ಹಗುರವಾಗುತ್ತದೆಯೇ ?"

"ಹೌದು—ಪುನರ್ಜನ್ಮ ಬರುತ್ತದೆ."

"ಹಾಗಾದರೆ ಹೇಳಿ."

ರಾಘವಯ್ಯ, ವಶಿಷ್ಠ, ಹುನಗುಂದರ ಸ್ನೇಹ ಸಹವಾಸದಿಂದ ತನಗೊದಗಿದ್ದ ಮಾನಸಿಕ ಪತನವನ್ನು ಸವಿಸ್ತಾರವಾಗಿ ಪುಟ್ಟಣ್ಣ ನಿರೂಪಿಸಿ

"ಅದೇ ರಾಘವಯ್ಯನ ಬಾಯಿಂದ ಇಂದು ನನ್ನ ತಾಯಿಯವರ ಭರ್ತ್ಸನೆ ಕೇಳಬೇಕಾಯಿತು. ಆಕೆ ಅವಿದ್ಯಾವಂತೆ—ಆದರೆ ಮೂಢಳಲ್ಲ."

"ಯಾವ ತಾಯಿಯೂ ಮೂಢಳಲ್ಲ ಪುಟ್ಟಣ್ಣ. ಪ್ರಕೃತಿ ಸ್ತ್ರೀಗೆ ಮಾಡಿರುವ ಅನ್ಯಾಯಕ್ಕೆ ಪ್ರತಿಯಾಗಿ ಮಾಡಿರುವ ಉಪಕಾರವೇ ತಾಯ್ತನ. ತಾಯ್ತನ ಹೆಣ್ಣನ್ನು ಮಹಾದೇವಿಯನ್ನಾಗಿ ಮಾಡುತ್ತದೆ."

"ತಾವು ಸರ್ವಭೂಷಣ ಶಿವಯೋಗಿಗಳ ಮಠದಲ್ಲಿ 'ಅಲ್ಲಮ ಪ್ರಭು'ವಿನ ಮೇಲೆ ಭಾಷಣಮಾಡಿದ ದಿನ ಅವರು ಬಂದಿದ್ದರು."

"..............."

"ತಮ್ಮ ಭಾಷಣ ಕೇಳಿ ಮುಗ್ಧರಾದರು. ಅವರ ಸಂತೋಷ ನಾನು ಬಣ್ಣಿಸಲಾರೆ. ನಿಮ್ಮನ್ನು ಮನೆಗೆ ಕರೆದುಕೊಂಡು ಬಾರೆಂದು ಹಲವು ಸಾರೆ ಹೇಳಿದರು. ಇತ್ತ ಬರಲು ನನಗೇ ಮುಖವಿರಲಿಲ್ಲ."

"ತಾಯಂದಿರ ಆಶೀರ್ವಾದವೇ ನನ್ನ ಅಭ್ಯುದಯದ ಅಡಿಗಲ್ಲು ಪುಟ್ಟಣ್ಣ."

"ನಾಳೆ ನಮ್ಮ ಮನೆಗೆ ಬರುವಿರಾ ಸಾರ್."

"ಖಂಡಿತ ಬರುತ್ತೇನೆ."

"ನಾಲ್ಕುಗಂಟೆಗೆ ಬರಲು ಸಾಧ್ಯವೇ ?"

"ಸಾಧ್ಯ—ನಿಮಗೆ ಆಫೀಸ್ ಇರುತ್ತದಲ್ಲಾ ?"

"ಮಧ್ಯಾಹ್ನಾನಂತರ ರಜಾ ತೆಗೆದುಕೊಳ್ಳುತ್ತೇನೆ—ಲಲಿತಮ್ಮನವರನ್ನು ದಯೆಯಿಟ್ಟು ಕರೆದುಕೊಂಡುಬರಬೇಕು."

"ಅಗತ್ಯವಾಗಿ ಆಗಲಿ."

"ನಾನು ಬಹಳ ಸಣ್ಣವನು ಸಾರ್."

"...................."

"ಅಜ್ಞಾನಿ."

"ತಾಯಿಯನ್ನು ಪೂಜಿಸುವ ಯಾವ ಮಗನೂ ಸಣ್ಣವನಲ್ಲ-ಅಜ್ಞಾನಿಯಲ್ಲ. ಚಿಂತಿಸಬೇಡಿ."

"ನಾಳೆ ನಾಲ್ಕಕ್ಕೆ ನಾನೇ ಇಲ್ಲಿಗೆ ಬಂದು ಕರೆದುಕೊಂಡುಹೋಗುತ್ತೇನೆ.

"ನಿಮಗೇಕೆ ತೊಂದರೆ. ನಾವೇ ಬರುತ್ತೇವೆ."

"ತಾವು ನನಗೆ ಇನ್ನೂ ಒಂದು ಉಪಕಾರಮಾಡಬೇಕು."

"ಹೇಳಿ."

"ಯಥಾಕ್ರಮದಂತೆ ಈ ವರ್ಷವೂ 'ಜನಸಂದೇಶ' ದೀಪಾವಳಿಗೆ ವಿಶೇಷಸಂಚಿಕೆ ಹೊರಡಿಸುತ್ತದೆ. ತಾವು ಒಂದು ಲೇಖನ ಬರೆದುಕೊಡಬೇಕು."

"ನನ್ನ ಲೇಖನ ನೀವು ಪ್ರಕಟಿಸಿದರೆ ನಿಮ್ಮ ಸ್ನೇಹಿತರೆಲ್ಲಾ ಕಳಚಿ ಕೊಳ್ಳುತ್ತಾರೆ. ಅವರು ನಿಮ್ಮ ಮೇಲೂ ಅಪಪ್ರಚಾರ ಆರಂಭಿಸಬಹುದು."

"ಎಲ್ಲದಕ್ಕೂ ನಾನು ಸಿದ್ಧನಾಗಿದ್ದೇನೆ ಸಾರ್. ಅಗತ್ಯಬಿದ್ದರೆ ನನ್ನ ಕೆಲಸಕ್ಕೆ ರಾಜೀನಾಮೆ ಕೊಡುವುದಕ್ಕೂ ಹಿಂದೆಗೆಯುವುದಿಲ್ಲ."

"ಅಷ್ಟುದೂರ ಹೋಗಬೇಡಿ ಪುಟ್ಟಣ್ಣ. ಕಾಲಸ್ಥಿತಿ ಚೆನ್ನಾಗಿಲ್ಲ. ಲೇಖನ ಬರೆದುಕೊಡುತ್ತೇನೆ. ನಾನು ಇನ್ನು ಎರಡು ಮೂರು ದಿನಗಳಲ್ಲಿ ಉತ್ತರಕರ್ನಾಟಕ ಪ್ರವಾಸ ಕೈಗೊಳ್ಳುವೆನು. ಪ್ರವಾಸ ಮುಗಿಸಿಕೊಂಡು ಬಂದಮೇಲೆ ಲೇಖನ ಕೊಟ್ಟರಾಗುತ್ತದೆಯೇ?"

"ವಿಶೇಷ ಸಂಚಿಕೆಯ ಮುದ್ರಣ ಆರಂಭವಾಗಿದೆ ಸಾರ್. ಮಾನ್ಯ ಲೇಖಕರ ಲೇಖನಗಳಿಗಾಗಿ ಮೊದಲಿನ ನಲವತ್ತು ಪುಟಗಳನ್ನು ಮೀಸಲಾಗಿಟ್ಟದ್ದೇನೆ."

"ಹಾಗೇ ಆಗಲಿ—ನಾನು ಹೋಗುವ ಮುನ್ನವೇ ಲೇಖನ ಮುಗಿಸಿಕೊಡುತ್ತೇನೆ."

ಪುಟ್ಟಣ್ಣ ಸಮಾಧಾನಗೊಂಡು ಗೃಹಾಭಿಮುಖನಾದ.

ಒಳಗೆ ಬಂದ ಲಲಿತಮ್ಮ ನಸುನಗುತ್ತ

"ದೊರೆ–ನಿಮ್ಮ ಗುರುಬಲ ಬಹಳ ಚೆನ್ನಾಗಿದೆ" ಎಂದಳು.

"ಏಕೆ?"

"ಶತ್ರುಗಳೆಲ್ಲಾ ಮಿತ್ರರಾಗುತ್ತಿದ್ದಾರೆ."

"ಅದೇ ನನ್ನ ಪರಮಭಾಗ್ಯ ಲಲಿತಾ. ಮಾನವ ಅಜ್ಞಾನಿಯೇ ವಿನಾ ಪಾಪಿಯಲ್ಲ ಎನ್ನುವ ನನ್ನ ಸಿದ್ಧಾಂತಕ್ಕೆ ಸಮರ್ಥನೆ ದೊರೆತರೆ ನನಗೆ ಸಂತೋಷವಾಗುವುದಿಲ್ಲವೇ" ಎಂದ.

೩೭

ಚಾಮರಾಜಪೇಟೆ ನಾಲ್ಕನೆಯ ರಸ್ತೆಯಲ್ಲಿದ್ದ ಸಾಹುಕಾರ್ ಬಸಪ್ಪನವರ ಬಂಗಲೆಯ ಉಪಗೃಹದಲ್ಲಿಯೇ (Out house) ಪುಟ್ಟಣ್ಣ ವಾಸಿಸುತ್ತಿದ್ದುದು. ಸ್ವಜನಾಭಿಮಾನಿಗಳಾಗಿದ್ದ ಸಾಹುಕಾರ ಬಸಪ್ಪನವರು ಹಿಂದೆಕೊಟ್ಟಿದ್ದ ಬಾಡಿಗೆಯನ್ನೇರಿಸಿಯೇ ಪುಟ್ಟಣ್ಣನಿಗೆ ಮನೆ ಕೊಟ್ಟಿದ್ದರೂ ಅಡಿಗಡಿಗೂ 'ನಮ್ಮವರೂಂತ ಅಗ್ಗಕ್ಕೆ ಕೊಟ್ಟಿದ್ದೇನೆ' ಎಂಬ ಪಲ್ಲವಿ ಹಾಡದೆ ಇರುತ್ತಿರಲಿಲ್ಲ. ಮನೆ ಕೊಟ್ಟಿದ್ದ ದಾಕ್ಷಿಣ್ಯಕ್ಕೆ ಆಗಾಗ್ಗೆ ಪುಟ್ಟಣ್ಣ ಸಾಹುಕಾರರ ಕೆಲವು ಖಾಸಗೀ ಕೆಲಸಗಳನ್ನು ನಿರ್ವಹಿಸಬೇಕಾಗಿತ್ತು. ಸರ್ಕಾರಿ ವರ್ತುಲಗಳಲ್ಲಿ ಅವನಿಗಿದ್ದ ವರ್ಚಸ್ಸನ್ನು ಸಾಹುಕಾರರು ಸಮಯೋಚಿತವಾಗಿ ಉಪಯೋಗಿಸಿ ಕೊಳ್ಳುತ್ತಿದ್ದರು.

ಮೂರ್ತಿ ಪತ್ನಿಯೊಂದಿಗೆ ಬರುವ ಸುದ್ದಿ ಕೇಳಿ ಪುಟ್ಟಣ್ಣನ ತಾಯಿ ಸಿದ್ದವ್ವ ಹಿರಿಹಿರಿ ಹಿಗ್ಗಿದಳು. ಬೆಳಿಗ್ಗೆಯಿಂದ ಮನೆ ಗುಡಿಸಿ, ಸಾರಿಸಿ, ಬಟ್ಟೆಯಿಂದ ಕುರ್ಚಿ, ಮೇಜು, ಪಠಗಳನ್ನೊರಸಿ ಓರಣಮಾಡಿದಳು. ಮನೆಯಲ್ಲಿ ತಾನು ಕೆಲವು ತಿಂಡಿಮಾಡುವುದಾಗಿಯೂ, ಪುಟ್ಟಣ್ಣ ಹೋಟಲಿನಿಂದ ಕೆಲವು ಸಿಹಿತಿಂಡಿಗಳನ್ನು ತರಬೇಕೆಂದು ತಿಳಿಸಿದಳು.

ಪುಟ್ಟಣ್ಣ ಮನೆಯ ಹೊರಗಡೆ ನಿಂತುಕೊಂಡು ತನ್ನ ಅತಿಥಿಗಳಿಗೆ ಕಾಯುತ್ತಿದ್ದ. ನಾಲ್ಕೂಕಾಲು ಗಂಟೆಗೆ ಸರಿಯಾಗಿ ಮೂರ್ತಿ, ಲಲಿತಮ್ಮ ಒಂದು ಗಾಡಿಯಲ್ಲಿ ಬಂದಿಳಿದರು.

ಮನೆಯೊಳಗೆ ಬಂದ ಅತಿಥಿಗಳನ್ನು ಸಿದ್ದವ್ವನೇ ಸ್ವಾಗತಿಸಿ ಕುರ್ಚಿಗಳತ್ತ ಕೈತೋರಿದಳು. ಮೂರ್ತಿ ವಿನಯದಿಂದ ನೆಲದ ಮೇಲೆ ಹಾಸಿದ್ದ ಮಂದಲಿಗೆಯ ಮೇಲೆ ಕುಳಿತ; ಲಲಿತಮ್ಮನೂ ಅವನ ಜತೆ ಕುಳಿತಳು.

ತಾಯಿ, ಮಗನ ಉತ್ಸಾಹ, ಆನಂದ ಕಂಡು ಮೂರ್ತಿಗೆ ಬಹು ಸಂಕೋಚವಾಯಿತು.

ಮನೆಯಲ್ಲಿ ಸಿದ್ದವ್ವ ಮಾಡಿದ್ದ ಪೂರಿ, ಪಲ್ಯ, ಚಟ್ನಿ—ಕೋಸುಂಬರಿ, ವಡೆಯನ್ನೂ, ಹೊಟೇಲಿನ ಜಾಂಗೀರು, ಜಾಮೂನು, ಚೌಚೌಗಳನ್ನೂ, ಬಗೆಬಗೆಯ ಹಣ್ಣುಗಳನ್ನೂ ಪುಟ್ಟಣ್ಣ ತಂದು ಅತಿಥಿಗಳ ಮುಂದಿಟ್ಟ.

ಸಿದ್ದವ್ವ ಎಲ್ಲರನ್ನೂ ಉಪಚರಿಸುತ್ತ ಅಲ್ಲಿಯೇ ಕುಳಿತಳು.

ಮೂರ್ತಿ ಪೂರಿಪಲ್ಯ, ಕೋಸುಂಬರಿ, ವಡೆ ಸೇವಿಸಿ ಹೊಟೇಲಿನ ಸಿಹಿ ತಿಂಡಿಗಳನ್ನು ನಿರಾಕರಿಸಿದ. ಸಿದ್ದವ್ವ ಅವನ ತಟ್ಟೆಗೆ ಮತ್ತೆ ನಾಲ್ಕು ಪೂರಿ ಹಾಕಿ, ತಿನ್ನಲು ಬೇಡಿಕೊಂಡಳು. ಸಿದ್ದವ್ವನಿಗೆ ಅಸಮಾಧಾನವಾಗಬಾರ ದೆಂದು ಮೂರ್ತಿ ಅವನ್ನೂ ತಿಂದು ಮುಗಿಸಿದ.

ಲಲಿತಮ್ಮ ಸಿದ್ದವ್ವನ ಕಡೆ ತಿರುಗಿ

"ತಾಯೀ, ಇವರು ಇಷ್ಟು ತಿಂಡಿ ತಿಂದಿರುವುದು ಇವತ್ತೇ! ಊಟ ತಿಂಡಿಯೆಂದರೆ ಇವರಿಗೆ ವಿಷಪ್ರಾಯ."

"ಹಾಗೆ ಮಾಡಬಾರದಣ್ಣಾ—ಚೆನ್ನಾಗಿ ಊಟ ಮಾಡಬೇಕು. ಇಷ್ಟು ಓದಿ ಬರೆಯುವ ನೀವು ಗಟ್ಟಿಯಾಗಿರಬೇಕಪ್ಪಾ !"

ಎಂದು ಕಾಫಿ ಕೆಟಲು, ಲೋಟಾಗಳನ್ನು ಸಿದ್ದವ್ವ ತಂದಿಟ್ಟಳು. ಪುಟ್ಟಣ್ಣ ಕಾಫಿ ಬಗ್ಗಿಸಿ ಅತಿಥಿಗಳಿಗಿತ್ತ.

"ನೀವು ಮಠದಲ್ಲಿ ಉಪನ್ಯಾಸ ಮಾಡಿದ ದಿವಸ ನಾನು ಬಂದಿದ್ದೆ."

"ಪುಟ್ಟಣ್ಣ ಹೇಳಿದರು."

"ಅದೇನು ಮಾತಾಡ್ತೀ ನಮ್ಮಪ್ಪ—ಕಾವೇರಿ ಹರಿದ್ಹಂಗೆ ಹರೀತೈತಲ್ಲಾ ಮಾತು."

"ಇವರು ಇಂಗ್ಲೀಷಿನಲ್ಲಿಯೂ ಹಾಗೇ ಮಾತಾಡುತ್ತಾರವ್ವಾ"

ಎಂದು ಪುಟ್ಟಣ್ಣ ಸೇರಿಸಿದ.

"ನಿಮ್ಮನ್ನು ಕರ್ಕೊಂಡು ಬಾಂತ ನಮ್ಮ ಪುಟ್ಟನಿಗೆ ಎಷ್ಟೋ ಸಲ ಹೇಳಿದೆ—ಇವತ್ತು ದಿನ ಕೂಡಿಬಂತು. ಬಡವರ ಮನೆಗೆ ದೊಡ್ಡಮನಸ್ಸು ಮಾಡಿ ನೀವು ಬಂದಿರಲ್ಲಾ—ನನ್ನ ಸಂತೋಷ ಅಷ್ಟಿಷ್ಟಲ್ಲ !"

"ನಮ್ಮನ್ನು ಇಷ್ಟು ಪ್ರೀತಿಯಿಂದ ಕರೆದು ಆದರಿಸುವವರು ಯಾರು ತಾಯಿ."

ಪುಟ್ಟಣ್ಣ ತಾಂಬೂಲದ ತಟ್ಟೆ, ಸಿಗರೇಟ್ ಪ್ಯಾಕೆಟ್ ಕಡ್ಡಿಪೊಟ್ಟಣ ಮೂರ್ತಿಯ ಮುಂದಿಟ್ಟ. ಮೂರ್ತಿ ತಾಂಬೂಲದ ತಟ್ಟೆಯನ್ನು ಲಲಿತನ ಮುಂದೆ ಸರಿಸಿ, ಸಿಗರೇಟನ್ನೆಳೆದುಕೊಂಡು, ಮನಸ್ಸು ಬದಲಾಯಿಸಿ ಅದನ್ನು ಸ್ವಸ್ಥಾನ ಸೇರಿಸಿದ.

ಪುಟ್ಟಣ್ಣ ಪ್ಯಾಕೆಟ್ ತೆಗೆದುಕೊಂಡು ಸಿಗರೇಟೊಂದನ್ನು ಮುಂದಕ್ಕೆಳೆದು ಮೂರ್ತಿಗೆ ಕೊಡುತ್ತಾ

"ಹಚ್ಚೀ ಸಾರ್—ಪರವಾಗಿಲ್ಲ. ನನ್ನ ತಾಯಿ ಆಕ್ಷೇಪಿಸುವುದಿಲ್ಲ"

ಎಂದು ಹೇಳಿ ತಾನೂ ಸಿಗರೇಟ್ ಹಚ್ಚಿದ.

ಪುಟ್ಟಣ್ಣ ಅರ್ಧ ಸೇದಿ ಮುಗಿಸಿದ್ದ ಸಿಗರೇಟನ್ನು ಬೂದಿಕರಂಡದಲ್ಲಿ (Ash tray) ಅಡಗಿಸುತ್ತಾ

"ನಮ್ಮ ತಾಯಿಯವರೆದುರು ನಿಮ್ಮ ಕ್ಷಮೆ ಬೇಡಬೇಕೆಂದಿದ್ದೇನೆ ಸಾರ್" ಎಂದ.

"ಸದ್ಯ ಸುಮ್ಮನಿರಿ ಪುಟ್ಟಣ್ಣ—ಅಂಥ ಮಾತಾಡಬೇಡಿ. ಹಳೆಯ ಕಥೆ ನೆನಪಿಸಿಕೊಂಡೇಕೆ ಮನಃಕ್ಲೇಶವನ್ನುಂಟುಮಾಡಿಕೊಳ್ಳುವಿರಿ."

"ಇಲ್ಲ ಸಾರ್—ನಿಮ್ಮ ಕ್ಷಮೆ ಬೇಡದಿದ್ದರೆ ನನ್ನ ಆತ್ಮಕ್ಕೆ ಸ್ವಲ್ಪವೂ ಶಾಂತಿಯಿರುವುದಿಲ್ಲ."

ಮೂರ್ತಿ ಬೆಂಗಳೂರಿಗೆ ಬಂದು 'ಜನಸಂದೇಶ' ದ ಸಂಪಾದಕನಾದ ದಿನದಿಂದ, ಅವನು ಪತ್ರಿಕೆ ಬಿಟ್ಟು ಹೋಗುವವರೆಗೆ ಕಛೇರಿಯಲ್ಲಿ ನಡೆದ ಸಮಸ್ತ ವಿದ್ಯಮಾನಗಳು, ಅವುಗಳಲ್ಲಿ ತಾನು ವಹಿಸಿದ ಪಾತ್ರವನ್ನು ನಿವೇದಿಸಿ

"ಇವರಿಗೆ ನಾನು ತುಂಬ ಅನ್ಯಾಯ ಮಾಡಿದೆ ಕಣವ್ವಾ" ಎಂದ.

ಸಿದ್ದವ್ವ ಗರಬಡಿದವಳಂತೆ ಕುಳಿತುಬಿಟ್ಟಳು.

"ಅಂಥ ಅಪರಾಧವೇನೂ ಆಗಿಲ್ಲ ತಾಯಿ. ಪುಟ್ಟಣ್ಣ ಸ್ವಲ್ಪ ಉತ್ಪ್ರೇಕ್ಷೆ ಮಾಡುತ್ತಿದ್ದಾರೆ. ಪತ್ರಿಕೆಯ ಮಾಲೀಕರಿಗೂ ನನಗೂ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯ ಬಂತು. ನಾನೇ ಪತ್ರಿಕೆಗೆ ರಾಜೀನಾಮೆ ಇತ್ತೆ. ಸಂಪಾದಕ ವರ್ಗದಲ್ಲಿ ಪುಟ್ಟಣ್ಣನವರು ಹಿರಿಯರಾಗಿದ್ದುದರಿಂದ ಅವರಿಗೇ

ಸಂಪಾದಕತ್ವ ಸಿಕ್ಕಿತು. ನಾನು ಬಿಟ್ಟುಹೋಗುವುದಕ್ಕೆ ಪುಟ್ಟಣ್ಣನವರೇ ಕಾರಣವೆಂಬುದು ನಿಜವಲ್ಲ."

ಸಿದ್ದವ್ವ ನಿಟ್ಟುಸಿರ್ಗರೆದು

"ಎಂಥಾ ಕೆಲಸ ಮಾಡಿಬಿಟ್ಟೆಯೋ ಪುಟ್ಟ" ಎಂದಳು.

ಸಂತೋಷ ಕೂಟ ನ್ಯಾಯಸ್ಥಾನವಾದುದನ್ನು ಕಂಡು ಲಲಿತಮ್ಮ ಪರಿತಪಿಸಿದಳು.

"ಮೂರ್ತಿಯವರು ಈಗಲೂ ಸಂಪಾದಕರಾಗಿ ಬರುವಹಾಗಿದ್ದರೆ ನನ್ನ ಸ್ಥಾನ ಅವರಿಗೆ ಬಿಟ್ಟುಕೊಟ್ಟು ಅವರ ಕೈಕೆಳಗೆ ದುಡಿಯಲು ನಾನು ಸಿದ್ಧನಾಗಿದ್ದೇನವ್ವಾ!"

"ಭಗವಂತ ನನ್ನ ಹೊಟ್ಟೆಬಟ್ಟೆಗೆ ಒಂದು ಮಾರ್ಗ ತೋರಿಸಿದ್ದಾನೆ ಪುಟ್ಟಣ್ಣ. ನೀವು ಚೆನ್ನಾಗಿರುವುದನ್ನು ನೋಡಿ ನಾನು ಸಂತೋಷಿಸಬಲ್ಲೆ. ನಾನು ಪತ್ರಿಕೋದ್ಯೋಮಿಯಾಗಿರುವುದು ನನ್ನ ಪತ್ನಿಗೆ ಸ್ವಲ್ಪವೂ ಬೇಕಿರಲಿಲ್ಲ."

"ಅಣ್ಣಾ—ನೀವು ದೊಡ್ಡವರು. ನಮ್ಮ ಪುಟ್ಟ ಮಾಡಿದ ಅನ್ಯಾಯ ಕ್ಷಮಿಸಿ"

ಎಂದು ಸಿದ್ದವ್ವ ಪ್ರಾರ್ಥಿಸಿದಳು.

"ಇದರಲ್ಲಿ ಕ್ಷಮಿಸುವ ಪ್ರಶ್ನೆಯೇ ಬರುವುದಿಲ್ಲ ತಾಯಿ. ಪುಟ್ಟಣ್ಣ ನನಗೆ ಮಹೋಪಕಾರ ಮಾಡಿದ್ದಾರೆ."

ಪುಟ್ಟಣ್ಣನ ಮನಸ್ಸು ಹಗುರವಾಯಿತು.

ಲಲಿತಮ್ಮ ಎದ್ದು ಹೋಗಿ ಸಿದ್ದವ್ವನ ಸಮೀಪದಲ್ಲಿ ಕುಳಿತು

"ದುಃಖಪಡಬೇಡಿ ತಾಯಿ—ಯಾರೂ ಅಪರಾಧಿಗಳಲ್ಲ. 'ಜನಸಂದೇಶ'ದಲ್ಲಿ ಪುಟ್ಟಣ್ಣನವರಿಲ್ಲದಿದ್ದರೆ ನನ್ನ ಯಜಮಾನರಿಗೆ ಬಿಡುವೇ ದೊರೆಯುತ್ತಿರಲಿಲ್ಲ. ಪುಟ್ಟಣ್ಣನವರು ನಿಜವಾಗಿ ನಮಗೆ ಉಪಕಾರಮಾಡಿದ್ದಾರೆ."

ಸಿದ್ದವ್ವ ಸಂತೋಷಭರಿತಳಾಗಿ

"ಗಂಡ ಹೆಂಡತಿ ಇಬ್ಬರೂ ಒಂದೇ ರೀತಿ ಇರುವಿರಲ್ಲಾ! ನಿಮ್ಮನ್ನು ನೋಡಿದರೆ ಬಸವೇಶ್ವರರು, ನೀಲಮ್ಮನವರನ್ನು ನೋಡಿದಂತಾಗುತ್ತದೆ."

"ಬಹಳ ದೊಡ್ಡ ಮಾತಾಯಿತು ತಾಯಿ. ಅಣ್ಣ ಬಸವಣ್ಣ ನನ್ನ ಹೃದಯದ ಆರಾಧ್ಯಮೂರ್ತಿ. ಆತನ ಬಾಳು ಹಿರಿಯಬಾಳು. ಆತನ ಒಂದೊಂದು ಮಾತೂ ಅಮೃತಬಿಂದುವಿನಂತೆ ನಿತ್ಯಮಧುರ."

"ನೀವು ವೀರಶೈವರಲ್ಲದಿದ್ದರೂ ಬಸವಣ್ಣನವರು, ಪ್ರಭುದೇವರ ವಿಷಯ ಎಷ್ಟು ಚೆನ್ನಾಗಿ ತಿಳಿದುಕೊಂಡಿರುವಿರಿ. ಮಠದಲ್ಲಿ ನೀವು ಮಾಡಿದ ಉಪನ್ಯಾಸ ಕೇಳಿ ನಾನು ಮುಗ್ಧಳಾದೆ. ಪ್ರಭುದೇವರ ವಚನಗಳನ್ನು ನೀವು ಹೇಳುತ್ತಿದ್ದಾಗ ಆ ಸ್ವಾಮಿಯೇ ಬಂದನೆಂದು ಭಾವಿಸುತ್ತಿದ್ದೆ."

"ಅಮ್ಮ, ವೀರಶೈವ ಧರ್ಮವನ್ನು ವೀರಶೈವರೇ ಅಭ್ಯಾಸ ಮಾಡಬೇಕು, ಅದ್ವೈತಧರ್ಮವನ್ನು ಅದ್ವೈತಿಗಳೇ ಅಭ್ಯಾಸಮಾಡಬೇಕೆನ್ನುವುದು ನ್ಯಾಯ ವಲ್ಲ. ಬಸವೇಶ್ವರ, ಶಂಕರ, ರಾಮಾನುಜ, ಕಬೀರ್, ಗಾಂಧೀಜಿ ಒಂದು ಮತ, ಒಂದು ಪಂಥ, ಒಂದು ಜಾತಿ, ಒಂದು ನಾಡಿಗೆ ಸೇರಿದವರಲ್ಲ. ಅವರು ವಿಶ್ವವಿಭೂತಿಗಳು. ವಿಶ್ವದ ಸಮಸ್ತರಿಗೂ ಅವರ ಕೃತಿಗಳಿಂದ ಬೆಳಕು ಪಡೆಯುವ ಅಧಿಕಾರವಿದೆ. ಪ್ರಭುದೇವರ ಒಂದೊಂದು ವಚನ ಓದುತ್ತ ನಾನು ವಿಸ್ಮಯಗೊಂಡಿದ್ದೇನೆ. ಭಗವಂತನೆದುರು ನಿಂತು 'ನಾ ದೇವನಲ್ಲದೆ ನೀ ದೇವನೆ' ಎನ್ನುವ ಈತನ ಕ್ಷಾತ್ರ; 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎನ್ನುವ ಅಣ್ಣ ಬಸವಣ್ಣನ ಹೃದಯಂಗಮ ಸೌಜನ್ಯ, 'ಶಿವನೇ ಎನ್ನ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ' ಎಂದು ಸಾರುವ ಮಹಾದೇವಿಯಕ್ಕನ ನಿಷ್ಕಲ್ಮಷ ಪಾತಿವ್ರತ್ಯ ಯಾವ ಜನ, ಯಾವ ದೇಶ, ಯಾವ ಮತಕ್ಕಾದರೂ ಬೆಳಕನ್ನು, ಉದ್ಬೋಧವನ್ನು, ಪವಿತ್ರಾನಂದ ವನ್ನು ಒದಗಿಸಬಲ್ಲುದು. ಬ್ರಾಹ್ಮಣ—ಅಬ್ರಾಹ್ಮಣ; ವೀರಶೈವ—ವೀರ ಶೈವೇತರ ಮೊದಲಾದ ಕೃತಕ ಭೇದಗಳು ಹೋಗಬೇಕು. ಭಗವಂತನ ಸೃಷ್ಟಿ ಕ್ರಿಯೆಗೊಳಪಟ್ಟಿರುವ ನಾವೆಲ್ಲಾ ಅವನ ಮಕ್ಕಳೇ—ಸರ್ವಜ್ಞ ಹೇಳಿದಂತೆ 'ನಾ ಶಿವನ ಮೇಳದ ಮಗನು' ಎಂಬ ದೃಷ್ಟಿ ನಮ್ಮೆಲ್ಲರಲ್ಲಿಯೂ ಬೆಳೆಯ ಬೇಕು.'

ತದೇಕಚಿತ್ತಳಾಗಿ ಕೇಳುತ್ತಿದ್ದ ಸಿದ್ದವ್ವ ಪರವಶಳಾದಳು.

"ಉಪನಿಷದುದ್ಯಾನವಾದ ಈ ನಮ್ಮ ಪುಣ್ಯಭೂಮಿಯಲ್ಲಿ ಜಾತಿ ಮತ ಗಳ ಬಗ್ಗೆ ಎಂದೆಂದಿಗೂ ಕಲಹನಾಗಬಾರದು. ಇಡಿಯ ವಿಶ್ವವನ್ನೇ ತನ್ನ

ವಿರಾಟ್–ಗರ್ಭದಲ್ಲಿ ಅಡಗಿಸಿಕೊಳ್ಳಲು ಸಮರ್ಥವಾದ ಈ ಭೂಮಿ ಸಾಲ್ಕು ಭಿನ್ನಮತಗಳನ್ನು ಜೀರ್ಣಿಸಿಕೊಳ್ಳಲಾರದೇ? ಧರ್ಮವನ್ನು ಬಿಟ್ಟು ನಾ ಬಾಳುವುದು ಸಾಧ್ಯವಿಲ್ಲ. ಧರ್ಮದ ವಿಪರ್ಯಾಸವನ್ನು ನಂಬಿಕೊಂ ಬಾಳುವ ಬಾಳು ನಮ್ಮ ಅಪಗತಿಯ ಸಂಕೇತ. ನಾವು ಮಾನವಧರ್ಮ ಮಹತ್ವದ ಮಟ್ಟಕ್ಕೇರಬೇಕಲ್ಲದೆ, ಅದನ್ನು ನಮ್ಮ ಕುಬ್ಜ ಪ್ರಮಾಣಕ್ಕಿಳಿ ಬಾರದು. ಬಸವಾದಿ ಪ್ರಮಥರ ಅನುಯಾಯಿಗಳು ವೇದೋಪನಿಷತ್ ಗಳನ್ನು ಹಳಿಯುವ ಅಗತ್ಯವಿಲ್ಲ—ಉಪನಿಷತ್ತಿನ ವಿಚಾರವೈಭವ, ಕಾ ಮಾಧುರ್ಯ ಪ್ರಮಥರ ನುಡಿಗಳಲ್ಲಿ ಮಿಡಿಯುವುದನ್ನು ನಾವು ಕಾಣಬಹುದು ವೈದಿಕ ಮತಾನುಯಾಯಿಗಳು ವೀರಶೈವಧರ್ಮವನ್ನು ಕಡೆಗಾಣಿಸುವು ರಲ್ಲಿಯೂ ಅರ್ಥವಿಲ್ಲ—ಪ್ರಮಥರು, ಪುರಾತನರು ಕನ್ನಡ ಮತ್ತು ತಮಿಳ ನಾಡುಗಳಲ್ಲಿ ಉಪನಿಷದ್ವಾಣಿಯನ್ನೇ ಪ್ರಸಾರ ಮಾಡಿದ್ದಾರೆ. ಒಂದಕ್ಕೊಂದ ಪೂರಕ. ಸಂಸ್ಕೃತದಲ್ಲೇ ಇದ್ದು—ಕೆಲವರಿಗೇ ಅರ್ಥವಾಗುತ್ತಿದ್ದ ಉಪನಿಷತ್ತಿ ದಿವ್ಯಾನುಭವವನ್ನು ಕನ್ನಡಕ್ಕಿಳಿಸಿ ಪ್ರಮಥರು ಮಹೋಪಕಾರಮಾಡಿದ್ದಾರೆ.

ಭಾವನಾವೇಶಪೂರಿತಳಾಗಿದ್ದ ಸಿದ್ದವ್ವ ಮೂರ್ತಿಗೆ ಕೈಮುಗಿದು

"ಶರಣು—ಶರಣು ಗುರುವೇ" ಎಂದಳು.

ಮೂರ್ತಿ ಎದ್ದು ಸಿದ್ದವ್ವನ ಪಾದಗಳಿಗೆ ಮಣಿದು

"ತಾಯೀ, ಸಕಲ ವೇದಗಳು, ಸಕಲ ಶಾಸ್ತ್ರಗಳು, ಸಕಲ ಕಲಾವಿಜ್ಞಾ ಆಶ್ರಯಪಡೆದಿರುವುದು ನಿನ್ನ ಚರಣಕಮಲದಲ್ಲಮ್ಮ—ಓಂಕಾರಸ್ವರೂಪಳಾ ನೀನು ಈ ಮಗನಿಗೆ ಮಣಿಯುವುದೇ?—ಮಗನೆಂದು ನನ್ನನ್ನು ಆದರಿಸ ತಾಯಿ—ಗುರುವೆಂದು ಭಾವಿಸಬೇಡ"

ಎಂದು ವಿನಮ್ರನಾಗಿ ಪ್ರಾರ್ಥಿಸಿದ.

ಹೊರಡಲನುವಾಗಿ ಮೇಲಕ್ಕೆದ್ದ ಮೂರ್ತಿ, ಲಲಿತಮ್ಮನಿಗೆ ಸಿದ್ದವ್ವ ತಾಂಬೂಲವಿತ್ತು

"ಅನುಕೂಲವಾದಾಗ ಬರುತ್ತಿರಿ— ಬಡವರನ್ನು ಮರೆಯಬೇಡಿ" ಎಂದಳು.

"ಬಂದಾಗಲೆಲ್ಲಾ ಪೂರಿ ಕೊಡುವಹಾಗಿದ್ದರೆ ಬರುತ್ತೇನೆ."

"ತಪ್ಪದೆ ಕೊಡುತ್ತೇನಣ್ಣಾ—ಬನ್ನಿ. ಇನ್ನೊಂದು ಮಾತು...."

"ಹೇಳಿ ತಾಯಿ,"

"ನಮ್ಮ ಪುಟ್ಟನಿಗೆ ಮದುವೆ ಮಾಡಿಸುವ ಭಾರ ನಿಮ್ಮದು."

"ಇದು ಬಹಳ ದೊಡ್ಡ ಜವಾಬ್ದಾರಿಯಾಯಿತು."

"ಅವನಿಗೆ ಹೇಳಿ ಹೇಳಿ ನನಗೆ ಸಾಕಾಯಿತು. ನೀವಾದರೂ ಒಂದು ಬುದ್ಧಿಯ ಮಾತು ಹೇಳಿ."

"ಏನು ಪುಟ್ಟಣ್ಣನವರೇ ?"

"ಶೆಟ್ಟರ ಸಹವಾಸ ನಿಮಗೆ ಗೊತ್ತೇ ಇದೆಯಲ್ಲಾ ಸಾರ್. ನಾನು ಹೇಳಿದರೆ ಅವ್ವನಿಗೆ ಅರ್ಥವಾಗುವುದಿಲ್ಲ."

"ತಾಯಿಯ ಆಶ್ವಾಸನವಿರುವಾಗ ಏತಕ್ಕೆ ಯೋಚಿಸುವಿರಿ. ಧೈರ್ಯವಾಗಿ ಆಗಲೆನ್ನಿ. ಹುಟ್ಟಿಸಿದ ಶಿವ ಹುಲ್ಲು ಮೇಯಿಸುವುದಿಲ್ಲ."

"ಆಗಲಿ ಸಾರ್."

"ಇನ್ನು ಬರಲೇ ಸಿದ್ಧವ್ವತಾಯಿ."

"ಬನ್ನಿಯಣ್ಣ—ಶಿವ ನಿಮಗೆ ಒಳ್ಳೆಯದು ಮಾಡಲಿ."

"ಗಾಡಿ ತಂದುಕೊಡುತ್ತೇನೆ ಸಾರ್."

"ಬೇಡ ಪುಟ್ಟಣ್ಣ—ಹಾಯಾಗಿ ನಡೆದುಕೊಂಡುಹೋಗುತ್ತೇವೆ"

ಎಂದು ಮೂರ್ತಿ, ಲಲಿತಮ್ಮ ಪುಟ್ಟಣ್ಣನ ಮನೆಯಿಂದ ಹೊರಟರು.

## ೩೩

ಮೂರ್ತಿ ಪ್ರಯಾಣಮಾಡುವ ದಿನ ನಿಷ್ಕರ್ಷೆಯಾಯಿತು.

ಹೋಲ್ಡ್ ಆಲ್ ಸೂಟ್‌ಕೇಸಿಗೆ ಬಟ್ಟೆಗಳನ್ನು ಹಾಕುತ್ತಿದ್ದ ಲಲಿತಮ್ಮನಿಗೆ ಮೂರ್ತಿ,

"ಸ್ವಾಮಿ ಸ್ವರೂಪಾನಂದರ ಗೀತಾನುವಾದ, ಸ್ವಾಮಿ ಶ್ರೀ ಶಂಕರಾನಂದ ಭಾರತಿಗಳವರ ಗೀತಾರ್ಥಬೋಧಿನಿ ಎರಡು ಗ್ರಂಥಗಳನ್ನೂ ಮರೆಯದೆ ಸೂಟ್‌ಕೇಸಿಗೆ ಹಾಕು ಲಲಿತಾ" ಎಂದು ಹೇಳಿದ.

ಲಲಿತ ಪರಿಹಾಸ್ಯಮಾಡುತ್ತಾ

"ಸಂತೆಯಲಿ ವೇದವ ನೋದುನವನು........"

"ಕಡುಮೂರ್ಖ."

"ನಾನು ಹಾಗೆ ಹೇಳಿದೆನೇ ? ಕಡುಜಾಣ ಎನ್ನಬೇಕೆಂದಿದ್ದೆ !"

"ನಿನ್ನ 'ಕಡುಮೂರ್ಖ' ಪಾಠ ತಪ್ಪು ಲಲಿತಾ, ನನ್ನ 'ಕಡುಜಾಣ' ಪಾಠವೇ ಸರಿ."

"ಆಧಾರ ?"

"ಸುಶಾಂತಪ್ರದೇಶದಲ್ಲಿ ಕುಳಿತು, ಜನಪ್ರವೇಶವಿಲ್ಲದ ಅರಣ್ಯದಲ್ಲಿ ಕುಳಿತು ವೇದ ಓದಬಹುದು. ಆದರೆ ಸಂತೆಯಲ್ಲಿ ಕುಳಿತು ವೇದವನ್ನೋದು ವುದಕ್ಕೆ ಹೆಚ್ಚಿನ ಚಿತ್ತಸ್ಥೈರ್ಯಬೇಕು."

"ಗೀತಾಗ್ರಂಥ ತೆರೆಯಲು ನಿಮಗೆ ಅವಕಾಶವಾಗುತ್ತದೆಯೇ ?"

"ಅವಕಾಶ ಕಲ್ಪಿಸಿಕೊಳ್ಳುತ್ತೇನೆ. ಅಲ್ಲಲ್ಲಿ ಗೀತೆಯಮೇಲೆ ಭಾಷಣ ಮಾಡುತ್ತೇನೆ."

"ಮೋಥಾಜಿ ಸಲಹೆ ನಿಮ್ಮ ಮನಸ್ಸಿನಲ್ಲಿ ಬೇರೂರಿದಂತಿದೆ."

"ನೂರೆಂಟು ಈತಿಬಾಧೆಗಳಿಗೆ ಸಿಕ್ಕಿದ್ದರೂ ಆ ಚಿಂತನೆಯಿಂದ ಮನಸ್ಸು ದೂರವಾಗಿಲ್ಲ."

"ಆಹಾರದಲ್ಲಿ ಹೆಚ್ಚುಕಡಿಮೆಯಾಗದಂತೆ ನೋಡಿಕೊಳ್ಳಿ."

"ಆಗಲಿ."

"ಕಾಡ್ ಲಿವರ್ ಆಯಿಲ್ ಮರೆಯದೆ ತೆಗೆದುಕೊಳ್ಳಿ."

"ಆಗಬಹುದು—"

"ಬಿಸಿನೀರು ಕುಡಿಯಿರಿ—ತಣ್ಣೀರು ಮುಟ್ಟಬೇಡಿ."

"ಅಪ್ಪಣೆ ನರ್ಸ್........ನಾನು ಹಿಂದಿರುಗುವ ವೇಳೆಗೆ ನಿನ್ನ ಅನುವಾದ ಮುಗಿದಿರುತ್ತದಲ್ಲವೇ ?"

"ಮುಗಿಸಲು ಪ್ರಯತ್ನಿಸುತ್ತೇನೆ."

"ಅಭಯಾಶ್ರಮ ನೀನು ಮರೆತಂತೇ ಆಗಿದೆ."

"ಇನ್ನೇನು ಕೆಲಸ—ನೀವು ಬರುವವರೆಗೆ ನಿತ್ಯವೂ ಹೋಗಿ ಬರುತ್ತೇನೆ."

"ಪುಟ್ಟಣ್ಣನವರ ಮದುವೆ ವಿಷಯವೂ ನಾವು ಯೋಚಿಸಬೇಕಾಗಿದೆ."

"ನಿಮ್ಮ ಮನಸ್ಸಿನಲ್ಲಿರುವುದನ್ನು ನಾನು ಊಹಿಸಿದ್ದೇನೆ."

"ವಧು ಯಾರು ಹೇಳು ನೋಡೋಣ."

"ಜ್ವಾಲಾ !"

"ಕ್ವೈಟ್ ರೈಟ್ (Quite right)"

"ಜಾತಿ ಅಡ್ಡಿ ಬರುವುದೇನೋ ?"

"ಸಿದ್ದಪ್ಪನವರನ್ನು ಒಪ್ಪಿಸುವ ಭಾರ ನೀನು ವಹಿಸಿಕೊಂಡರೆ, ಪುಟ್ಟಣ್ಣನವರಲ್ಲಿ ನಾನು ಮಾತನಾಡುತ್ತೇನೆ."

"ನಮ್ಮ ಪ್ರಯತ್ನ ಸಫಲವಾದರೆ ಎಷ್ಟು ಚೆನ್ನು. ನೀವು ಯಾವಾಗ ಹಿಂದಿರುಗುವಿರಿ ?"

"ಎರಡುವಾರಗಳಲ್ಲಿ."

"ವಾರವೆಂದರೆ ಏಳುದಿನವೆನ್ನುವುದನ್ನು ಮರೆಯಬೇಡಿ."

ಮೂರ್ತಿ ನಸುನಕ್ಕು

"ಏನುಮಾಡಲಿ ಹೇಳು. ಬಳ್ಳಾರಿ, ವಿಜಾಪುರ, ಹುಬ್ಬಳ್ಳಿ,

ಹೈದರಾಬಾದು ಗೆಳೆಯರು ಸೆರೆಹಾಕಿಬಿಡುತ್ತಾರೆ. ಅವರ ಮನಸ್ಸು ನೋಯಿಸುವುದು ಹೇಗೆ?"

"ಎಲ್ಲರನ್ನೂ ಮೆಚ್ಚಿಸಲೆತ್ನಿಸುವವರು ಯಾರನ್ನೂ ಮೆಚ್ಚಿಸುವುದಿಲ್ಲ."

"ನಿನ್ನನ್ನು ಮೆಚ್ಚಿಸುವುದಿಲ್ಲವೇ ?"

"ನನ್ನ ವಿಷಯ ಬೇರೆ ?"

"ಹೇಗೋ ?".

" 'ಯಾರನ್ನೂ' ಲೆಕ್ಕದಲ್ಲಿ ನಾನು ಬರುವುದಿಲ್ಲ."

"ಸತ್ಯ—ನೀನೂ ಒಮ್ಮೊಮ್ಮೆ ಸತ್ಯಹೇಳುತ್ತೀ ಲಲಿತಾ."

"ಹಾ ! ಉಳಿದ ಕಾಲದಲ್ಲೆಲ್ಲಾ ನಾನು ಸುಳ್ಳು ಹೇಳುತ್ತೇನೆಯೇ ?"

"ಹೇಳುವುದಿಲ್ಲವೇ ?"

"ಹೋಗಿ—ನಿಮ್ಮ ಜತೆ ವಾದಮಾಡುವವರಿಗೆ ಬುದ್ಧಿಯಿಲ್ಲ."

"ಕೋಪಮಾಡಿಕೊಳ್ಳಬೇಡ—ನಿನ್ನನ್ನೇ ಒಪ್ಪಿಸುತ್ತೇನೆ."

"....................................................."

"ನಾನು ಬೃಹಸ್ಪತಿ ಎಂದು ನೀನು ನಂಬಿರುವುದಲ್ಲದೆ, ನನ್ನನ್ನೂ ನಂಬಿಸಲೆತ್ನಿಸುವುದಿಲ್ಲವೇ ? ಇದಕ್ಕೇ ನಾನು ಸುಳ್ಳು ಎಂದುದು."

"ಲಂಡನ್ನಿನಲ್ಲಿ ಕೋಹಿನೂರು ವಜ್ರವಿದೆಯೆನ್ನುವುದು ಸುಳ್ಳೋ ದಿಟವೋ ?"

"ದಿಟ."

"ಅದು ಹೇಗೆ ? ನೀವು ಅಲ್ಲಿ ಹೋಗಿ ನೋಡಿಬಂದಿರುವಿರಾ ?"

"ಇಲ್ಲ. ನೋಡಿಬಂದಿರುವವರ ಪ್ರಾಮಾಣಿಕತೆ ಬಗ್ಗೆ ನನಗೆ ನಂಬಿಕೆಯಿದೆ."

"ನಿಮ್ಮ ಬಗ್ಗೆ ನಾನು ಹೇಳುವ ಮಾತಿನಲ್ಲೂ ಅಷ್ಟೇ ಪ್ರಾಮಾಣಿಕತೆ ಇದೆ."

"ನೀನು ಮಾಸ್ತರಿಣಿ ಉದ್ಯೋಗ ಬಿಟ್ಟುದು ಬಹಳ ತಪ್ಪಾಯಿತು."

"ಏಕೆ ?"

"ಒಳ್ಳೆ ತರ್ಕ [Logic) ಶಿಕ್ಷಕಳಾಗುತ್ತಿದ್ದೆ."

"—ಈಗೇನಾಗಿದ್ದೇನೆಯೋ ?"

"ಕೇವಲ ನನ್ನ ಮಡದಿ."

"ಈ ಭಾಗ್ಯವೊಂದು ನನಗೆ ಸ್ಥಿರವಾಗಿದ್ದರೆ ಸಾಕು."

"ನಿರ್ಭಾಗ್ಯ ಕೊಡುವ ಭಾಗ್ಯ ಇನ್ನು ಯಾವದು."

"ಏಕೆ ಹಾಗನ್ನುವಿರಿ—ನಿರ್ಭಾಗ್ಯರು ಯಾರು ?"

"ನಾನು—"

"ನೀವೇ !"

"ನಮ್ಮ ಮದುವೆಯಾಗಿ ಎಂಟು ಹತ್ತುವರ್ಷಗಳಾದವು. ಈ ಅವಧಿಯಲ್ಲಿ ನಾನು ನಿನಗೊಂದು ಒಳ್ಳೆಯ ಸೀರೆ ತೆಗೆದುಕೊಟ್ಟಿಲ್ಲ—ಒಂದು ಒಡವೆ ಮಾಡಿಸಿಕೊಟ್ಟಿಲ್ಲ."

"ಅವುಗಳನ್ನು ನಾನು ಬಯಸಲಿಲ್ಲ."

"ನೀನು ಬಯಸಿದ್ದರೆ ನಾನಿಷ್ಟು ವ್ಯಥೆಪಡುತ್ತಿರಲಿಲ್ಲ."

"ಈ ಮಾತಾಡಿ ನೀನು ನನ್ನ ಮನಸ್ಸು ನೋಯಿಸುತ್ತಿರುವಿರಿ."

"ಹಾಗಲ್ಲ ಲಲಿತಾ—ನೀನು ವಸ್ತ್ರಾಭರಣ ಧರಿಸಿದರೆ ಕಂಡು ನಲಿಯುವವನು ನಾನೇ ಅಲ್ಲವೇ ?"

"ವಸ್ತ್ರಾಭರಣಗಳು ಅಮರವಲ್ಲ ದೊರೆ. ನೀವು ನನಗೆ ಅಮರಾಭರಣ ತೊಡಿಸಿರುವಿರಿ."

"ಅಮರಾಭರಣ ?"

"ಹೌದು—ನಿಮ್ಮ ಅಕಲಂಕ ಅನುರಾಗ—ಅವ್ಯಾಜ ಪ್ರೇಮ."

"ನಾನು ಪರಮಸುಖಿ ಲಲಿತಾ."

"ನನ್ನ ದೊರೆ ಸದಾ ಸುಖಿಯಾಗಿಯೇ ಇರಬೇಕು."

ಗುಂಡಣ್ಣ ಕೆಮ್ಮಿದ ಧ್ವನಿ ಕೇಳಿ ನಲ್ಲನಲ್ಲೆಯರು ಅಗಲಬೇಕಾಯಿತು.

"ಕ್ಷಮಿಸು ಮೂರ್ತಿ, ಅವೇಳೆಯಲ್ಲಿ ನಾನು ಬಂದಂತಾಯಿತು. ಬೆಳಿಗ್ಗೆ ನಿನ್ನ ಪ್ರಯಾಣವೆಂದು ಕೇಳಿದೆ."

"ಹೌದು—ಹೋಲ್ಡಾಲ್, ಸೂಟ್‌ಕೇಸ್ ರೆಡಿಯಾಗಿದೆ."

"ಬೇಗ ಬಂದುಬಿಡಪ್ಪಾ."

"ಬರುತ್ತೇನೆ ಗುಂಡಾ—ಲಲಿತನ ಅನುವಾದ ಪರಿಷ್ಕರಿಸುವ ಕೆಲಸ ಮರೆಯಬೇಡ."

"ಇಲ್ಲ—"

"ನಿನಗೆ ಇನ್ನೂ ಒಂದು ಕೆಲಸ ಅಂಟಿಸಬೇಕಾಗಿದೆ."

"ಏನದು ?"

ಗುಂಡಣ್ಣನ ಕೈಗೆ ಒಂದು ಲಕೋಟೆಯನ್ನಿತ್ತು ಮೂರ್ತಿ

"ಇದನ್ನು ಪುಟ್ಟಣ್ಣನವರಿಗೆ ತಲುಪಿಸಿಬಿಡು."

"ಲೇಖನವೇ ?"

"ಹೌದು—ದೀಪಾವಳಿ ವಿಶೇಷ ಸಂಚಿಕೆಗೆ !"

"ಈ ಕರ್ಮದಿಂದ ನಿನಗಿನ್ನೂ ಬಿಡುಗಡೆ ಇಲ್ಲವೇ ?"

"ಕರ್ಮಮುಕ್ತನಾದವನು ಲೋಕದಲ್ಲಿರಬೇಕಾದ ಅಗತ್ಯವೇನು ?"

"ಮತ್ತೆ ಏಕಪ್ಪಾ ಪುಟ್ಟಣ್ಣನನ್ನು ಗಂಟುಹಾಕಿಕೊಂಡೆ."

ಪುಟ್ಟಣ್ಣ ಬಂದು ಕರೆದುದು— ತಾನೂ ಲಲಿತಮ್ಮ ಅವರ ಮನೆಗೆ ಹೋಗಿ ಬಂದುದನ್ನು ಮೂರ್ತಿ ವಿವರಿಸಿದ.

"ಈ ವಿಷಯ ಇಷ್ಟುದಿನ ನನಗೆ ಹೇಳದೆ ಮುಚ್ಚಿಟ್ಟೆಯಲ್ಲಾ !"

"ಅದರ ಕಾರಣ ನಿನಗೆ ಗೊತ್ತೇ ಇದೆಯಲ್ಲಾ !"

"ನಿನ್ನ ರೀತಿ ನೀತಿ ಒಮ್ಮೊಮ್ಮೆ ನನಗೂ ಅರ್ಥವಾಗುವುದಿಲ್ಲ ಮೂರ್ತಿ—ರಾಗದ್ವೇಷಗಳು ನನ್ನನ್ನು ಕಾಡುತ್ತವೆ. ಪುಟ್ಟಣ್ಣನ ಬಗ್ಗೆ ನೀನು ತಳೆದಿರುವ ಧೋರಣೆಯೇ ಸರಿ."

"ಈಗ ನಾನು ತೃಪ್ತನಾದೆ.—ನನ್ನನ್ನೂ ರಾಗದ್ವೇಷಗಳು ಕಾಡುತ್ತವೆ ಗುಂಡಾ. ಅವುಗಳ ವರ್ಚಸ್ಸಿಗೆ ಸಿಕ್ಕದಿರಲು ನಾನು ಬಹಳ ಪ್ರಯತ್ನಿಸುತ್ತೇನೆ. ಈ ವಿಷಯದಲ್ಲಿ 'ಭಗವದ್ಗೀತೆ' ನನಗೆ ಮಹೋಪಕಾರಮಾಡಿದೆ."

"ನಿನ್ನ ಗೀತಾಭಾಷ್ಯ ಬರುವುದು ಯಾವಾಗ ?"

"ಪ್ರವಾಸ ಮುಗಿಸಿಕೊಂಡು ಬಂದು ಅದೇ ಕೆಲಸ ಆರಂಭಿಸಬೇಕೆಂದಿದ್ದೇನೆ."

"ತಥಾಸ್ತು—ಬೆಳಿಗ್ಗೆ ಸ್ಟೇಷನ್ನಿಗೆ ನಾನೂ ವಿಶ್ವೇಶ್ವರಯ್ಯ ಬರುತ್ತೇನೆ."

"ಹಾಗೇ ಮಾಡಿ. ಲಲಿತ ನನ್ನಜತೆ ಸ್ಟೇಷನ್ನಿಗೆ ಬರುತ್ತಾಳೆ. ನಿಮ್ಮ ಜತೆ ಹಿಂದಿರುಗಲು ಅವಳಿಗೆ ಅನುಕೂಲವಾಗುತ್ತದೆ."

ಮಾರನೆಯ ಬೆಳಿಗ್ಗೆ ಲಲಿತಮ್ಮ, ಗುಂಡಣ್ಣ, ವಿಶ್ವೇಶ್ವರಯ್ಯ ಮೂರ್ತಿಯನ್ನು ಬೀಳ್ಕೊಟ್ಟರು.

ಬಳ್ಳಾರಿ, ಉತ್ತರ ಕರ್ನಾಟಕ, ಹೈದರಾಬಾದು ಕರ್ನಾಟಕಗಳಿಗೆ ಮೂರ್ತಿ ಹೊಸಬನಾಗಿರಲಿಲ್ಲ. ಹಿಂದೆ ಅವನು ಕೈಗೊಂಡಿದ್ದ ಪ್ರವಾಸದಿಂದ ಹಲವು ಮಿತ್ರರು ದೊರಕಿದ್ದರು. ಅವನ ಗ್ರಂಥಗಳು ನೂರಾರು—ಸಹಸ್ರಾರು ಕಣ್ಣಿಗೆ ಕಾಣದ ಮಿತ್ರರನ್ನೊದಗಿಸಿದ್ದವು.

ಅನಂತಪುರದಿಂದಲೇ ಮೂರ್ತಿಯ ಕಾರ್ಯಕ್ರಮ ಆರಂಭವಾಯಿತು. ಬಳ್ಳಾರಿಯಲ್ಲಂತೂ ಮೂರ್ತಿಗೆ ಅಭೂತಪೂರ್ವ ಸ್ವಾಗತ ಸಿಕ್ಕಿತು. ಆದವಾನಿಯ ಕನ್ನಡವೀರರು ಎಂಟುಜತೆ ಎತ್ತುಕಟ್ಟಿದ ರಥದಲ್ಲಿ ಮೂರ್ತಿಯ ಮೆರವಣಿಗೆ ಮಾಡಿದರು. ಸ್ನೇಹ, ಸೌಹಾರ್ದ, ಶಾಂತಿದೂತನಾಗಿ ಬಂದ ಸಾಹಿತಿಯನ್ನು ರಾಯಚೂರು, ಕಲ್ಬುರ್ಗಿ, ಹೈದರಾಬಾದು, ಬೀದರೆಯ ಮಹಾಜನರು ಆದರಿಸಿ ಸತ್ಕರಿಸಿದರು. ಮಧ್ಯೆ ಮಧ್ಯೆ ಪುರಸತ್ತುಮಾಡಿಕೊಂಡು ಮೂರ್ತಿ ಮಂತ್ರಾಲಯ, ಬಸವಕಲ್ಯಾಣ, ಅಜಂತಾ ಎಲ್ಲೋರಾಗಳನ್ನು ನೋಡಿಬಂದ.

ಕನ್ನಡನಾಡಿನ ಎಲ್ಲ ಭಾಗಗಳ ಜನ ಏಕೀಕರಣದ ಬಗ್ಗೆ ತೋರಿದ ಉತ್ಸಾಹ ಕಂಡು ಮೂರ್ತಿಗೆ ಸಂತೋಷವಾಯಿತು. ಕರ್ನಾಟಕ ಏಕೀಕರಣಕ್ಕೆ ಮೈಸೂರು ವಿರುದ್ಧವಾಗಿದೆಯೆಂಬ ಅಭಿಪ್ರಾಯ ಹೋಗಲಾಡಿಸಲು ಮೂರ್ತಿ ಪ್ರಯತ್ನಿಸಿದ.

ಪರಕೀಯರ ದರ್ಪರಥದ ಕೆಳಗೆ ಸಿಲ್ಕಿ ನುಚ್ಚುನೂರಾಗಿದ್ದ ಕನ್ನಡಜನ ಮೈಸೂರಿನ ಕಡೆ ಆಶಾಪೂರಿತ ನೋಟ ಬೀರಿತ್ತು. ಏಕೀಕರಣದ ಬಗ್ಗೆ ಮೈಸೂರು ಮುಂದಾಳುತನ ವಹಿಸಿ ಬಹುದಿನಗಳ ಕನಸನ್ನು ನನಸಾಗಿಸ ಬೇಕೆಂದು ಹಾರೈಸುತ್ತಿತ್ತು. ಏಕೀಕರಣದ ಬಗ್ಗೆ ಮೈಸೂರು ತಳೆದಿದ್ದ ಆಲಸ್ಯ ಧೋರಣೆ ಕಂಡು ಉತ್ತರ ಕರ್ನಾಟಕದ ಜನತೆಗೆ ಬೇಸರವೂ ಆಗಿತ್ತು. ಮೂರ್ತಿ ಮೈಸೂರಿನ ಈಚಿನ ವಿದ್ಯಮಾನಗಳನ್ನು ವಿವರಿಸುತ್ತಾ, ಮೈಸೂರಿನ ರಾಜಕೀಯ ಮುಖಂಡರಲ್ಲಿ ಆಗಿದ್ದ ಮಾನಸಿಕ ಪರಿವರ್ತನೆಯನ್ನು ವಿವರಿಸಿ ಸಮಾಧಾನ ಹೇಳಿದ.

ಹೈದರಾಬಾದು ಬಿಡುವವೇಳೆಗೇ ಮೂರ್ತಿಗೆ ತುಂಬ ಆಯಾಸವಾಗಿತ್ತು. ನಿತ್ಯ ನಾಲ್ಕಾರು ಭಾಷಣ, ಉಳಿದ ವೇಳೆಯಲ್ಲಿ ವಿಚಾರವಿನಿಮಯ, ಕಡು ಬಿಸಿಲಿನ ತಾಪ ಅವನನ್ನು ಹಣ್ಣುಮಾಡಿದ್ದವು. ಊರಿಗೆ ಹಿಂದಿರುಗಿ ಅವನು

ವಿಶ್ರಾಂತಿಪಡೆಯುವುದು ಅಗತ್ಯವಾಗಿದ್ದರೂ ಕರ್ತವ್ಯದೃಷ್ಟಿಯಿಂದ ತನ್ನ ಆರೋಗ್ಯ ಕಡೆಗಾಣಿಸಲು ನಿರ್ಧರಿಸಿದ.

ಉತ್ತರ ಕರ್ನಾಟಕದ ಸಂಸ್ಥಾನಗಳಿಗೆ ಸೇರಿದ್ದ ಜಮಖಂಡಿ, ಮುಧೋಳ, ರಬಕವಿ, ಮಹಾಲಿಂಗಪುರ, ಬನಹಟ್ಟಿ, ತೇರದಾಳ ಮುಗಿಸಿಕೊಂಡು ಬೆಳಗಾಂವಿಗೆ ಬಂದು ತರುವಾಯ ಧಾರವಾಡ ಸೇರಿದ. ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಸವಣೂರು, ಹಾವೇರಿ, ಬ್ಯಾಡಿಗಿ, ರಾಣಿಬೆನ್ನೂರು ಪ್ರವಾಸ ಮುಗಿಸಿಕೊಂಡು ಅವನು ದಾವಣಗೇರಿ ಸೇರುವ ವೇಳೆಗೆ ಅಸ್ವಾಸ್ಥ್ಯಾವಸ್ಥೆಯಾಗಿತ್ತು.

ದಾವಣಗೇರಿಯಿಂದ ಊರಿಗೆ ಬಂದ ಪತಿಯನ್ನು ನೋಡಿ ಲಲಿತಮ್ಮನ ಕರುಳು ಹಿಂಡಿಹೋಯಿತು. ಅವನ ಉತ್ತರಕರ್ನಾಟಕ ಪ್ರವಾಸಕ್ಕೆ ಅನುಮತಿಯಿತ್ತುದು ಅನುಚಿತವಾಯಿತೆಂದು ಅವಳು ಭಾವಿಸಿದಳು.

ಲಲಿತಮ್ಮನ ಬಂದಿಯಾಗಿದ್ದ ಮೂರ್ತಿ ಎಂಟು ಹತ್ತುದಿನ ಹಾಸಿಗೆ ಬಿಟ್ಟೇಳಲು ಸಾಧ್ಯವಾಗಲಿಲ್ಲ.

## ೩೪

ಮೂರ್ತಿಯ ಮನಸ್ಸಿನಲ್ಲಿ ಭಗವದ್ಗೀತೆಯ ಎರಡು ಶ್ಲೋಕಗಳು ಒಂದೇ ಸಮವಾಗಿ ಪ್ರತಿಧ್ವನಿಸುತ್ತಿದ್ದವು.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥**

ಮನುಷ್ಯನು ಜೀರ್ಣ ವಸ್ತ್ರಗಳನ್ನು ಬಿಟ್ಟು ಹೊಸ ವಸ್ತ್ರಗಳನ್ನು ಹೇಗೆ ಧರಿಸುವನೋ ಹಾಗೆ ದೇಹದಲ್ಲಿರುವ ಆತ್ಮನು ಜೀರ್ಣ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಪಡೆಯುತ್ತಾನೆ.

**ನೈನಂ ಛಿಂದಂತಿ ಶಸ್ತ್ರಾಣಿ**
**ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೊ**
**ನ ಶೋಷಯತಿ ಮಾರುತಃ॥**

ಆತ್ಮನನ್ನು ಖಡ್ಗಾದಿ ಶಸ್ತ್ರಗಳು ಕತ್ತರಿಸಲಾರವು; ಅಗ್ನಿಯು ಸುಡುವುದಿಲ್ಲ; ನೀರು ನೆನೆಯಿಸಲಾರದು; ವಾಯುವು ಬಣಗಿಸುವುದಿಲ್ಲ.

ಇವೇನು ಭವಿಷ್ಯತ್ಸೂಚಕಗಳೇ ?

ಇಲ್ಲಿ ಕೆಲವು ದಿನ ತಂಗಿದ ಆತ್ಮ ಮುಂದಿನ ಮನೆಯನ್ನು ಕುರಿತು ಧ್ಯಾನಿಸುತ್ತಿದ್ದಾನೆಯೇ ?

ಎಂಬ ಚಿಂತೆ ಮೂರ್ತಿಯ ಮನಸ್ಸನ್ನಾವರಿಸಿತು.

ಅಚ್ಚುಕೂಟದಿಂದ ಆದೇ ಹೊರಬಿದ್ದಿದ್ದ ಮೂರ್ತಿಯ ಕಾದಂಬರಿಯ ಪ್ರತಿಯನ್ನೆತ್ತಿಕೊಂಡು ಬಂದ ವಿಶ್ವೇಶ್ವರಯ್ಯ ಮೂರ್ತಿಯ ಸ್ಥಿತಿ ಕಂಡು ಭೀತಿಗೊಂಡು

"ಆರುತಿಂಗಳು ನೀವು ಸಂಪೂರ್ಣ ವಿಶ್ರಾಂತಿ ತೆಗೆದುಕೊಳ್ಳಬೇಕು ಸಾರ್" ಎಂದ.

"ಆರುತಿಂಗಳು !— ನನ್ನ ಜೀವಮಾನದಲ್ಲಿ ಅದೇನು ಅಲ್ಪಕಾಲಾವಧಿಯಲ್ಲ ವಿಶ್ವೇಶ್ವರಯ್ಯ."

"ಸದ್ಯಕ್ಕೆ ಯಾವ ಯೋಚನೆಯನ್ನು ಇಟ್ಟುಕೊಳ್ಳಬೇಡಿ"

ಎಂದು ವಿಷಯಾಂತರ ಮಾಡಬಯಸಿ

"ಒಂದು ಮಹತ್ವದ ಸುದ್ದಿ ಕೇಳಿದಿರಾ ಸಾರ್" ಎಂದ.

"ಯಾವದು ?"

"'ಯುಗವಾಣಿ' ವಿಷಯ ?"

"ಏನದು ?"

"ಯುಗವಾಣಿ ಮಾಲಿಕರಿಗೆ ಇನ್‌ಕಮ್ ಟ್ಯಾಕ್ಸ್ ಡಿಪಾರ್ಟಮೆಂಟಿನವರು ಹದಿನಾಲ್ಕು ಲಕ್ಷರೂಪಾಯಿ ದಂಡ ವಿಧಿಸಿದ್ದಾರಂತೆ !"

"ಹದಿನಾಲ್ಕುಲಕ್ಷ ರೂಪಾಯಿ ದಂಡವೇ ? ಏಕೆ ?"

"ಸುಳ್ಳು ಲೆಕ್ಕ ಕೊಟ್ಟಿದ್ದಕ್ಕೆ."

"ಪತ್ರಿಕೆಯ ಗತಿ ?"

"ಪತ್ರಿಕೆ ನಿಲ್ಲಿಸಲು ಮಾಲಿಕರು ನಿಶ್ಚಯಿಸಿರುವರಂತೆ !"

ಮೂರ್ತಿ ವ್ಯಸನಪಟ್ಟುದನ್ನು ಕಂಡು ವಿಶ್ವೇಶ್ವರಯ್ಯ

"ಹೋಗಲಿ ಬಿಡಿ ಸಾರ್—ನೀವೇಕೆ ವ್ಯಥೆ ಪಡುವಿರಿ. ಈ ಶನಿ ತೊಲಗಿದರೆ ದೇಶ ಸುಭಿಕ್ಷವಾಗುತ್ತದೆ."

"ಯುಗವಾಣಿ ನೂರಾರೂ ಜನರಿಗೆ ಅನ್ನ ಒದಗಿಸುತ್ತಿತ್ತು. ವಿಶ್ವೇಶ್ವರಯ್ಯ. ಸಂಪಾದಕಮಂಡಲಿಯಲ್ಲಿದ್ದ ಪತ್ರಿಕೋದ್ಯಮಿಗಳೆಲ್ಲಾ ಅನಾಥರಾಗುತ್ತಾರೆ— ಪ್ರೂಫ್ ರೀಡರುಗಳು, ಕಂಪೋಸಿಟರುಗಳು, ಮೆಷೀನ್ ಮೆನ್ ಇವರ ಗತಿಯೇನು ?"

"ಯುಗವಾಣಿ ನಿಂತುಹೋದರೆ ಕಂಟೋನ್ಮೆಂಟಿನ ಕೆಲವು ಬಾರ್

ಮಾಲಿಕರನ್ನುಳಿದು ಬೇರೆ ಯಾರೂ ದುಃಖಪಡುವುದಿಲ್ಲ ಸಾರ್. ನಮ್ಮ ಸಾರ್ವಜನಿಕ ಜೀವನವನ್ನೇ ಈ ಶನಿ ಹೊಲಬು ಕೆಡಿಸಿತ್ತು."

"ಯಾರ ದುಃಖವನ್ನೂ ನೋಡಿ ನಾವು ಸಂತೋಷಪಡಬಾರದು ವಿಶ್ವೇಶ್ವರಯ್ಯ."

"ಹೋಗಲಿ ಬಿಡಿ ಸಾರ್—ಈ ಮಾತೇ ಬೇಡ"

ಎಂದು ವಿಶ್ವೇಶ್ವರಯ್ಯ ಆ ವಿಷಯ ಮುಗಿಸಿದ ಮೂರ್ತಿ ಮೆಲ್ಲನೆ "ವಿಶ್ವೇಶ್ವರಯ್ಯ...." ಎಂದ.

"ಸಾರ್."

"ಕೆಲವು ದಿನ ನಾನು ಕಾದಂಬರಿ ಬರೆಯುವುದನ್ನು ನಿಲ್ಲಿಸಬಹುದೇ."

"ಏಕೆ ಸಾರ್—ನಿಮ್ಮ ಕಾದಂಬರಿಗಳಿಗಾಗಿ ಜನ ಹಾತೊರೆಯುತ್ತಿರುವಾಗ ಅವುಗಳ ಬರವಣಿಗೆ ನಿಲ್ಲಿಸುವುದು ವಿಹಿತವಲ್ಲ."

"ನನ್ನ 'ಗೀತಾರ್ಥಸಾರ' ಗ್ರಂಥ ಮುಗಿಸಬೇಕಾಗಿದೆ."

"ಆಗಲಿ ಸಾರ್. ಕಾದಂಬರಿಗಳ ಜತೆಯಲ್ಲಿ ಅದೂ ಸಾಗಲಿ."

"ಸಾಧ್ಯವಿಲ್ಲ. ನನಗೆ ಪೂರ್ಣ ಚಿತ್ತೈಕಾಗ್ರತೆ ಬೇಕು."

"ನಿಮ್ಮ ಇಷ್ಟ."

"ನನ್ನ ಗೀತಾಗ್ರಂಥ ನೀವು ಪ್ರಕಟಿಸುವಿರಾ ?"

"ನೀವು ಏನೇ ಬರೆದುಕೊಟ್ಟರೂ ನಾನು ಪ್ರಕಟಿಸಲು ಸಿದ್ಧನಾಗಿದ್ದೇನೆ ಸಾರ್. ಆ ವಿಷಯ ಅನುಮಾನವಿಟ್ಟುಕೊಳ್ಳಬೇಡಿ."

"ನನ್ನ ಗ್ರಂಥ ದೊಡ್ಡದಾಗುತ್ತದೆ. ತುಂಬ ಹಣ ಖರ್ಚಾಗುತ್ತದೆ. ಪ್ರಾಯಶಃ ಒಂದು ಸಾವಿರ ಪ್ರತಿಗಳನ್ನು ನೀವು ಮಾರಲು ಸಾಧ್ಯವಾಗುವುದಿಲ್ಲ. ನೀವು ವೆಚ್ಚ ಮಾಡುವ ಹಣ ಹಿಂದಿರುಗುತ್ತದೆಂದು ನಾನು ಭರವಸೆ ಕೊಡಲಾರೆ. ಆದರೆ ಈ ಗ್ರಂಥ ಹೊರಬರಬೇಕೆಂದು ನನ್ನ ಮಹದಾಶಯ."

"ಎರಡು ಸಾವಿರ ಪ್ರತಿ ಗೀತಾಗ್ರಂಥ ಮಾರುವ ಧೈರ್ಯ ನನಗಿದೆ ಸಾರ್—ನೀವು ಬರೆದುಕೊಡಿ."

"ಸುಮಾರು ಆರುನೂರು ಪುಟವಾಗುವ ಈ ಗ್ರಂಥಕ್ಕೆ ಬೆಲೆಯೆಷ್ಟು ಇಡುವಿರಿ ?"

"ಆರು ರೂಪಾಯಿ ಇಡಲೇ ಬೇಕಾಗುತ್ತದೆ—ಒಳ್ಳೆಯ ಹಾಲುಕಾಗದ ಉಪಯೋಗಿಸಿದರೆ. ನ್ಯೂಸ್ ಪ್ರಿಂಟ್ ಉಪಯೋಗಿಸಿದರೆ ನಾಲ್ಕೂವರೆ ಇಡಬಹುದು."

"ಹಾಲುಕಾಗದ ಹಾಕಿ ಗ್ರಂಥವನ್ನು ಮೂರು ರೂಪಾಯಿ ಮಾಡಿ. ನನಗೆ ಗೌರವಧನ (Royalty) ಕೊಡಬೇಡಿ."

"ನನಗೂ ಇದರಿಂದ ಲಾಭ ಬೇಕಾಗಿಲ್ಲ ಸಾರ್. ನೀವು ಹೇಳಿದಂತೆ ಮೂರು ರೂಪಾಯಿ ಬೆಲೆಯಿಡುತ್ತೇನೆ."

"ನಿಮ್ಮ ಋಣ ನಾನೆಂದಿಗೆ ತೀರಿಸಬಲ್ಲೆ ವಿಶ್ವೇಶ್ವರಯ್ಯ."

"ಋಣಿಗಳು ನೀವಲ್ಲ ಸಾರ್—ನಾವು"

ಎಂದು ವಿಶ್ವೇಶ್ವರಯ್ಯ ಮನಃಪೂರ್ವಕವಾಗಿ ನುಡಿದ.

ಮೂರ್ತಿಯ ನಿರ್ಧಾರ ಕೇಳಿ ಲಲಿತಮ್ಮ, ಗುಂಡಣ್ಣ ಇಬ್ಬರೂ ನಡುಗಿದರು. ಅಧೀರೆಯಾದ ಲಲಿತಮ್ಮ

"ಕೂಡಲೆ ಗೀತಾಗ್ರಂಥ ಆರಂಭಿಸಬೇಡವೆಂದು ನಿಮ್ಮ ಸ್ನೇಹಿತರಿಗೆ ಹೇಳಿ ಗುಂಡಣ್ಣ" ಎಂದಳು.

"ಈ ವಿಷಯದಲ್ಲಿ ನಾವು ಬಾಯಿ ಹಾಕದಿರುವುದೇ ಒಳ್ಳೆಯದು ಲಲಿತಕ್ಕ. ಮೂರ್ತಿಗಿದೇ ಮನೋರೋಗವಾದರೂ ಕಷ್ಟ."

"ದೇಹದ ದುರ್ಬಲತೆ ನಿರ್ಲಕ್ಷಿಸಿ ಅವರು ದುಡಿಯಲಾರಂಭಿಸುತ್ತಾರೆ—ಇದನ್ನು ನೋಡಿಕೊಂಡು ಹೇಗಿರುವುದು ?"

"ಏನು ಮಾಡಲು ಸಾಧ್ಯ ! ದೇವಿಯ ಮೇಲೆ ಭಾರ ಹಾಕಿ ಮೂರ್ತಿಗೆ ಮಂಗಳವನ್ನುಂಟುಮಾಡೆಂದು ಪ್ರಾರ್ಥಿಸಿ. ನಿಮ್ಮ ಹಸ್ತಪ್ರತಿ ಮುಗಿದ ವಿಷಯ ಮೂರ್ತಿಗೆ ತಿಳಿಸಿದಿರಾ !"

"ಇಲ್ಲ. ತಿಳಿಸಿದರೆ 'ಕೊಡು ನೋಡುತ್ತೇನೆ' ಎನ್ನುತ್ತಾರೆ."

"ಕೊಡಿ."

"ಗುಂಡಣ್ಣ !"

"ತಾಯಿ...."

"ನನಗೇಕೋ ಭಯವಾಗುತ್ತದೆ."

"ಕವಿಯೂ ವೀರನೂ ಅದವನ ಪತ್ನಿ ಧೀರೆಯಾಗಿರಬೇಕಲ್ಲವೇ ?"

ಗುಂಡಣ್ಣನ ಸಮಾಧಾನೋಕ್ತಿಗಳಿಂದ ಲಲಿತಮ್ಮನಿಗೆ ನೆಮ್ಮದಿಯಾಗಲಿಲ್ಲ.

ಲಲಿತಮ್ಮ ಊಹಿಸಿದ್ದಂತೆ ಮೂರ್ತಿ 'ತಾಯಿದೇವಿ' ಹಸ್ತಪ್ರತಿಯನ್ನು ಕೈಗೆತ್ತಿಕೊಂಡು, ಓದಿ ಅಲ್ಲಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿದ.

ಲಲಿತಮ್ಮನೇ ಕುಳಿತು ಹಸ್ತಪ್ರತಿಯನ್ನು ಅಂದವಾಗಿ ಟೈಪು ಮಾಡಿ ಮುಂಬಯಿಗೆ ಕಳಿಸಿಕೊಟ್ಟಳು.

ನಿಶ್ಯಕ್ತನಾಗಿದ್ದ ಮೂರ್ತಿ ಲೇಖನಿ ಹಿಡಿಯುವುದೂ ದುಸ್ಸಾಧ್ಯವಾಯಿತು. ಲಲಿತ, ಗುಂಡಣ್ಣ ಸರದಿಯಮೇಲೆ 'ಗೀತಾರ್ಥಸಾರ' ಬರೆದುಕೊಳ್ಳಲು ಸಿದ್ಧರಾದರು.

ಒಂದುವಾರ ಕಳೆಯುವಲ್ಲಿ 'ಭೂಮಿಕೆ' ಮುಗಿಯಿತು. ಮಹಾಭಾರತದಲ್ಲಿ ಗೀತೆಯ ಸ್ಥಾನ, ಗೀತೆಯ ಹಿನ್ನಲೆ, ಅರ್ಜುನನ ವಿಷಾದವನ್ನು ಮೂರ್ತಿ ರಸವತ್ತಾಗಿ ಪ್ರಸ್ತಾಪನೆಯಲ್ಲಿ ವಿವರಿಸಿದ್ದ.

ಮೇಥನಿಂದ ಬಂದಿದ್ದ ಕಾಗದ ನೋಡುತ್ತಾ ಮೂರ್ತಿಯ ಕಣ್ಣುಗಳಿಂದ ಆನಂದಭಾಷ್ಪಗಳುದುರಿದವು.

"ಮುಂಬಯಿಯಲ್ಲಿ ಎಲ್ಲರೂ ಕ್ಷೇಮವಷ್ಟೆ!"

"ಕ್ಷೇಮವಾಗಿದ್ದಾರೆ."

ಎಂದು ಕಾಗದವನ್ನೂ ಅದರ ಜತೆಯಲ್ಲಿದ್ದ ಬ್ಯಾಂಕ್ ಡ್ರಾಫ್ಟನ್ನೂ (Bank Draft) ಲಲಿತಮ್ಮನ ಕೈಗಿತ್ತ. ಲಲಿತಮ್ಮ ನೋಡಿಕೊಂಡು, ಎರಡನ್ನೂ ಮೂರ್ತಿಯ ತಲೆದಿಂಬಿನ ಕೆಳಗಿಟ್ಟಳು.

ಸಂಜೆ ಗುಂಡಣ್ಣ ಬಂದ ಮೇಲೆ ಲಲಿತಮ್ಮ 'ಅಭಯಾಶ್ರಮ'ಕ್ಕೆ ಹೊರಟಳು.

ಅವಳು ಹೋದಮೇಲೆ ಮೂರ್ತಿ ದಿಂಬಿನ ಕೆಳಗಿದ್ದ ಡ್ರಾಫ್ಟನ್ನು ಗುಂಡಣ್ಣನ ಕೈಗಿತ್ತು

"ಮೇಥನ 'ಗೀತಾಸಂಗ್ರಹ'ಕ್ಕೆ ನಾನು ಬರೆದ ಲೇಖನಗಳಿಗೆ ದೊರೆತಿರುವ ಗೌರವಧನ. ಪ್ರಕಾಶಕರು ಮೇಥನಿಗೆ ಆರು ಸಾವಿರ ಡಾಲರ್‌ಗಳನ್ನು ಕಳಿಸಿದ್ದಾರಂತೆ. ತಾನು ಅರ್ಧವಿಟ್ಟುಕೊಂಡು ನನಗರ್ಧ ಕಳಿಸಿದ್ದಾನೆ."

"ದೇವರು ದೊಡ್ಡವನು—ಸಮಯಕ್ಕೆ ಸರಿಯಾಗಿ ಹಣ ಬಂದಂತಾಯಿತು. ಹಣದ ವಿನಿಯೋಗ ಕುರಿತು ಆಲೋಚಿಸುವೆಯಾ ?"

"ಆಲೋಚಿಸಿದ್ದೇನೆ.....ನಿನ್ನ ಸಲಹೆಯೇನು ?"

"ನನ್ನ ಸಲಹೆ ಅಂಗೀಕರಿಸುವುದಾದರೆ ಹೇಳುತ್ತೇನೆ."

"ಹೇಳು ನೋಡೋಣ."

"ವಿಯನ್ನಾದಲ್ಲಿ ಹೃದ್ರೋಗ ಚಿಕಿತ್ಸಾ ನಿಪುಣರಿದ್ದಾರಂತೆ. ಹೇಗೂ ಕೈಯಲ್ಲಿ ಹಣವಿದೆ—ನೀನೂ ಲಲಿತಕ್ಕ ಏಕೆ ಹೋಗಿ ಬರಬಾರದು. ಹಣ ಸಾಲದೆ ಬಂದರೆ ವಿಶ್ವೇಶ್ವರಯ್ಯ, ಮೇಥಾ ಒದಗಿಸುತ್ತಾರೆ."

ಮೂರ್ತಿ ನಕ್ಕು

"ನಿನ್ನ ಸಲಹೆ ಚೆನ್ನಾಗಿದೆ. ಆದರೆ ದಯೆಯಿಟ್ಟು ಈ ವಿಷಯ ಲಲಿತನಲ್ಲಿ ಪ್ರಸ್ತಾಪಿಸಬೇಡ. ಅವಳು ನಾಳೆಯೇ ಗಂಟುಮೂಟೆ ಕಟ್ಟಿಸುತ್ತಾಳೆ."

ವಿಲಾಯಿತಿಗೆ ನಾನು ಹೋಗದಿರುವುದಕ್ಕೆ ಒಂದು ಮಹತ್ವದಕಾರಣವಿದೆ."

"ಏನದು ?"

"ಅದನ್ನು ಕೊನೆಯಲ್ಲಿ ಹೇಳುತ್ತೇನೆ."

"ನಿನಗೆ ಸಲಹೆಕೊಡುವುದು ಗೋರ್ಕಲ್ಲಮೇಲೆ ಮಳೆ ಹುಯ್ದಂತೆ ಸರ್ವಜ್ಞ."

"ನಿನ್ನ ಸಲಹೆ ನಿರಾಕರಿಸುವುದಕ್ಕೆ ನಾನಾ ಕಾರಣಗಳಿಗೆ ಗುಂಡಾ."

"ಕಾರಣಗಳನ್ನು ಅಪ್ಪಣೆ ಕೊಡಿಸಿದರೆ ಕೇಳಿಯಾದರೂ ಸಂತೋಷ ಪಡುತ್ತೇನೆ,"

"ನಾನು ಹೇಳಿದಂತೆ ಹಣ ವಿನಿಯೋಗಿಸುವ ಜವಾಬ್ದಾರಿ ನಿನ್ನದು."

"ಹೇಳು ಮಾರಾಯ."

"ಕೆಲವು ಚಿಲ್ಲರೆ ಸಾಲಗಳಿವೆ—ಅವುಗಳಿಗೆ ಒಂದು ಸಾವಿರ; ಅಭಯಾಶ್ರಮಕ್ಕೆ ಮೂರು ಸಾವಿರ ಕಾಣಿಕೆ."

"ನಾಲ್ಕು ಸಾವಿರವಾಯಿತು."

"ಲಲಿತ ನನ್ನ ಕೈಹಿಡಿದಂದಿನಿಂದ ಅವಳಿಗೆ ಒಂದು ಒಡವೆಯನ್ನೂ ನಾನು ಮಾಡಿಸಿಕೊಟ್ಟಿಲ್ಲ. ಇಂದಿಗೂ ಅವಳು 'ಬಿಚ್ಚೋಲೆ ಗೌರಮ್ಮ'ನ

ಹಾಗೆ ಇದ್ದಾಳೆ. ಅವಳಿಗೊಂದು ಜತೆ ವಜ್ರದೋಲೆ, ಎರಡು ಜತೆಬಳೆ, ಕುತ್ತಿಗೆಗೆ ಎರಡು ಎಳೆಯ ಸರ—ಇವುಗಳಿಗೆ ಎರಡೂವರೆ ಸಾವಿರ."

"ಇನ್ನೂ ಐದು ಸಾವಿರ ಉಳಿದಿದೆ."

"ಐದು ಸಾವಿರ ಲಲಿತನ ಹೆಸರಿನಲ್ಲಿ ಫಿಕ್ಸೆಡ್ ಡಿಪಾಸಿಟನಲ್ಲಿ (Fixed Deposit) ಯಾವದಾದರೂ ಬ್ಯಾಂಕಿನಲ್ಲಿಡು—ಉಳಿದ ಐದುನೂರನ್ನು ನನಗೆ ತಂದುಕೊಡು."

"ಈ ವಿನಿಯೋಗಕ್ರಮವನ್ನು ಲಲಿತಕ್ಕನಿಗೆ ಹೇಳಿರುವೆಯಾ ?"

"ಇಲ್ಲ—ಹೇಳುವುದಿಲ್ಲ. ಒಡವೆಮಾಡಲು ನೀನು ನಾಳೆಯೇ ಆರ್ಡರ್ (order) ಕೊಡಬೇಕು."

"ಇಷ್ಟು ಅವಸರವೇಕೆ ?"

"ಕಾರಣ ಇದೆ—ಒಡವೆಗಳು ಸಿದ್ಧವಾಗಲು ಎಷ್ಟು ದಿನ ಬೇಕು."

"ಒಂದು ತಿಂಗಳು ಬೇಕಾಗಬಹುದು."

"ಆದಷ್ಟು ಜಾಗ್ರತೆ ಕೊಡುವಂತೆ ಹೇಳು."

"ನಿನ್ನ ಅವಾಂತರ ನೋಡಿದರೆ ಎಲ್ಲಿಗೋ ಗಂಟುಮೂಟೆ ಕಟ್ಟುತ್ತಿರುವಂತಿದೆ—ವಿಲಾಯಿತಿಗೆ ಏಕೆ ಹೋಗುವುದಿಲ್ಲ ಎನ್ನುವೆ ?"

ಮೂರ್ತಿ ಕ್ಷಣಕಾಲ ಗಂಭೀರವಾಗಿ ಕುಳಿತ. ಅವನ ಮುಖಮುದ್ರೆ ಇದ್ದಕ್ಕಿದ್ದಂತೆ ಬದಲಾಯಿಸಿತು. ದಿವ್ಯಶಾಂತಿ ಮುಖ ಮಂಡಲದಮೇಲೆ ವಿರಾಜಿಸಿತು.

"ನನ್ನ ಪಾರ್ಥಿವಶರೀರ ನನ್ನ ತಾಯ್ನಾಡಿನಲ್ಲಿಯೇ ಮಣ್ಣಾಗಬೇಕೆಂದು ಬಯಸುತ್ತೇನೆ ಗುಂಡಾ."

"ಮೂರ್ತಿ........!!!"

"ಹೌದು ಗುಂಡಾ—ನೀನು ಹೇಳಿದ್ದು ನಿಜ—ನಾನು ಗಂಟುಮೂಟೆ ಕಟ್ಟುತ್ತಿದ್ದೇನೆ. ನನ್ನ ಅಲ್ಪಸೇವೆಯಿಂದ ನನ್ನ ತಾಯ್ನಾಡಿಗೆ, ತಾಯ್ನುಡಿಗೆ ಎಷ್ಟು ಪ್ರಯೋಜನವಾಗಿದೆಯೋ ಹೇಳಲಾರೆ. ಆದರೆ ನಾನಿಷ್ಟು ಹೇಳಬಲ್ಲೆ—ಈ ದೇಶ ಸರ್ವತೋಮುಖವಾಗಿ ಅಭಿವೃದ್ಧಿಹೊಂದಿ ವಿಶ್ವಗುರುವಾಗಲಿ ಎಂದು ನಾನು ಹಾರೈಸಿ, ಅದಕ್ಕಾಗಿ ತ್ರಿಕರಣಪೂರ್ವಕವಾಗಿ ದುಡಿದಿದ್ದೇನೆ. ಅವು

ನಿರ್ಗಂಧ ಕುಸುಮಗಳೇ ಆಗಿರಬಹುದು. ತಾಯಿಯ ಚರಣಗಳಿಗೆ ನಾನಿಡುವ ಕೊನೆಯ ಹೂ—'ಗೀತಾರ್ಥಸಾರ'—ಇಲ್ಲಿಗೆ ಮೂರ್ತಿ ಎನ್ನುವ ಅನಾಮಿಕ ಸಾಹಿತಿಯ ಜೀವನಯಾತ್ರೆ ಮುಗಿಯುತ್ತದೆ."

ಉದ್ವೇಗಪರವಶನಾದ ಗುಂಡಣ್ಣ ಮೂರ್ತಿಯನ್ನಪ್ಪಿ ಒಂದೇ ಸಮನಾಗಿ ಕಂಬನಿಗರೆದ.

ಮೂರ್ತಿ ಹೇಳುವುದೇನೂ ಉಳಿದಿರಲಿಲ್ಲ.

## ೩೫

ಮೂರ್ತಿಯ 'ಗೀತಾರ್ಥಸಾರ' ಮುಗಿಯುತ್ತ ಬಂದಂತೆ ಅವನ ಆರೋಗ್ಯ ಕ್ಷಯಿಸುತ್ತ ಬಂತು. ಅವನ ಕ್ರಿಯಾಚೇತನಕ್ಕೆ ಕಡಿವಾಣಹಾಕುವುದು ಲಲಿತಮ್ಮ, ಗುಂಡಣ್ಣ ಇಬ್ಬರಿಗೂ ದುಸ್ಸಾಧ್ಯವಾಯಿತು.

ಒಡವೆಗಳ ವಿಷಯ ಮೂರ್ತಿಯ ಮನಸ್ಸಿನಿಂದ ಮರೆಯಾಗಲೇ ಇಲ್ಲ. ಪ್ರತಿನಿತ್ಯ

"ಗುಂಡಾ, ಒಡವೆಗಳು ಸಿದ್ಧವಾದವೇ ?" ಎಂದು ಕೇಳುತ್ತಿದ್ದ.

ಗುಂಡನ ಒತ್ತಾಯಕ್ಕೆ ಸರಾಫ ಮೂರುವಾರಗಳಲ್ಲಿ ಒಡವೆಗಳ ಕೆಲಸ ಮುಗಿಸಿ, ಅವುಗಳನ್ನು ಗುಂಡಣ್ಣನ ಕೈಯಲ್ಲಿಟ್ಟ.

ಕೈಗೆ ಬಂದ ಒಡವೆಗಳನ್ನು ನೋಡಿ ಮೂರ್ತಿಯ ಆನಂದಕ್ಕೆ ಪಾರವೇ ಇಲ್ಲವಾಯಿತು. ಲಲಿತಮ್ಮನನ್ನು ಕರೆದು

"ಲಲಿತಾ, ನಾಳೆ ಮಧ್ಯಾಹ್ನಕ್ಕೆ ನಾನು 'ಗೀತಾರ್ಥಸಾರ' ಮುಗಿಸುತ್ತೇನೆ. ಮಂಗಳಸೂಚಕವಾಗಿ ನೀನು ನಾಳೆ ಹಬ್ಬಮಾಡಬೇಕು."

"ಆಗಲಿ. ಹೇಳಿ—ಏನುಮಾಡಲಿ ?"

"ನಾಲ್ಕಾರು ಸಿಹಿತಿಂಡಿಗಳನ್ನು ಮಾಡಿಸು. ಗುಂಡ, ವಿಶ್ವೇಶ್ವರಯ್ಯ ಇಬ್ಬರನ್ನೂ ಇಲ್ಲೇ ಊಟಕ್ಕೆ ಕರೆಯುತ್ತೇನೆ."

"ಆಗಬಹುದು—ಅವರ ಜತೆ ನೀವೂ ಊಟಕ್ಕೆ ಕೂಡುವಿರಾ ?"

"ಖಂಡಿತ ಕೂಡುತ್ತೇನೆ. ನೀನೂ ನಮ್ಮ ಜತೆಯಲ್ಲಿಯೇ ಕುಳಿತುಕೋ. ಅಮ್ಮ ಬಡಿಸಲಿ."

"ಹಾಗೇ ಆಗಲಿ."

"ಮೇಥಾ, ಸೆಲೀನ್, ಸರ್ದಾರ್, ದಾದಾ, ಆಯಿ, ವೀಣಾ ನಾಳೆ ಇಲ್ಲಿದ್ದರೆ ಚೆನ್ನಾಗಿತ್ತು."

"ನಿಮ್ಮ ಮನಸ್ಸಿನಲ್ಲೇನಿದೆ ದೊರೆ."

"ಏನೂ ಇಲ್ಲ. ಗೀತೆ ನನಗೆ ಅಪೂರ್ವಾನಂದ ಒದಗಿಸಿದೆ. ಗೀತೆ ಬರೆಯುವುದಕ್ಕಾರಂಭಿಸಿದ ಮೇಲೆ ನನ್ನ ಆರೋಗ್ಯವೂ ಸುಧಾರಿಸಲಿಲ್ಲವೆ ?"

"ಆ ವಿಷಯ ಪ್ರಸ್ತಾಪಿಸಿ ಏನು ಪ್ರಯೋಜನ ? ನೀವು ಯಾರ ಮಾತೂ ಕೇಳುವುದಿಲ್ಲ."

"ನೀನು ಮನಸ್ಸು ಚಿಕ್ಕದುಮಾಡಿಕೊಳ್ಳಬೇಡ. ನಾಡಿದ್ದೇ ಮುಂಬಯಿಗೆ ಹೋಗೋಣ ನಡಿ. ಇನ್ನು ಮೂರು ನಾಲ್ಕು ತಿಂಗಳು ನಾನು ಲೇಖನಿ ಮುಟ್ಟುವುದಿಲ್ಲ."

"ನಿಜವೇ ?!"

"ನಿಜ ಸ್ವೀಟ್ (Sweet)—ಈ ಸಾರಿ ಖಂಡಿತ ಮಾತಿಗೆ ತಪ್ಪುವುದಿಲ್ಲ."

ಪತಿಯ ಆಶ್ವಾಸನ ಲಲಿತಮ್ಮನಿಗೆ ತೃಪ್ತಿಯನ್ನುಂಟುಮಾಡಿ, ಔತಣ ವೇರ್ಪಡಿಸುವುದಕ್ಕೆ ಹುರುಪುಕೊಟ್ಟಿತು.

ಮೂರ್ತಿ ನಿರ್ದಿಷ್ಟವೇಳೆಗೆ ಸರಿಯಾಗಿ ತನ್ನ 'ಗೀತಾರ್ಥಸಾರ' ಮುಗಿಸಿದ.

ಲಲಿತಮ್ಮ ಹಸ್ತಪತ್ರಿಕೆಯನ್ನು ದೇವರ ಮುಂದಿಟ್ಟು ಪೂಜಿಸಿ, ಎಲ್ಲರಿಗೂ ತೀರ್ಥ ಪ್ರಸಾದ ವಿನಿಯೋಗಿಸಿದಳು.

ಎಲೆ ಹಾಕಿ, ಬಡಿಸಿ, ಎಲ್ಲರನ್ನೂ ಊಟಕ್ಕೆ ಕರೆಯಲು ಬಂದ ಲಲಿತಮ್ಮ ನನ್ನು ಹತ್ತಿರ ಕರೆದು ಮೂರ್ತಿ ಅವಳ ಕೈಗೆ ಆಭರಣಗಳ ಪೆಟ್ಟಿಗೆಯನ್ನಿತ್ತು

"ಇವುಗಳನ್ನು ಧರಿಸಿ ನೀನು ನಮ್ಮ ಜತೆ ಊಟಕ್ಕೆ ಕೂಡಬೇಕು" ಎಂದು ಹೇಳಿದ.

ಲಲಿತಮ್ಮ ಆಭರಣಗಳ ಪೆಟ್ಟಿಗೆ ತೆಗೆದುನೋಡಿ ಆನಂದಾಶ್ಚರ್ಯದಿಂದ

"ಇದೇನು ?" ಎಂದಳು.

"ಕಾಣಿಕೆ—"

"ಇವುಗಳನ್ನು ಯಾವಾಗ ಮಾಡಿಸಿದಿರಿ ?"

"ಇದೇ ತಿಂಗಳು."

"ನನಗೆ ಹೇಳಲೇ ಇಲ್ಲ."

"ಹೇಳಿದ್ದರೆ ನೀನು ಒಪ್ಪುತ್ತಿರಲಿಲ್ಲ."

ಲಲಿತಮ್ಮ ಆಭರಣಗಳನ್ನು ತೆಗೆದುಕೊಂಡು ಹೋಗಿ ತಾಯಿಗೆ ತೋರಿಸಿ, ದೇವರ ಮುಂದಿಟ್ಟು ನಮಸ್ಕರಿಸಿ ಅವುಗಳನ್ನು ಧರಿಸಿ ಬಂದು ಮೂರ್ತಿ ಎದುರು ನಿಂತಳು.

"ನನ್ನ ಲಲಿತಾ— ಈಗ ಲಲಿತಾ ದೇವಿಯಾಗಿದ್ದಾಳೆ."

ಎಂದು ಮೂರ್ತಿ ಸಂತೋಷವ್ಯಕ್ತಮಾಡಿದ.

ಎಲ್ಲರಿಗೂ ಸುಗ್ರಾಸ ಭೋಜನವಾಯಿತು.

ಗೆಳೆಯರ ಜತೆ ಕುಳಿತ ಮೂರ್ತಿಯೂ ಅಲ್ಪಸ್ವಲ್ಪ ಆಹಾರ ಸ್ವೀಕರಿಸಿದ.

ಮಿಕ್ಕವರು ಏಳುವುದಕ್ಕೆ ಸ್ವಲ್ಪಮುಂಚೆ ಎದ್ದ ಲಲಿತಮ್ಮ ಮೂರ್ತಿಯ ಕೋಣೆಯಲ್ಲಿ ತಾಂಬೂಲ ಅಣಿಮಾಡಿದಳು.

ಎಲೆಬಿಟ್ಟು ಏಳುವಾಗಲೇ ಮೂರ್ತಿಯ ತಲೆ ಸುತ್ತುತ್ತಿತ್ತು—ಎದೆ ಹೊಡೆದುಕೊಳ್ಳುತ್ತಿತ್ತು.

ಹಜಾರದಿಂದ ನಡೆದು ಕೋಣೆಯ ಬಳಿಗೆ ಬರುವವೇಳೆಗೆ ಮೂರ್ತಿಯ ಸ್ಥಿತಿ ಮತ್ತಷ್ಟು ಅಸ್ತವ್ಯಸ್ತವಾಯಿತು.

ಕೋಣೆಯ ಕದದ ಚೌಕಟ್ಟು ಹಿಡಿದುಕೊಂಡು ಮೆಲ್ಲನೆ ಕೋಣೆ ಪ್ರವೇಶಿಸಿ, ಮಂಚದ ಬಳಿಗೆ ಬರುವ ವೇಳೆಗೆ ಅವನ ಶಕ್ತಿ ಉಡುಗಿಹೋಯಿತು.

ಮಂಚದ ಬಳಿ ಬಂದವನೇ ಪ್ರಜ್ಞಾಶೂನ್ಯನಾಗಿ ಕೆಳಗೆ ಬಿದ್ದುಬಿಟ್ಟ.

'ಲಲಿತಕ್ಕ' ಎಂದು ಚೀರಿದ ಗುಂಡಣ್ಣನ ಧ್ವನಿ ಕೇಳಿ ಲಲಿತಮ್ಮ ಓಡಿ ಬಂದಳು. ಅವಳ ಹಿಂದೆಯೇ ಗೌರಮ್ಮನವರೂ ಓಡಿಬಂದರು.

ಲಲಿತ, ಗುಂಡಣ್ಣ, ವಿಶ್ವೇಶ್ವರಯ್ಯ ಮೂರ್ತಿಯನ್ನೆತ್ತಿ ಹಾಸಿಗೆಯಮೇಲೆ ಮಲಗಿಸಿದರು.

ಯಾರಿಗೂ ಬುದ್ಧಿ ತೋರದು—ಯಾರ ಬಾಯಲ್ಲಿಯೂ ಮಾತು ಹೊರಡದು.

ಗುಂಡಣ್ಣನ ಬಾಯಲ್ಲಿ ದ್ರವ ಆರಿಹೋಗಿತ್ತು.

ಲಲಿತ ಗರಬಡಿದವಳಂತೆ ಮೂರ್ತಿಯನ್ನೇ ದಿಟ್ಟಿಸಿ ನೋಡುತ್ತ ನಿಂತಳು.

ಗುಂಡಣ್ಣ ಸ್ವಲ್ಪ ಚೇತರಿಸಿಕೊಂಡು

"ಡಾಕ್ಟರು–ಆ್ಯಂಬುಲೆನ್ಸ್ ಕಾರ್ (Ambulance Car)" ಎಂದ.

ಏಳುವುದನ್ನೂ ಬೀಳುವುದನ್ನೂ ನೋಡದೆ ವಿಶ್ವೇಶ್ವರಯ್ಯ ಓಡಿ ಹೋಗಿ ಆ್ಯಂಬುಲೇನ್ಸ್ ಕಾರಿಗೆ ಫೋನ್ ಮಾಡಿ ಬಂದ.

ಇಪ್ಪತ್ತು ನಿಮಿಷಗಳಲ್ಲಿ ಕಾರು ಬಂದು ಮನೆಯ ಮುಂದೆ ನಿಂತಿತು.

ನಿಶ್ಚೇಷ್ಟಿತನಾಗಿದ್ದ ಮೂರ್ತಿಯನ್ನು ಕಾರಿನಲ್ಲಿ ಮಲಗಿಸಿಕೊಂಡು ಎಲ್ಲರೂ ಆಸ್ಪತ್ರೆ ಸೇರಿದರು.

ವಾರ್ಡ್ ಡಾಕ್ಟರು ಕೂಡಲೆ ಫೋನ್ ಮಾಡಿ ಡಾ. ವೆಂಕಟಸುಬ್ಬರಾಯರನ್ನು ಬರಮಾಡಿಕೊಂಡರು.

ಮೂರ್ತಿಯನ್ನು ಸ್ಟ್ರೆಚರ್ ಮೇಲೆ ಮಲಗಿಸಿ ಪರೀಕ್ಷಾ ಕೋಣೆಗೆ (Examination room) ಡಾಕ್ಟರು ಒಯ್ದರು.

ಅವರು ಹಿಂದಿರುಗುವುದನ್ನೇ ತವಕದಿಂದ ನಿರೀಕ್ಷಿಸುತ್ತಿದ್ದ ಗುಂಡಣ್ಣ "ಹೇಗಿದೆ ಸರ್" ಎಂದು ಕೇಳಿದ.

ಡಾಕ್ಟರು ಮುಗುಳ್ನಗೆ ಬೀರುತ್ತ

"ಏನೂ ಭಯವಿಲ್ಲ— ಹೆದರಬೇಡಿ—ಪೇಷಂಟಿಗೆ ಪೂರ್ಣ ರೆಸ್ಟ್ (rest) ಬೇಕು—ಯಾರೂ ಡಿಸ್ಟರ್ಬ್ (disturb) ಮಾಡಬೇಡಿ." ಎಂದರು.

ಡಾಕ್ಟರು ಸ್ಪೆಷಲ್ ವಾರ್ಡಿನಲ್ಲಿ ಮೂರ್ತಿಗೆ ಸ್ಥಳಮಾಡಿಕೊಟ್ಟರು.

ಲಲಿತಾ, ಗುಂಡಣ್ಣ, ವಿಶ್ವೇಶ್ವರಯ್ಯ. ಗೌರಮ್ಮನವರು ಯಾರೂ ಆಸ್ಪತ್ರೆಯ ಆವರಣ ಬಿಟ್ಟು ಅಲುಗಾಡಲಿಲ್ಲ.

ರಾತ್ರಿ ಲಲಿತ, ಗೌರಮ್ಮನವರು ಸ್ಪೆಷಲ್ ವಾರ್ಡಿನ ನೆಲದಮೇಲೆ ಪವಡಿಸಿದರು. ಗುಂಡಣ್ಣ, ವಿಶ್ವೇಶ್ವರಯ್ಯ ಹೊರಗೆ ವೆರಾಂಡದಲ್ಲಿದ್ದ ಬೆಂಚುಗಳಮೇಲೆ ಮಲಗಿದರು.

ಬೆಳಗ್ಗೆ ಒಂಭತ್ತುಗಂಟೆಯ ವೇಳೆಗೆ ಮೂರ್ತಿಗೆ ಜ್ಞಾನಬಂದಿತು. ಅತಿ ದುರ್ಬಲತೆಯಿಂದಾಗಿ ಅವನ ಬಾಯಲ್ಲಿ ಮಾತು ಹೊರಡುತ್ತಿರಲಿಲ್ಲ. ಪ್ರಯಾಸದಿಂದ ಕಣ್ಣು ಬಿಟ್ಟು ಎಲ್ಲರನ್ನೂ ಒಮ್ಮೆ ನೋಡಿದ.

ಮಧ್ಯಾಹ್ನ ಗೌರಮ್ಮನವರು ಮನೆಗೆ ಹೋಗಿ ಸ್ನಾನಮಾಡಿ, ಅಡಿಗೆ ಮಾಡಿ ಲಲಿತಮ್ಮ, ಗುಂಡಣ್ಣನಿಗೆ ಊಟ ತಂದರು. ವಿಶ್ವೇಶ್ವರಯ್ಯ ಮನೆಗೆ ಹೋಗಿ ಸಂಜೆಯೊಳಗಾಗಿ ಆಸ್ಪತ್ರೆ ಸೇರಿದ.

ನಾಲ್ಕುದಿನ ಕಳೆದಮೇಲೆ ಮೂರ್ತಿ ಸ್ವಲ್ಪ ಚೇತರಿಸಿಕೊಂಡ-

ದುಃಖಾರ್ತಳಾಗಿ ಪಕ್ಕದಲ್ಲಿ ಕುಳಿತಿದ್ದ ಲಲಿತಮ್ಮನ ಕೈಹಿಡಿದು, ಗುಂಡಣ್ಣನನ್ನು ಹತ್ತಿರ ಕರೆದು ಪ್ರಯಾಸದಿಂದ

"ನನ್ನ....ಮನೆಗೆ....ಕರೆದುಕೊಂಡು ಹೋಗು" ಎಂದ.

ಗುಂಡಣ್ಣ ಲಲಿತಮ್ಮನ ಕಡೆ ತಿರುಗಿ

"ಏನುಮಾಡುವುದಕ್ಕ" ಎಂದು ಕೇಳಿದ.

"ಅವರು ಹೇಳಿದಂತೆ ಮಾಡೋಣ. ಡಾಕ್ಟರಿಗೆ ಹೇಳಿ" ಎಂದಳು.

ಮೂರ್ತಿಯ ಆಶಯವನ್ನು ಗುಂಡಣ್ಣ ಡಾ. ವೆಂಕಟಸುಬ್ಬರಾಯರಿಗೆ ವಿವರಿಸಿದಾಗ ಅವರು ತುಸು ಬೇಸರದಿಂದಲೇ

"ಪೇಷಂಟ್ ಈಗ ಮನೆಗೆ ಹೋಗುವ ಸ್ಥಿತಿಯಲ್ಲಿಲ್ಲವಲ್ಲ!" ಎಂದರು.

ಗುಂಡಣ್ಣ ಮನಸ್ಸು ಗಟ್ಟಿಮಾಡಿಕೊಂಡು

"ಮೂರ್ತಿ ಬದುಕುವ ಸಂಭವವಿದೆಯೇ ಡಾಕ್ಟರೇ" ಎಂದು ಕೇಳಿದ.

ಡಾಕ್ಟರು ಮೀನಾಮೇಷ ಎಣಿಸಿ

"ನೀವು ಅವರಿಗೇನಾಗಬೇಕು" ಎಂದು ಕೇಳಿದರು.

"ಗೆಳೆಯ."

"ಇನ್ನೊಬ್ಬರು ?"

"ಅವರೂ ಮಿತ್ರರು-ಜತೆಗೆ ಮೂರ್ತಿಯ ಪ್ರಕಾಶಕರು."

ಡಾಕ್ಟರ ಕಣ್ಣುಗಳು ತೇವಗೊಂಡವು.

ಗದ್ಗದ ಕಂಠದಿಂದವರು

"There is no hope Sir (ಯಾವ ಆಸೆಯೂ ಉಳಿದಿಲ್ಲ ಸರ್)" ಎಂದರು.

ಜ್ಞಾನತಪ್ಪಿ ಕೆಳಗೆ ಬೀಳುವುದರಲ್ಲಿದ್ದ ಗುಂಡಣ್ಣನನ್ನು ಡಾಕ್ಟರೆ ಹಿಡಿದುಕೊಂಡು, ಕುರ್ಚಿಯಮೇಲೆ ಕೂಡಿಸಿ ಅವನಿಗೆ ಯಾವದೊ ಔಷಧೀ ಕುಡಿಸಿದರು.

"ಇನ್ನು ನಾವು ಮನೆಗೆ ಹೋಗಬಹುದಲ್ಲಾ !"

"ಮೂರ್ತಿಯವರು ಮನೆಗೆ ಹೋಗಲು ಬಯಸುತ್ತಿದ್ದಾರೆಯೆ ?"

"ಹೌದು."

"ಆಗಬಹುದು. ಆ್ಯಂಬುಲೆನ್ಸ್ ಕಾರಿನಲ್ಲಿ ಕರೆದುಕೊಂಡು ಹೋಗಿ" ಎಂದು ಹೇಳಿದರು.

ಮೂರ್ತಿಯನ್ನು ಮನೆಗೆ ಕರೆತಂದು ಹಾಸಿಗೆಯ ಮೇಲೆ ಮಲಗಿಸಿದ ತರುವಾಯ ಲಲಿತಮ್ಮ ಗುಂಡಣ್ಣನನ್ನು ಹೊರಗೆ ಕರೆದು

"ಡಾಕ್ಟರು ಏನು ಹೇಳಿದರು" ಎಂದಳು.

"ಗುಣವಾಗುತ್ತದೆ—ಆದರೆ ಬಹಳದಿನ ಹಿಡಿಯುತ್ತದೆ" ಎಂದರು.

"ಗುಂಡಣ್ಣ...."

"ಅಕ್ಕ...."

"ನೀವು ನನಗೆ ಸುಳ್ಳುಹೇಳುತ್ತಿಲ್ಲವೇ ?"

"ಸುಳ್ಳೇಕೆ ಹೇಳಲಿ."

"ನನ್ನ ಸ್ವಾಮಿ...."

"ಅಧೀರರಾಗಬೇಡಿ ಲಲಿತಕ್ಕ"

ಎಂದು ಹೇಳುವಾಗ ಗುಂಡಣ್ಣನ ಸ್ವರ ಕಂಪಿಸುತ್ತಿತ್ತು.

ಡಾಕ್ಟರು ಪ್ರತಿನಿತ್ಯ ಬೆಳಗ್ಗೆ, ಸಂಜೆ ಬಂದು ಮೂರ್ತಿಯನ್ನು ನೋಡಿಕೊಂಡು ಹೋಗುತ್ತಿದ್ದರು.

ಕ್ಷಣಗಳು ಯುಗಗಳಾದವು.

ಮೂರ್ತಿಯ ಜೀವನಕ್ಕೆ ಹೊಂದಿಕೊಂಡಿದ್ದ ನಾಲ್ಕುಜೀವಗಳು ಒಂದೇ ಸಮನೆ ಪರಿತಪಿಸುತ್ತಿದ್ದವು.

ಐದನೆಯ ದಿನ ಮೂರ್ತಿ ಕ್ಷೀಣಸ್ವರದಲ್ಲಿ

"ನನ್ನ ಮೇಥಾ—ಆಯಿ—ದಾದಾ—ವೀಣಾ–ಸರ್ದಾರ್" ಎಂದ.

ಸಮೀಪದಲ್ಲಿಯೇ ಇದ್ದ ಗುಂಡಣ್ಣ

"ಎಲ್ಲರನ್ನು ನೋಡಲು ಬಯಸುವೆಯಾ ಮೂರ್ತಿ ?"

"ಮೇಥನಿಗೆ ವೈರ್‌ಮಾಡು ಗುಂಡಾ."

"ಟ್ರಂಕ್‌ಕಾಲ್ (Trunk call) ತೆಗೆದುಕೊಂಡು ಮಾತನಾಡುತ್ತೇನೆ."

ಲಲಿತಮ್ಮನ ದುಃಖಪಾತ್ರೆ ತುಳುಕದಂತೆ ತುಂಬಿತ್ತು,

ಮೂರ್ತಿ ಅವಳನ್ನು ಹತ್ತಿರ ಕರೆದು

ಸ್ವೀಟ್........"

"ದೊರೆ....ಮಾತಾಡಬೇಡಿ—ಆಯಾಸವಾಗುತ್ತದೆ."

"ಇವತ್ತು ಮಾತನಾಡಲು ಅವಕಾಶಕೊಡಿ ಮ್ಯಾಡಂ."

ಮೂರ್ತಿಯ ಪರಿಹಾಸ ಕೇಳಿದ ಲಲಿತಮ್ಮ ಮೃದುವಾಗಿ ನಕ್ಕಳು.

"ನನ್ನ ರಾಣಿ ಸದಾ ನಗುತ್ತಿರಬೇಕು.—

'Laugh and the world laughs with you,weep and you weep alone'"

"ನಗಿಸಬೇಡಿ ದೊರೆ.".

"ಅಳಿಸಲೇ ?"

ಲಲಿತಮ್ಮನ ಕಣ್ಣುಗಳಿಂದ ಹನಿಗಳು ತೊಟ್ಟಿಕ್ಕಿದವು.

"ನಾನು ಅಮರ–ಲಲಿತಾ."

"................"

"ನನ್ನ 'ಗೀತಾರ್ಥಸಾರ' ಚಿರಕಾಲ ಉಳಿಯುತ್ತದೆ."

"ನೀವು–ನೀವು ಬೇಕು ನನಗೆ ದೊರೆ."

"ನಿನ್ನನ್ನು ಬಿಟ್ಟು ನಾನೆಲ್ಲಿಗೂ ಹೋಗುವುದಿಲ್ಲಾ ಚಿನ್ನಾ."

"ಸ್ವಾಮಿ ನನ್ನ ಕೈಬಿಡಬೇಡಿ."

"ಭಗವತಿಯ ಕೈ ಭಕ್ತ ಬಿಡುವನೇ ?"

ಟ್ರಂಕ್ ಕಾಲ್ ಮಾಡಿ ಬಂದ ಗುಂಡಣ್ಣ

"ಮೇಥಾ ಸಿಕ್ಕಿದ್ದರು. ನಾಳೆ ಬೆಳಿಗ್ಗೆ ಹೊರಟು ಪ್ಲೇನಿನಲ್ಲಿ ಬರುವರಂತೆ !"

"ಕೇಳಿದೆಯಾ-ನಾಳೆ ಮೇಥಾ ಬರುತ್ತಾನೆ—ನಾಳಿದ್ದು ನೀನೂ ನಾನೂ ಮುಂಬಯಿಗೆ ಹೊರಟು ಬಿಡೋಣ–ಸಂಜೆಗೆ ಸುಂದರಮ್ಮನವರನ್ನೂ ಆಶ್ರಮದ ಮಕ್ಕಳನ್ನೂ ಬರಮಾಡು."

"ಯಾರೊಂದಿಗೂ ಹೆಚ್ಚು ಮಾತಾಡುವುದಿಲ್ಲವೆಂದು ನೀವು ಮಾತು ಕೊಟ್ಟರೆ...."

"ಹಾಗೇ ಆಗಲಿ ಗುರು."

ಸಂಜೆಗೆ ಬಂದ ಸುಂದರಮ್ಮನವರೂ ಮಕ್ಕಳೂ ಮೂರ್ತಿಯನ್ನು ಸುತ್ತುಗಟ್ಟಿದರು. ಸ್ವಲ್ಪಹೊತ್ತು ಅವರೊಂದಿಕೆ ಸರಸವಾಗಿ ಮಾತನಾಡಿ ಮೂರ್ತಿಗೆ,

"ಲಲಿತಾ, ಮಕ್ಕಳಿಗೆ ಏನಾದರೂ ತಿಂಡಿಕೊಡು" ಎಂದ.

ಲಲಿತಮ್ಮ ಎಲ್ಲರನ್ನೂ ಕರೆದುಕೊಂಡು ಹೊರಗೆ ಹೋಗಲು ಮೂರ್ತಿ ಸುಂದರಮ್ಮನವರಿಗೆ

"ತಾಯಿ, ನನ್ನ ಕಾಲ ಮುಗಿಯುತ್ತಿದೆ—ಆಶ್ರಮಕ್ಕೆ ಸಣ್ಣ ಕಾಣಿಕೆಯನ್ನು ಮೀಸಲಾಗಿಟ್ಟಿದ್ದೇನೆ. ಗುಂಡಣ್ಣ ತಂದು ಕೊಡುತ್ತಾನೆ ತೆಗೆದುಕೊಳ್ಳಿ-ಮೊದಲಿನಿಂದಲೂ ಲಲಿತನನ್ನು ತಾಯಿಯಂತೆ ನೋಡಿಕೊಳ್ಳುತ್ತ ಬಂದಿದ್ದೀರಿ-ಮುಂದಕ್ಕೂ...."

"ಆಗಲಿ"

ಎಂದು ಹೇಳುವುದೇ ಸುಂದರಮ್ಮನವರಿಗೆ ಕಷ್ಟವಾಯಿತು.

ಲಲಿತ ಹಿಂದಿರುಗಿದವಳೇ ಮೆಲ್ಲನೆ ಸುಂದರಮ್ಮನವರನ್ನೂ ಆಶ್ರಮವಾಸಿಗಳನ್ನೂ ಕಳಿಸಿಕೊಟ್ಟಳು.

ರಾತ್ರಿ ಕಳೆಯಿತು !

ಬೆಳಗಾಯಿತು !

ಮೂರ್ತಿ ಕಣ್ಣು ಬಿಟ್ಟವನೇ

"ಲಲಿತಾ—ಇವತ್ತು ಯಾವ ವಾರ ?" ಎಂದು ಕೇಳಿದ.

"ಗುರುವಾರ."

"ಮೇಥಾ, ಸೆಲೀನ್ ಬರುತ್ತಾರೆ. ನನಗೆ ಸ್ನಾನ ಮಾಡಿಸು."

"ಬೇಡಿ—ಇವತ್ತೇಕೆ ಸ್ನಾನ."

"ಹಾಗನ್ನಬೇಡ—ಲಲಿತಾ, ನನ್ನ ಮೇಥಾ ಕಲಾತಪಸ್ವಿ; ಸೌಂದರ್ಯೋಪಾಸಕರಅವನ ಮುಂದೆ ನಾನು ಕೊಳಕುಕೊಳಕಾಗಿರಬಾರದು. ಅಗಸನ ಮನೆಯಿಂದ ನನ್ನ ಸಿಲ್ಕ್ ಜುಬ್ಬ ಬಂದಿದೆಯೇ ?"

"ಬಂದಿದೆ."

"ಅದನ್ನೇ ತೊಡಿಸು."

"ಹಾಗೇ ಆಗಲಿ."

"ಗುಂಡಾ ವಿಶ್ವೇಶ್ವರಯ್ಯ ಏರ್‌ಪೋರ್ಟಿಗೆ (Air port) ಹೋದರೇ ?"

"ಹೋದರು."

"ಮನೆಯಲ್ಲಿ ಟೀಪುಡಿ ಇದೆಯೇ ?"

"ಇಲ್ಲ—ತರಿಸುತ್ತೇನೆ."

"ಲಿಪ್ಟನ್ ರೆಡ್‌ಲೇಬಲ್ ತರಿಸು."

ಮೂರ್ತಿಯ ಇಚ್ಛೆಯಂತೆ ಅವನಿಗೆ ಸ್ನಾನಮಾಡಿಸಿ, ಶುಭ್ರವಸ್ತ್ರಗಳನ್ನು ತೊಡಿಸಿ ಲಲಿತಾ ಮಲಗಿಸಿದಳು.

"ನೀನೂ ಸ್ನಾನ, ಪೂಜೆ ಮುಗಿಸಿಕೊಂಡು ಬಾ."

"ನನಗೇನು ಅವಸರ."

"ನಿದ್ದೆ ಬರುವಂತಿದೆ. ನೀನು ಸ್ನಾನಮಾಡಿ ಬರುವಲ್ಲಿ ನಾನು ಒಂದು ನಿದ್ರೆ ಮುಗಿಸುತ್ತೇನೆ."

"ಹಾಗಾದರೆ ಹೋಗುತ್ತೇನೆ."

"ತಲೆತುಂಬ ಹೂ ಮುಡಿದುಕೋ—ಇಂದು ಗುರುವಾರ !"

ಲಲಿತಮ್ಮ ಹೋದಮೇಲೆ ಮೂರ್ತಿ ತನ್ನಷ್ಟಕ್ಕೇ

"ಗುರುವಾರ !

**ಮಾತೃದೇವೋಭವ !**
**ಪಿತೃದೇವೋಭವ !**
**ಆಚಾರ್ಯದೇವೋಭವ !"**

ವಿವೇಕಾನಂದ—ರವೀಂದ್ರ—ಅರವಿಂದ—ರಾಘವೇಂದ್ರಸ್ವಾಮಿಗಳು – ಲಕ್ಷ್ಮಮ್ಮ—ಚಂದ್ರಶೇಖರ ಭಾರತಿಗಳು—ಗುಂಡಾಭಟ್ಟರು ಎಲ್ಲರನ್ನೂ ಸ್ಮರಿಸಿಕೊಂಡು ಹೃದಯದಲ್ಲಿಯೇ ಅವರಿಗೆ ಅಡಿಗಡಿಗೆ ನಮಿಸಿದ.

ಮನೆಯ ಮುಂದೆ ಕಾರುಗಳ ಶಬ್ದವಾಗಲು ಲಲಿತಮ್ಮ ಹೋಗಿ ಬಾಗಿಲು ತೆಗೆದು ಅತಿಥಿಗಳನ್ನು ಸ್ವಾಗತಿಸಿದಳು.

ಮೇಥಾ, ಸೆಲೀನ್, ಸರ್ದಾರ್, ನಿರ್ಮಲಾ, ದಾವ್ಲೆ, ದಸ್ತೂರ್, ನಾನಾ ಒಳಗೆ ಧಾವಿಸಿ ಬಂದರು.

ಮೇಥಾ ಮೂರ್ತಿಯನ್ನಪ್ಪಿ ಅವನ ಪಕ್ಕದಲ್ಲಿ ಕುಳಿತ. ಉಳಿದವರು ಇಬ್ಬದಿಗಳಲ್ಲಿ ನಿಂತರು.

"ಎಲ್ಲರೂ ಬಂದಿರಲ್ಲಾ ! ದಾದಾ, ಆಯಿ ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೆಯೆ ?"

"ಚೆನ್ನಾಗಿದ್ದಾರೆ"

ಎಂದು ಸರ್ದಾರ್ ಉತ್ತರಿಸಿದ.

"ಲಲಿತಾ, ಎಲ್ಲರಿಗೂ ಚಹಾ ಕೊಡು—ಪ್ಲೇನಿನಿಂದ ನೇರವಾಗಿ ಇಲ್ಲಿಗೇ ಬಂದಂತೆ ಕಾಣುತ್ತದೆ."

"ಹೌದು."

"ಏಕೆ ಅಳುತ್ತಿರುವೆ—ನನ್ನ ಮೇಥಾ."

"ಪ್ರಸಾದ್....ಪ್ರಸಾದ್‌ಭಾಯ್...."

"ತಾಯಿ ಸೆಲೀನ್-ನಿರ್ಮಲಾ, ಲಲಿತನನ್ನು ನಿಮ್ಮ ಕೈಯಲ್ಲಿಡುತ್ತಿದ್ದೇನೆ—ಮೇಥಾ, ನಿನ್ನ ಚಿತ್ರಗೀತಾ ಬರುವವರೆಗೂ ನಾನಿದ್ದರೆ ಚೆನ್ನಾಗಿತ್ತು."

"ಹೀಗೇಕೆ ಮಾತನಾಡುತ್ತೀ ಪ್ರಸಾದ್ ?"

ಮೂರ್ತಿ ಎಲ್ಲರ ಸುತ್ತ ದೃಷ್ಟಿಬೀರಿ

"ನನ್ನ ಆಸೆ ವಿಫಲವಾಗಲಿಲ್ಲ" ಎಂದ.

"ಏನು ಆಶಿಸಿದ್ದೆ ಪ್ರಸಾದ್"

"ಮೇಥಾ, ನಿನ್ನ ಜತೆ ಒಂದುದಿನ ಮಾತನಾಡುತ್ತಾ ನಾನು ರೋಮನನಂತೆ (Roman) ಸಾಯಬೇಕೆಂದು ಬಯಸಿದ್ದೆ,-ನನ್ನ ಬಯಕೆ ಸಫಲವಾಯಿತು. ಇನ್ನು ನಾನು ಸಂತೋಷವಾಗಿ ತಾಯಿಯ ಮನೆಗೆ ತೆರಳಬಹುದು."

ಲಲಿತಮ್ಮ ಎಲ್ಲರಗೂ ಚಹಾ ತಂದಿತ್ತಳು.

ಚಹಾ ಪಾತ್ರೆಗಳನ್ನು ಕೈಯಲ್ಲಿ ಹಿಡಿದು ಸಾಲಭಂಜಿಕೆಗಳಂತೆ ನಿಂತಿದ್ದ ತನ್ನ ಗೆಳೆಯರ ಬಳಗ ನೋಡಿ

"ತೆಗೆದುಕೊಳ್ಳಿ-ಆರಿದ ಚಹಾ ಕುಡಿಯಲಾಗುವುದಿಲ್ಲ" ಎಂದ.

ಎಲ್ಲರೂ ಚಹಾ ಕುಡಿದು ಪಾತ್ರೆ ಕೆಳಗಿಟ್ಟರು.

ಮೂರ್ತಿ ಲಲಿತಮ್ಮನನ್ನು ಕರೆದು ಹತ್ತಿರ ಕೂಡಿಸಿಕೊಂಡು

"ನಾನೆಂಥಾ ಶ್ರೀಮಂತ-ನೋಡಿದೆಯಾ ಸ್ವೀಟ್ ? ನನಗೆ ಮೈಯಲ್ಲಿ ನೆಟ್ಟಗಿಲ್ಲವೆಂದು ತಿಳಿದೊಡನೆಯೇ ನನ್ನ ಬಳಗ ಹೇಗೆ ಹಾರಿ ಬಂದಿದೆ-ಎಲ್ಲಿ ನನ್ನ ಗುಂಡ ಎಲ್ಲಿ ?-ವಿಶ್ವೇಶ್ವರಯ್ಯಾ...."

ಇಬ್ಬರೂ ಬಂದು ಸಮೀಪದಲ್ಲಿ ನಿಂತರು.

"ಮೇಥಾ, ದಸ್ತೂರ್, ನಾನಾ, ದಾವ್ಲೆ, ಸೆಲೀನ್ ನೀವು ಗುಂಡಣ್ಣ, ವಿಶ್ವೇಶ್ವರಯ್ಯನವರ ಪರಿಚಯ ಮಾಡಿಕೊಳ್ಳಿ. ನನ್ನ ಸಂಸಾರ ಯಾವಾಗಲೂ ಒಟ್ಟಗಿರಬೇಕು–ದಾವ್ಲೆ, ನೀನು ಪುನಃ ನಾನಾ, ದಸ್ತೂರ್ ಜತೆ ಜಗಳ ಕಾಯಲಿಲ್ಲವಷ್ಟೆ !"

"ಇಲ್ಲ ಅಣ್ಣಾ ಸಾಹೇಬ್."

ಮೂರ್ತಿ ಧ್ವನಿ ತೀರಾ ಕುಗ್ಗಿತು.

"ಲಲಿತಾ...."

"ದೊರೆ...."

"ಹತ್ತಿರ ಬಂದು ಸರಿಯಾಗಿ ಕುಳಿತುಕೋ. ನಿನ್ನ ತೊಡೆಯಮೇಲೆ ಮಲಗುತ್ತೇನೆ. ನಾಚಬೇಡ—ಇಲ್ಲಿ ಯಾರೂ ಹೊರಗಿನವರಿಲ್ಲ."

ಲಲಿತಮ್ಮ ಪದ್ಮಾಸನದಲ್ಲಿ ಕುಳಿತು ಮೆಲ್ಲನೆ ಮೂರ್ತಿಯ ತಲೆಯನ್ನೆತ್ತಿ ತನ್ನ ತೊಡೆಯ ಮೇಲಿಟ್ಟುಕೊಂಡಳು.

ಮೂರ್ತಿ ಕ್ಷಣಕಾಲ ಕಣ್ಮುಚ್ಚಿದ.

ಕೋಣೆಯಲ್ಲಿ ನೀರವ-ಶಾಂತಿ

ಮೂರ್ತಿಯ ಮುಖದ ಮೇಲೆ ಶಿಶುಸದೃಶ ಮಂದಹಾಸ ಮಿನುಗಿತು—ಒಮ್ಮೆ ಕಣ್ಣುಬಿಟ್ಟು ಎಲ್ಲರನ್ನೂ ನೋಡಿ ನೋಡಿ ತನ್ನ ಕಣ್ಣು—ಮನಸ್ಸು ತುಂಬಿಕೊಂಡ.

ಯಾವದೋ ಮಹಾಶಕ್ತಿಗಧೀನನಾಗಿ ಮತ್ತೆ ಕಣ್ಣುಮುಚ್ಚಿದ.

ಮುಚ್ಚಿದ ಕಣ್ಣುಗಳನ್ನು ಅವನು ಮತ್ತೆ ತೆಗೆಯಲಿಲ್ಲ.

---

ತಿದ್ದುಪಡಿ

ಪುಟಸಂಖ್ಯೆ ೧೯೩ರ ತರುವಾಯ ೧೯೭ ಎಂದು ಅಚ್ಚಾಗಿದೆ. ಪುಟಸಂಖ್ಯೆಯಲ್ಲಿ ಹೆಚ್ಚುಕಡಿಮೆಯಾಗಿದ್ದರೂ ಕಥಾಸರಣಿಯಲ್ಲಿ ವ್ಯತ್ಯಾಸವಾಗಿಲ್ಲ.

# ಸ್ಟ್ಯಾಂಡರ್ಡ್ ಬುಕ್ ಡಿಪೋ

## ಬೆಂಗಳೂರು–2.

### ಅ. ನ. ಕೃಷ್ಣರಾಯರ ಇತರ ಗ್ರಂಥಗಳು :

| | | |
|---|---|---|
| ಅನುಗ್ರಹ | .... | 1–8–0 |
| ಆಶೀರ್ವಾದ * | .... | 1–8–0 |
| ಗಾಜಿನಮನೆ * | .... | 1–8–0 |
| ಸಾಹಿತ್ಯರತ್ನ | .... | 1–8–0 |
| ಮಂಗಳಸೂತ್ರ | .... | 1–8–0 |
| ಅರುಳು ಮರುಳು | .... | 2–0–0 |
| ಚಿತ್ರ ವಿಚಿತ್ರ | .... | 2–8–0 |
| ಶ್ರೀಮತಿ | .... | 2-12-0 |
| ಅಮರ ಆಗಸ್ಟ್ | .... | 1–4–0 |
| ಜೀವನಯಾತ್ರೆ | .... | 1–4–0 |
| ಅಗ್ನಿಕನ್ಯೆ | .... | 1–4–0 |
| ಮಿಂಚು | .... | 1–0–0 |
| ಕಿಡಿ | .... | 1–0–0 |
| ಶಿಲ್ಪಿ | .... | 1–0–0 |
| ಸ್ವರ್ಣಮೂರ್ತಿ | .... | 0-12-0 |
| ರಜಪೂತಲಕ್ಷ್ಮಿ | .... | 1–4–0 |
| ಮದುವೆಯೋ ಮನೆಹಾಳೋ | .... | 1–0–0 |
| ಕಿತ್ತೂರ ರಾಣಿ ಚನ್ನಮ್ಮ | .... | 0–8–0 |
| ಕನ್ನಡಸಾಹಿತ್ಯ ಮತ್ತು ಸಂಸ್ಕೃತಿ | .... | 1–8–0 |
| ಸಾಹಿತ್ಯ ಮತ್ತು ಯುಗಧರ್ಮ | .... | 2–0–0 |
| ಕನ್ನಡ ಕುಲರಸಿಕರು | .... | 2–8–0 |
| ಕರ್ನಾಟಕದ ಕಲಾವಿದರು | .... | 3–0–0 |

* ಪ್ರತಿಗಳು ತೀರಿವೆ.

# ದೀಪಾರಾಧನೆ

## ಅ. ನ. ಕೃ

'ಸಾಹಿತ್ಯರತ್ನ'ದಲ್ಲಿ ಆರಂಭವಾದ ಕಥೆ **'ದೀಪಾರಾಧನೆ'**ಯಲ್ಲಿ ಕೊನೆಗಂಡಿದೆ. ಜೀವನದ ನಾನಾ ಉಬ್ಬರವಿಳಿತಗಳಿಗೆ ಸಿಲುಕಿದ ಮೂರ್ತಿ ಧೃತಿಗೆಡದೆ ತನ್ನ ಸಾಹಿತ್ಯೋಪಾಸನೆಯನ್ನು ಮುಂದುವರಿಸಿದ ಬಗೆ ಈ ಕಾದಂಬರಿಯಲ್ಲಿ ಮನೋಜ್ಞವಾಗಿ ನಿರೂಪಿತವಾಗಿದೆ. ಮೂರ್ತಿ–ಲಲಿತಮ್ಮ ಇವರ ದಾಂಪತ್ಯಜೀವನದ ಮಧುರಚಿತ್ರಗಳು ಓದುಗರಿಗೆ ನಿರ್ಮಲಾನಂದವನ್ನು ಒದಗಿಸುತ್ತವೆ. ಕನ್ನಡ ತಪಸ್ವಿಯಾದ ಮೂರ್ತಿಯ ಆತ್ಮೋತ್ಕ್ರಾಂತಿಯನ್ನು ಸೂಕ್ಷ್ಮವಾಗಿ ವಿವರಿಸುವ ಲೇಖಕರು ಈ ಮೂರುವರೆ ದಶಕಗಳ ಕನ್ನಡ ಸಾರಸ್ವತ ಪ್ರಪಂಚದ ಇತಿಹಾಸ, ಭಾವಪ್ರಭಾವಗಳು, ಪ್ರಗತಿ ದುರ್ಗತಿಗಳನ್ನು ನಿರ್ಭೀತಿಯಿಂದ ಹೊರಗೆಡವಿದ್ದಾರೆ.

**'ದೀಪಾರಾಧನೆ'** ಕಾದಂಬರಿ **ಅ. ನ. ಕೃ** ಅವರ ಕೃತಿರತ್ನಗಳಲ್ಲಿ ಒಂದಾಗಿ ಓದುಗರ ಕೈಸೇರುವುದಲ್ಲದೆ, ಅವರ ಸಾಹಿತ್ಯತಪಸ್ಸಿನ ದ್ಯೋತಕವಾಗಿ ಕನ್ನಡಸಾಹಿತ್ಯದಲ್ಲಿ ಅಮರಸ್ಥಾನಗಳಿಸುವುದೆಂಬ ಭರವಸೆ ನಮಗಿದೆ. ರಸಪೂರ್ಣವೂ, ಶುಚಿಯೂ, ವಿಚಾರಪ್ರಚೋದಕವೂ ಆದ ಸಾಹಿತ್ಯ ಬಯಸುವವರು ಒಮ್ಮೆಯಲ್ಲ–ಹತ್ತುಬಾರಿ ಓದಬೇಕಾದ ಗ್ರಂಥ **'ದೀಪಾರಾಧನೆ.'**

**ಅಶೋಕ ಸಾಹಿತ್ಯ, ಬೆಂಗಳೂರು-2**

ಮಾರಾಟದ ಪೂರ್ಣ ಹಕ್ಕುದಾರರು;
**ಸ್ಟ್ಯಾಂಡರ್ಡ್ ಬುಕ್ ಡಿಪೋ**
ಅವೆನ್ಯೂರೋಡ್, ಬೆಂಗಳೂರು–2